# ಕನ್ಯಾದಾನ

ಕಾದಂಬರಿ

ಎಸ್. ವಿ. ಶ್ರೀನಿವಾಸರಾವ್




ಸುದರ್ಶನ ಪ್ರಕಾಶನ
ತಾರಾನಿವಾಸ : : ತಿಪಟೂರು.

ಸುದರ್ಶನ ಪ್ರಕಟನೆ: ಎಂಭತ್ತೇಳು
ಸುದರ್ಶನ ಕಾದಂಬರಿ: ಅರವತ್ತ ಒಂದು

ಪ್ರಥಮ ಮುದ್ರಣ ೧೯೬೦

ಮುಖಚಿತ್ರ: ಸು. ಲ. ನಾರಾಯಣ.

ಬೆಲೆ: ರೂ. ೨-೫೦

ಮುದ್ರಕರು
ಶ್ರೀ ಸೀತಾರಾಘವ ಪ್ರೆಸ್
ರಾಮಸ್ವಾಮಿ ಸರ್ಕಲ್, ಮೈಸೂರು.

# ೧

ವೆಂಕಟರಾಯರ ಮನೆಯ ಮುಂದೆ ಮಂಗಳ ವಾದ್ಯ ಮೊಳಗುತ್ತಿತ್ತು. ೀನೆ ಸುಬ್ಬಣ್ಣ ಕೈಯಲ್ಲಿ ಚೀಲ ಹಿಡಿದು ಇವರ ಮನೆಗೆಂದೇ ಬರುತ್ತಿದ್ದ. ದೂರದಲ್ಲೇ ವಾದ್ಯದ ಶಬ್ದ ಕೇಳಿ ಕಾತರಿಸುತ್ತಿದ್ದ ಸುಬ್ಬಣ್ಣನ ಮನಸ್ಸು ವೆಂಕಟರಾಯರ ಮನೆಯ ಮುಂದೆ ಮೇಳದವರನ್ನು ಕಂಡು ಉತ್ಸಾಹ ಮಿಡಿಯಿತು. ಮುದಿಕಣ್ಣು ಅರಳಿ ಬಾಯಿ ಬಿರಿಯಿತು. ಬಾಗಿಲಿಗೆ ಹಸರು ತೋರಣ ಕಟ್ಟಿ ಅಲ್ಲಲ್ಲಿ ಬಣ್ಣದ ಜೆಲ್ಲೂರ್ ಇಳಿಬಿಟ್ಟಿದ್ದರು. ಆ ಬೆಳಗಿನಲ್ಲೂ ಉರಿಯಲೆಂದು ಬಲ್ಬುಗಳನ್ನು ಅಲಂಕರಿಸಿದ್ದರು. ಅನೇಕ ಹುಡುಗರು ಮನೆಯ ಮುಂದುಗಡೆ ಆಟವಾಡುತ್ತಿದ್ದರು.

"ತಾತ ಬಂದ....! ತಾತ ಬಂದ....!" ಒಬ್ಬ ಹುಡುಗ ಕುಣಿದಾಡಿದ.

"ತಾತಂಗೆ ಹಲ್ಲೇ ಇಲ್ಲ....!" ಇನ್ನೊಬ್ಬ ನಗೆಯಾಡಿದ.

"ತಾತ ನಿಂಗೆ ಏಕೆ ಮೀಸೆ ಬಿಳಿ....?" ಒಂದು ಚಿಕ್ಕ ಹೆಣ್ಣು ಹುಡುಗಿ ಆತನ ಕೈಯಲ್ಲಿದ್ದ ದೊಣ್ಣೆಯನ್ನು ಕಿತ್ತುಕೊಳ್ಳುತ್ತ ಪ್ರಶ್ನಿಸಿದಳು. ಎಲ್ಲಕ್ಕೂ ಉತ್ತರವಾಗಿ ಸುಬ್ಬಣ್ಣ ತನ್ನ ಬೊಚ್ಚು ಬಾಯನ್ನು ಅಗಲಿಸಿ ಮೀಸೆಯ ಮರೆಯಲ್ಲಿ ನಕ್ಕ.

ಸಾವಿತ್ರಮ್ಮ ಏನೋ ಕೆಲಸದಿಂದ ಹೊರಗೆ ಬಂದರು.

"ಏನು....? ಸಾವಿತ್ರಮ್ಮ ಚೆನ್ನಾಗಿದ್ದೀಯಾ....?" ಸುಬ್ಬಣ್ಣ ಮನೆಯನ್ನು ಪ್ರವೇಶಿಸುತ್ತ ಪ್ರಶ್ನಿಸಿದ.

"ಓಹೊಹೊ....! ಸುಬ್ಬಣ್ಣನೊ...! ಏನು ಬಾಳ ದಿವ್ಸದಿಂದ ಕಾಣ್ಲೆ ಇಲ್ವಲ್ಲ....? ಎಲ್ಲಿಂದ ಈಗ ಸವಾರಿ....ಗೂಳೂರಿನಿಂದಲೊ ಅಥವ ಬೆಟ್ಟದ ಹಳ್ಳಿ ಇಂದಲೊ....? ಅಥವ ಇನ್ನೆಲ್ಲಿಗಾದ್ರೂ ಹೋಗಿದ್ಯೊ...?" ನಗುತ್ತ ಪ್ರಶ್ನಿಸಿದರು.

"ಬೆಂಗಳೂರಿಗೆ ಹೋಗಿದ್ದೆ. ಹಾಗೆ ನಿಮ್ಮನೆಗೆ ಹೋಗಿ ನಿಮ್ಮನ್ನ ನೋಡಿಕೊಂಡು ಹೋಗೋಣಾ ಅನ್ನಿಸ್ತು. ರೈಲು ಇಳ್ದು ಹಾಗೆ ಬಂದು ಬಿಟ್ಟೆ. ಬಾಳದಿನ ಆಗಿತ್ತು ಇಲ್ಲಿಗೆ ಬಂದು. ಏನ ಸಮಾಚಾರ ಸಾವಿತ್ರಮ್ಮ....? ಏನು ಹಸಿರು ತೋರಣ....! ಓಲಗ....! ಮನೆ ಮುಂದೆಲ್ಲಾ ಇಷ್ಟೊಂದು ಅಲಂಕಾರ....!....ಏನು, ಸೀತಮ್ಮ ಹೆತ್ತಳೇನು....? ಹಾಗೆ ಕಾಣುತ್ತೆ" ನುಡಿದು ತನ್ನ ಮಂಜಾದ ದೃಷ್ಟಿಯನ್ನು [illegible] ಒಳಗೆ ಹರಿಸಿದ.

"ಹ್ಞಾ ....! ಸುಬ್ಬಣ್ಣ....ನಾನು ನೋಡು ಮಾತ್ನಾಡ್ತಾ ನಿಂತು ಬಿಟ್ಟೆ. ಶುಭಸಮಾಚಾರಾನೇ ಹೇಳ್ಲಿಲ್ಲ. ಹೆಣ್ಣುಮಗು, ಇವತ್ತು ನಾಮ ಕರಣ" ಸಾವಿತ್ರಮ್ಮನ ಕಣ್ಣಿನಲ್ಲಿ ಸಂತೋಷ ತುಳಕುತ್ತಿತ್ತು. "ಒಳ್ಳೆ ಹೊತ್ತಿಗೆ ಬಂದೆ....ಬಾ....ಬಾ....ಒಳಗೆ ಹೋಗೋಣಾ....ನಿಧಾನವಾಗಿ ಮಾತ್ನಾಡೋಣಾ....ಏಕೆ ಸ್ವಲ್ಪ ಮೆತ್ತಗಾಗಿ ಹೋಗಿದ್ದೀಯಲ್ಲ" ಅವನ ಸುಕ್ಕು ಮುಖವನ್ನು ಕಣ್ಣನ್ನು ಅಗಲಿಸಿ ಹುಬ್ಬಿನ ಮೇಲೆ ಕೈಯನ್ನು ಇಟ್ಟು ಕೊಂಡು ನೋಡಿ ನುಡಿದರು.

"ನಾನೂ ಹಾಗೇ ಅಂದಿದ್ದೆ. ನನ್ನೂಹೆ ನಿಜವಾಯ್ತಲ್ಲ....ಚೆನ್ನಾಗಿದ್ಯಾ ಮಗು....ಸಕ್ಕರೆ ಒಂದು ವೀಸೆ ಕೊಟ್ಟುಬಿಡಮ್ಮ ಮೊಮ್ಮಗಳನ್ನು ಕಂಡಿದ್ದಕ್ಕೆ ...ಮನೆ ಮುಂದೆ ಮೇಳದವರನ್ನ ಕಂಡಕೂಡ್ಲೆ ನಂಗೆ ಹೀಗೇ ಇರ್ಬೇಕು ಅನ್ನಿಸ್ತು ನೋಡಿದೆಯಾ ಸಾವಿತ್ರಮ್ಮ ೬೦ ವರ್ಷ ಆದ್ರೂ ನನ್ನ ಊಹಾ ಶಕ್ತೀನಾ...?" ಸುಬ್ಬಣ್ಣ ಬಹು ಸಂತೋಷಗೊಂಡಿದ್ದ.

"ಬಿಡಪ್ಪ ನಿಂಗೆ ಹೇಳ್ಬೇಕೆ ಇವೆಲ್ಲಾ....ಇಂಥೋದು ಎಷ್ಟು ಸಾವಿರ ನೋಡಿದ್ದೀಯೊ....ಈ ನಿನ್ನ ವಯಸ್ಸಿಗೆ. ಹುಣಸೇಮರ ಮುದಿಯಾದ್ರೂ ಹುಳಿ ಎಲ್ಲಿ ಹೋಗುತ್ತೆ? ಹೋಗ್ಲಿ....ಒಳಗೆ ಬಾ ಮೊದ್ಲು. ಬಾಗ್ಲಲ್ಲೆ ನಿಂತಿದ್ದೀಯಲ್ಲ....ನೀನು ತಿನ್ನೋವಷ್ಟು ಸಕ್ಕರೆ ಕೊಡ್ತೀನಿ....ಬಾ....ಬಾ" ಸಾವಿತ್ರಮ್ಮ ನಕ್ಕರು. "ಅಹ್ಹಹಾ....!" ಸುಬ್ಬಣ್ಣನೂ ಅಗಲವಾಗಿ ಬಾಯಿ ತೆರೆದು ನಕ್ಕುಬಿಟ್ಟ. ಸುಬ್ಬಣ್ಣ ಸಾವಿತ್ರಮ್ಮನನ್ನು ಹಿಂಬಾಲಿಸಿದ. ಅಂಗಳವನ್ನು ದಾಟಿ ಹಾಲಿಗೆ ಬಂದರು. "ಕೂತ್ಕೊ ಸುಬ್ಬಣ್ಣ ಒಂದು ನಿಮಿಷ...." ಸಾವಿತ್ರಮ್ಮ ಒಳಗೆ ಹೊರಟುಹೋದರು.

ವೆಂಕಟರಾಯರು, ಸೀತಮ್ಮ ಹಸೆಯ ಮೇಲೆ ಕುಳಿತಿದ್ದರು. ಸೀತ ಮ್ಮನ ತೊಡೆಯಮೇಲೆ ಮಗು ನಿದ್ರಿಸುತ್ತಿತ್ತು.

"ಬಾ...ಬಾ....ಸುಬ್ಬಣ್ಣ ಒಳ್ಳೆ ಸಮಯಕ್ಕೆ ಸರಿಯಾಗಿ ಬಂದೆ....ಬಾ ....ಕೂತ್ಕೊಬಾ...." ವೆಂಕಟರಾಯರು ಅವನನ್ನು ಕಂಡೊಡನೆಯೇ ಸ್ವಾಗತಿ ಸಿದರು.

"ಒಳ್ಳೆ ಹೇಳಿಕಳ್ಸಿದ್ಹಾಗೆ ಬಂದೆ....ತುಂಬಾ ಸಂತೋಷ ಆಯ್ತು ಈಗ ನನ್ನ ಮನಸ್ಸಿಗೆ...." ಸೀತಮ್ಮನ ಮುಖದಲ್ಲಿ ಹುಸಿನಗೆ ಹೊರಹೊಮ್ಮಿ ಕಣ್ಣು ಅರಳಿ ಹೃದಯದ ಸಂತೋಷವನ್ನು ವ್ಯಕ್ತಗೊಳಿಸಿತು.

"ಬರ್ದಿ ಇದ್ರೆ ಆಗುತ್ತೇನಮ್ಮ....ಸೀತಮ್ಮ....ನಿನ್ನ ಮಗ್ಳ ಕೈಲಿ ವೀಸೆ ಕೇಳ್ಸಿಕೊಳ್ಳಬೇಡ್ವೆ....?" ಸುಬ್ಬಣ್ಣ ಹೇಳಿ ತಾನೇ ಗಟ್ಟಿಯಾಗಿ ನಕ್ಕುಬಿಟ್ಟ.

ಆದರೆ ಬಾಯಿ ತೆರದಾಗ ಎದುರಿನ ಅಗ್ನಿಯಿಂದ ಬರುತ್ತಿದ್ದ ಹೊಗೆ ಒಮ್ಮೆಗೆ ಗಂಟಲೊಳಗೆ ನುಗ್ಗಿತು. ಕೆಮ್ಮು ಒತ್ತರಿಸಿಬಂತು. ನಗುವಿನ ಅಂತ್ಯವೇ ಕೆಮ್ಮಾಗಿತ್ತು. ಸುಬ್ಬಣ್ಣನ ಕಣ್ಣಲ್ಲಿ ನೀರು ಬಂತು. ಮುದಿಮುಖದಲ್ಲಿ ಮತ್ತಷ್ಟು ಗೆರೆಗಳು ಮೂಡಿ ಬಟ್ಟೆಯಿಂದ ಉಜ್ಜಿಕೊಂಡ ಕಣ್ಣು ಆಗಲೇ ಕೆಂಪಗಾಗಹತ್ತಿತ್ತು. ಒಮ್ಮೆಗೇ ಆದ ಈ ಘಟನೆಯಿಂದ ಸುತ್ತಲೂ ಕುಳಿತ್ತಿದ್ದ ಬಹುಜನ ನಕ್ಕರು. ಸೀತಮ್ಮನೂ ಸೆರಗಿನಿಂದ ಬಾಯನ್ನು ಮುಚ್ಚಿಕೊಂಡು ಒಳಗೇ ನಕ್ಕಳು.

ಸುಬ್ಬಣ್ಣ ಸೀತಮ್ಮನ ತೊಡೆಯ ಮೇಲಿದ್ದ ಮಗುವನ್ನು ದಿಟ್ಟಿಸಿ ನೋಡಿದ. ಮುಖದ ಬಳಿಯಲ್ಲಿದ್ದ ಬಟ್ಟೆಯನ್ನು ಸ್ವಲ್ಪ ಸರಿಸಿ ಬಲಿತ ಕಣ್ಣನ್ನು ಅಗಲಿಸಿ ನೋಡಿದ.

"ಸೀತಮ್ಮ ನಿಜವಾಗಿಯೂ ಹ್ಯಾಗಿದೆ ಅಂತ ಮಗು....! ಅಹಹ.... ಬಾಳ ಚೆನ್ನಾಗಿದೆ....ಬಾಳ ಚೆನ್ನಾಗಿದೆ. ಒಳ್ಳೆ ಗೌರಮ್ಮ ಇದ್ದ ಹಾಗೆ ಇದ್ದಾಳೆ....ಕೈ ತೊಳೆದು ಮುಟ್ಟಬೇಕು. ಇಲ್ಲದ್ರೆ ನಿಜವಾಗ್ಯೂ ಮಾಸಿ ಹೋಗ್ತಾಳೋ ಏನೊ ಅನ್ಸುತ್ತೆ." ಅಲ್ಲೆ ಪಂಚಪಾತ್ರೆಯಲ್ಲಿದ್ದ ನೀರಿನಿಂದ ತನ್ನ ಕೈಯನ್ನು ಸ್ವಲ್ಪ ತೊಳೆದುಕೊಂಡು ಮಗುವಿನ ಹಾಲುಗೆನ್ನೆಯನ್ನು ಮೆಲ್ಲಗೆ ಅದುಮಿದ. ಮಗು ಒಂದು ಬಾರಿ ಬಾಯಿ ಬಿಟ್ಟಿತು.

"ನೋಡು ವೆಂಕಟರಾಯ....ನನ್ನ ನೋಡಿ ನಗುತ್ತೆ....ಲೇ....! ನಗ್ತಿಯೇನೇ ನನ್ನ ಮೀಸೆ ನೋಡಿ....? ಛೀ ಕಳ್ಳಿ" ಎರಡು ಕೈಗಳಿಂದಲೂ ಮಗುವಿನ ಕೆನ್ನೆಯನ್ನು ತಟ್ಟಿದ. ಮಗು ಗಟ್ಟಿಯಾಗಿ ಅಳ ಹತ್ತಿತು.

"ಅಳಬೇಡ್ವೆ....ನನ್ನ ಚಿನ್ನ....ಅಳಬೇಡ....ತಾತಕಣೆ ಅವರು.... ತಾತ....ಅವರ ಮೀಸೆ ಕೀಳ್ತಿಯೇನೆ...." ಸೀತಮ್ಮ ಮಗಳನ್ನು ಎದೆಗೆ ಅವಚಿಕೊಂಡಾಗ ಮಗು ಸುಮ್ಮನಾಯಿತು.

"ನೋಡು ಸೀತಮ್ಮ ನಿನ್ನ ಮಗಳು ಎಂಥ ಗಂಡುಬೀರಿ! ನನ್ನ ಮೀಸೆ ಕೀಳುಅಂತ ಹೇಳತ್ಲೂ ಸುಮ್ನಾದ್ಲಲ್ಲ." ಸುಬ್ಬಣ್ಣ ನುಡಿದಾಗ ಅಲ್ಲಿದ್ದವರೆಲ್ಲಾ ನಕ್ಕರು. ಜೋಯಿಸರು ವೆಂಕಟರಾಯರ ಕೈಗೆ ನೀರನ್ನು ಹಾಕಬೇಕೆಂದು ಹೇಳಿದುದರಿಂದ ಸೀತಮ್ಮ ಸುಬ್ಬಣ್ಣನ ಮಾತಿಗೆ ಉತ್ತರ ಕೊಡದೆ ತನ್ನ ಕೆಲಸದಲ್ಲಿ ತೊಡಗಿದಳು.

"ಬಾ ಸುಬ್ಬಣ್ಣ....ಬಾ....ಒಳಗೆ ಬಾ...." ಅಡಿಗೆ ಮನೆ ಬಾಗಿಲಲ್ಲಿ ನಿಂತು ಸಾವಿತ್ರಮ್ಮ ಕೂಗಿದರು.

"ಯಾಕೆ ಸಾವಿತ್ರಮ್ಮ ಕರೀತಾಳೆ....ಮೊಮ್ಮಗಳ ನಾಮಕರಣ

ಅಂತ ಅದ್ದೂರಿಯಾಗಿ ತಿಂಡಿ ಮಾಡಿರಬೇಕು...." ಸುಬ್ಬಣ್ಣ ಹೇಳಿಕೊಂಡು ಮೇಲಕ್ಕೆ ಎದ್ದ.

"ಹೋಗು....ಸುಬ್ಬಣ್ಣ ಇಲ್ಲಿ ಹೊಗೆ....ಕೈಕಾಲು ತೊಳಕೊಂಡು ಹೋಗು...." ವೆಂಕಟರಾಯರು ನುಡಿದರು.

ಸಾವಿತ್ರಮ್ಮ ಸುಬ್ಬಣ್ಣನನ್ನು ಒಳಗೆ ಕರೆದು ಉಪ್ಪಿಟ್ಟು ಕಾಫಿಯನ್ನು ಕೊಟ್ಟು ಸತ್ಕರಿಸಿದರು. ಊರಿನ ಸಮಾಚಾರವನ್ನೆಲ್ಲಾ ಕೇಳಿದರು. ಅವರ ಸೋದರತ್ತೆ ಮಗಳು ಗಿರಿಜಾಳ ಮದುವೆ ಗೊತ್ತಾಯಿತೆ ಇಲ್ಲವೆ ಪ್ರಶ್ನಿಸಿದರು. ಸುಬ್ಬಣ್ಣನ ಚಿಕ್ಕಪನ ಮಗ ಬಿ. ಎ. ಫೇಲಾದುದಕ್ಕೆ ವ್ಯಸನ ಸೂಚಿಸಿದರು. ತಮ್ಮ ಮೊಮ್ಮಗಳನ್ನು ಹೊಗಳಿ ಕೊಂಡಾಡಿದರು.

ಸುಬ್ಬಣ್ಣ ಉಪ್ಪಿಟ್ಟನ್ನು ತಿಂದು ಕಾಫಿಯ ಲೋಟಾವನ್ನು ಕೈಗೆತ್ತಿಕೊಂಡು ಇನ್ನೂ ಒಂದು ಗುಟಕು ಕುಡಿದಿದ್ದ.

"ಸುಬ್ಬಣ್ಣಾ....ಸುಬ್ಬಣ್ಣಾ...." ಹೊರಗಡೆ ವೆಂಕಟರಾಯರು ಕೂಗಿದರು. ಕೈಯನ್ನು ಅಲ್ಲೆ ತಟ್ಟೆಯಲ್ಲಿ ತೊಳೆದು ಬಾಯನ್ನು ಅಲುಗಾಡಿಸುತ್ತ ಹೊರಗೆ ಬಂದ.

"ಏನು, ನಾಮಕರಣ ಮಾಡೇಬಿಟ್ರಾ....ಏನು ಹೆಸರಿಟ್ರಿ...." ಇದ್ದ ಎರಡು ದವಡೆಯ ಹಲ್ಲಿನ ಮಧ್ಯದಲ್ಲಿ ಸಿಕ್ಕಿದ್ದ ಉಪ್ಪಿಟ್ಟನ್ನು ನಾಲಿಗೆಯಿಂದ ಈಚೆಗೆ ಎಳೆಯುತ್ತ ಪ್ರಶ್ನಿಸಿದ.

"ಅದಕ್ಕೇ ಸುಬ್ಬಣ್ಣ ನಿನ್ನ ಕೂಗಿದ್ದು ಸರಿಯಾದ ಯಾವ್ದಾರೂ ಒಂದು ಹೆಸರ್ನ ಹೇಳು ಅಂತ...." ದೊಡ್ಡೋನು ನೀನು....ಚೆನ್ನಾಗಿರಬೇಕು ಅಂತೋದು ಯೋಚ್ಸಿ ಹೇಳು...." ಸೀತಮ್ಮ ನುಡಿದಳು.

"ಈಗಿನ ಕಾಲಕ್ಕೆ ಹೊಂದಬೇಕು. ಚಿಕ್ಕದಾಗಿರಬೇಕು...." ರಾಯರು ನುಡಿದರು.

"ನಂಗಿಂತ ದೊಡ್ಡೋರು ಸಾವಿತ್ರಮ್ಮನೇ ಹೇಳ್ಬೇಕು...." ಸುಬ್ಬಣ್ಣ ನುಡಿದು ಯೋಚನೆಗೆ ಒಂದು ಕ್ಷಣ ಕಾಲವನ್ನು ಒದಗಿಸಿಕೊಂಡ.

"ಯಾರು ಹೇಳಿದ್ರೇನು, ಹೇಳು ಸುಬ್ಬಣ್ಣ....ಹೆಸರಿಡೊಕ್ಕೆ ದೊಡ್ಡೋರ್‍ಯಾರು....ಚಿಕ್ಕೋರ್‍ಯಾರು ..." ಸಾವಿತ್ರಮ್ಮ ನುಡಿದರು.

"ಕಾವೇರಿ....! ಸಾವಿತ್ರಮ್ಮನ ತಾಯಿ ಹೆಸರು....ಚಿಕ್ಕದಾಗಿಯೂ ಇದೆ...."ಸುಬ್ಬಣ್ಣ ನುಡಿದ.

"ಅಯ್ಯೋ....ಚೆನ್ನಾಗಿಲ್ಲ....ತೀರ ಹಳೇ ಹೆಸರು...." ಸೀತಮ್ಮನ ನಾಲಿಗೆ ನುಡಿದುಬಿಟ್ಟಿತು. ಗಂಡನಿಗೆ, ಅಜ್ಜಿಗೆ ಕೋಪ ಬಂದಿತೇನೋ

ಎಂದು ಅರವನ್ನು ನೋಡಿದಳು. ಅವರ ಮುಖವೂ ಸೌಮ್ಯವಾಗಿ ಅಲ್ಲಾಡು ತ್ತಿದ್ದ ತಲೆ ಬೇಡವೆಂದು ಸೂಚಿಸುತ್ತಿತ್ತು.

"ಇನ್ನೇನಾದ್ರೂ ಹೇಳಪ್ಪ" ಸಾವಿತ್ರಮ್ಮ ನುಡಿದರು.

"ಮೋಹಿನಿ." ಹಿಂದೆ ಕುಳಿತಿದ್ದವರು ಯಾರೊ ಹೆಸರನ್ನು ಸೂಚಿಸಿದರು.

"ಅಯ್ಯೊ ಬೇಡ....ಬೇಡ. ನಮ್ಮ ಮಗು ಯಾರಿಗೂ ಮೋಹಿನಿಯಾಗಿ ಹಿಡಿಬೇಕಾಗಿಲ್ಲ....ಅದೆಲ್ಲಾ ಬೇಡ...ಮೋಹಿನಿ....ಗೀಹಿನಿ ಏನು ಚೆನ್ನಗ್ವೊ....!" ಹಿಂದಿನಿಂದ ಸಾವಿತ್ರಮ್ಮ ಅಸಮಾಧಾನ ಸೂಚಿಸಿದರು. ರಾಯರ ಮುಖವೂ ಅಸಮ್ಮತಿ ಸೂಚಿಸಿತ್ತು.

"ಮೇನಕೆ...." ಪಕ್ಕದಲ್ಲಿ ಕುಳಿತಿದ್ದ ಒಬ್ಬ ಹೆಣ್ಣು ಮಗಳು ನುಡಿದಳು.

"ನಮ್ಮ ಮಗು ಯಾವ ವಿಶ್ವಾಮಿತ್ರನ ತಪಸ್ಸನ್ನೂ ಭಂಗಮಾಡ ಬೇಕಾಗಿಲ್ಲ....ಚೆನ್ನಾಗಿ ಬೆಳೆದ್ರೆ ಸಾಕು. ಯಾರಾದ್ರೂ ಹಿರೀಕ್ರ ಹೆಸರ್ನ ಸುಮ್ನೆ ಇಡಿ....ಹೆಸ್ರಲ್ಲಿ ಚಂದಾ ಏನು ...ಚಾರ ಏನು....ನನ್ನ ತಾಯೀನ 'ಗುಂಡೂ' ಅಂತಿರ್ಲಿಲ್ವೆ....ನಮ್ಮಜ್ಜೀನ 'ತಿಪ್ಪಮ್ಮ' ಅಂತ ಕರೀತಾ ಇರ್ಲಿಲ್ಲೆ....ಅವಳು ಎಲ್ಲರ್ಗ್ಹಾಗೆ ಸಂಸಾರ ಮಾಡಿ ಎಂಟು ಗಂಡು ಮಕ್ಳ ಹಡೀ ಲಿಲ್ವೆ....ಏನೊ ಒಂದಿಡಿ ಗೌರಿ ಅಂತಲೊ....ಪಾರ್ವತಿ ಅಂತಲೊ....ಸರಸೂ ಅಂತ ಇಟ್ಟುಬಿಡಿ" ಸುಬ್ಬಣ್ಣ ನುಡಿದ,

"ಗೌರಿ,....ಗಂಗ....ಕಾವೇರಿ....ಯಾವ, ನದೀ ಹೆಸರೂ ಬೇಡ ನನ್ನ ಮಗಳಿಗೆ...." ವೆಂಕಟರಾಯರು ಬೇಜಾರಿನಿಂದ ನುಡಿದರು. ಒಂದು ನಿಮಿಷ ಅಲ್ಲಿ ನೆರೆದಿದ್ದ ಯಾರೂ ಬಾಯಿ ತೆರೆಯಲಿಲ್ಲ.

"ನೀವೇ ಹೇಳಿ ಸೀತಮ್ಮ..." ಜೋಯಿಸರು ಸೀತಮ್ಮನನ್ನು ಕುರಿತು ಹೇಳಿದರು.

ಸೀತಮ್ಮ ಅನುಮಾನಿಸಿ ಅನುಮಾನಿಸಿ ಕೂಡಿದ್ದ ತುಟಿಗಳಿಗೆ ಚಲನೆ ಕೊಟ್ಟಳು.

"ಶಕುಂತಲ...." ನಾಲಿಗೆ ನುಡಿಯಿತು. ಗಂಡನ ಕಡೆಗೆ ನೋಡಿದಳು: ಅಂಜುತ್ತ ಅತ್ತೆಯನ್ನು ನೋಡಿದಳು.

"ಚೆನ್ನಾಗಿದೆ....ಚೆನ್ನಾಗಿದೆ...." ಜೋಯಿಸರು ಸುತ್ತಲೂ ನೋಡಿ ನುಡಿದರು.

"ಇನ್ಯಾವ ದುಷ್ಯಂತ ಬರ್‍ತಾನೊ ಇವಳ್ನ ವರಿಸೊಕ್ಕೆ ನಮ್ಮ ಹಿತ್ತಲಲ್ಲಿ

ಇಲಿ ಓಡಿಸಿಕೊಂಡು" ಸುಬ್ಬಣ್ಣ ನಗೆಯಾಡಿದ. ಎಲ್ಲರೂ ಘೊಳ್ಳೆಂದು ನಕ್ಕರು. ವೆಂಕಟರಾಯರಂತೂ ನೆನೆದು ನೆನೆದು ನಗುತ್ತಿದ್ದರು.

"ಅದೇ ಇರ್ಲಿ ಬಿಡಪ್ಪ...." ಸಾವಿತ್ರಮ್ಮ ಹಿಂದೆ ಸಮ್ಮತಿಸಿದರು.

"ಉಂಗರ ಸಿಕ್ಕಿದ್ರೊರ್ರೂ ಗಂಡ ಇವಳ್ನ ಮನ್ಸಿಗೆ ಕರ್ರ್ಕೊಳ್ಳೋ ಹಾಗಿಲ್ಲ...." ಇನ್ನೊಂದು ಹಾಸ್ಯದ ಬಿರುಸನ್ನು ಹಚ್ಚಿದ ಸುಬ್ಬಣ್ಣ, ಎಲ್ಲರಿಗೂ ಮೊದಲು ತಾನೇ ನಕ್ಕುಬಿಟ್ಟ.

"ದೂರ್ವಾಸರ ಶಾಪ ನನ್ನ ಮಗಳಿಗೆ ತಟ್ಟೊಲ್ಲ...." ಸೀತಮ್ಮ ಸೌಮ್ಯ ವಾಗಿಯೇ ಉತ್ತರ ಕೊಟ್ಟಳು.

"ನೋಡ್ದ್ಯಾ ಸುಬ್ಬಣ್ಣ ಹ್ಯಾಗಿದೆ....?"ರಾಯರು ಹೆಂಡತಿಯ ಮುಖ ವನ್ನೂ ಮೆಚ್ಚಿಗೆಯಿಂದ ನೋಡಿದರು.

"ಅಂತೂ ಭರತ ಹುಟ್ಟಿದ ಮೇಲೆ ಇವಳು ಗಂಡನ ಮನೆ ಸೇರೋದು ..." ಸುಬ್ಬಣ್ಣ ಮಗುವನ್ನು ಕೈಗೆತ್ತಿಕೊಂಡು ಮುದ್ದಿಸುತ್ತ ನುಡಿದ.

"ಇಲ್ಲ...ಇಲ್ಲ...ಈ ಶಕುಂತಲೆ ಗಂಡನ್ನ ನಮ್ಮನೇಲಿ ಸೆರೆ ಹಾಕ್ತಾಳೆ" ಸಾವಿತ್ರಮ್ಮ ನುಡಿದು ಅಡಿಗೆ ಮನೆಯಲ್ಲಿ ತಮ್ಮ ಕೆಲಸ ನೆನೆದು ಹೊರಟು ಹೋದರು.

"ನೀನೇ ಏನೆ ಗಂಡನ್ನ ಸೆರೆ ಹಾಕೋಳು..." ರಾಯರೂ ಮುದ್ದಿಸಿ ದರು.

ಸೀತಮ್ಮನ ಮಗಳು ಅಂದಿನಿಂದ ಶಕುಂತಲೆಯಾದಳು.

## ೨

ದುಂಡಾದ ಅಗಲವಾದ ದೊಡ್ಡ ಮುಖ. ಅದರಲ್ಲಿ ಚಿಕ್ಕ ಕಣ್ಣುಗಳು. ಅಗಲವಾದ ಹಣೆ. ತುಂಬಿದ ಕೆನ್ನೆ. ಸ್ವಲ್ಪ ಅಗಲ ಹೆಚ್ಚಾದರೂ ಮಾಟ ವಾದ ಬಾಯಿ. ಯಾವಾಗಲೂ ಮುಚ್ಚಿರುವ ತೆಳುವು ತುಟಿಗಳು. ಉದ್ದ ನಾದ ಹೊಳೆಯುವ ಮೂಗು. ಎಲ್ಲಕ್ಕೂ ಮಿಗಿಲಾಗಿ ಎಣ್ಣೆಗೆಂಪು ಬಣ್ಣ. ಅವರ ಮುಖಕ್ಕೆ ಮತ್ತಷ್ಟು ಮೆರಗು ಕೊಡುತ್ತಿತ್ತು. ಎತ್ತರವಾದ ನಿಲುವು. ಉಬ್ಬಿದ ಎದೆ. ನೀಳವಾದ ತೋಳುಗಳು. ಯಾವಾಗಲೂ ಕೊಕ್ಕರೆ ಗರಿ ಯಂತಹ ಜುಬ್ಬ. ಅದರ ಮೇಲೆ ಟ್ವೀಡ್ ಕೋಟು. ಇಲ್ಲವೆ ಉಲ್ಲನ್ನಿನ ಕ್ಲೋಸ್ ಕಾಲರ್ ಕೋಟು. ತೆಳ್ಳಗಿನ ಮಲ್ಲಿನ ಕಚ್ಚೆ ಹಾಕಿದ ಪಂಚೆ. ಕಾಲಿಗೆ ಪಂಪ್‌ಷೂ ಹಾಕಿಕೊಂಡು ಓಡಾಡುವ ವೆಂಕಟರಾಯರನ್ನು ನೋಡಿ ದವರು ದೊಡ್ಡ ಆಫೀಸರಿರಬಹುದೆಂದು ನಿಜವಾಗಿಯೂ ಹೇಳುತ್ತಿದ್ದರು.

ಒಂದು ಕ್ಷಣ ಅವರೊಡನೆ ಮಾತನಾಡಿದರಂತೂ ಇದರಲ್ಲಿ ಅಪನಂಬಿಕೆಯೇ ಬರುತ್ತಿರಲಿಲ್ಲ. ಕನ್ನಡದ ಜೊತೆಯಲ್ಲಿ ಇಂಗ್ಲೀಷು ಪದಗಳನ್ನು ನಿರರ್ಗಳ ವಾಗಿ ಉಪಯೋಗಿಸುತ್ತಿದ್ದರು. ಓದಿರುವುದು ಕೇವಲ ಸಿಕ್ಸ್ತ್ ಫಾರಂ ಆದರೂ ದೊಡ್ಡ ಪದವೀಧರರಂತೆ ಇಂಗ್ಲೀಷಿನ ಗಂಧವೂ ತಿಳಿಯದವ ರೊಡನೆ ಕೆಲವು ಮಾತನಾಡಿ ತಮ್ಮ ದೊಡಸ್ಥಿಕೆಯನ್ನು ಚೆನ್ನಾಗಿಯೇ ಸ್ಥಾಪಿ ಸುತ್ತಿದ್ದರು. ಅವರ ಈ ಎಲ್ಲಾ ನಡವಳಿಕೆಗೆ ಅನುಕೂಲವಾಗಿ ಅವರ ಕೈಯಲ್ಲಿ ದಿನದ ಹೆಚ್ಚು ಕಾಲವೆಲ್ಲಾ ಲಕ್ಷ್ಮಿ ಓಡಿಯಾಡುತ್ತಿದ್ದಳು. ಸ್ವಂತ ದುಡ್ಡಲ್ಲದಿದ್ದರೂ ಕೈಯ ತುಂಬಾ ಹಣ. ಇದೇ ಒಂದು ಅವರ ಹೆಚ್ಚಿನ ಸಂತೋಷಕ್ಕೆ ಕಾರಣ. ಅವರು ಕೆಲಸಕ್ಕೆ ಸೇರಿದಾಗಿನಿಂದಲೂ ಸರಾಫಗಿರಿ ಯನ್ನೆ ಮಾಡುತ್ತಿದ್ದರು. ಜಿಲ್ಲಾ ಕಛೇರಿಯಿಂದ ವರ್ಗವಾದರೆ ತಾಲ್ಲೂಕು ಕಛೇರಿ. ಅಲ್ಲಿಂದ ವರ್ಗವಾದರೆ ಪುನಃ ಜಿಲ್ಲಾ ಕಛೇರಿ. ಇವೆರಡರ ಮಧ್ಯವೇ ಅವರು ಓಡಾಡುತ್ತಿದ್ದರು. ಅಧಿಕಾರಿಗಳಿಗೆ ಇವರಲ್ಲಿ ಪೂರ್ಣ ಅಭಿಮಾನವಿದ್ದುದರಿಂದಲೂ, ಮತ್ತು ನಿಷ್ಠೆಯಿಂದ ಇವರು ಕೆಲಸವನ್ನು ಮಾಡುತ್ತಿದ್ದುದರಿಂದ ಯಾವ ಹೊಸ ಅಧಿಕಾರಿ ಬಂದರೂ ಇವರನ್ನು ವರ್ಗಾ ಯಿಸುವ ಧೈರ್ಯಮಾಡುತ್ತಿರಲಿಲ್ಲ. ಎಲ್ಲಕ್ಕೆ ಮಿಗಿಲಾಗಿ ಧೈರ್ಯಮಾಡಿ ಇನ್ನೆಲ್ಲಿ ಗಾದರೂ ವರ್ಗಾಯಿಸಿದರೂ ಎರಡೇ ದಿನದಲ್ಲಿ ಪುನಃ ಅಲ್ಲಿಗೇ ವರ್ಗಾಯಿಸಿ ಕೊಂಡು ಬಂದು ಬಿಡುತ್ತಿದ್ದರು. ಕೈಯಲ್ಲಿ ಸಾಕಷ್ಟು ಹಣ, ಬಾಯಲ್ಲಿ ಸವಿಮಾತು, ಹೃದಯದಲ್ಲಿ ನೈರ್ಮಲ್ಯ ತುಂಬಿದ್ದುದರಿಂದ ಎಲ್ಲರ ಅಭಿ ಮಾನಕ್ಕೂ ಕಾರಣರಾಗಿದ್ದರು.

ಅಪ್ಪ, ತಾತ ಸಂಪಾದಿಸಿದ್ದ ಆಸ್ತಿ ಹೇರಳವಾಗಿತ್ತು. ಅದರಿಂದ ಬರುವ ಉತ್ಪತ್ತಿಯೂ ಜಾಸ್ತಿಯಾಗಿಯೇ ಇತ್ತು. ಇದರಿಂದಾಗಿ ಅವರ ಸಂಸಾರ ಒಂದು ಚೆನ್ನು ಸಂಸಾರವಾಗಿತ್ತು.

ಸೀತಮ್ಮ ಮನೆಗೆ ಬಂದಮೇಲೆಯೇ ಅವರ ಮನೆಯಲ್ಲಿ ಲಕ್ಷ್ಮಿ ಚೆನ್ನಾಗಿ ಕಾಲೂರಿ ನೆಲಸಿದಳೆಂದೇ ವೆಂಕಟರಾಯರ ತಾಯಿ ಇಂದೂ ಹೇಳು ತ್ತಾರೆ. ಸೊಸೆಯನ್ನು ಸಾವಿತ್ರಮ್ಮ ಬಹು ಮೆಚ್ಚಿಗೆಯಿಂದ ಕಾಣುತ್ತಿದ್ದರು. ಸೀತಮ್ಮ ಅತ್ತೆಯ ಒಂದು ಮಾತಿಗೂ ವಿರುದ್ಧವಾಗಿ ಮಾತನಾಡುತ್ತಿರಲಿಲ್ಲ. ಅತ್ತೆಯನ್ನು ತಾಯಿಯಂತೆ ಪ್ರೀತಿಸುತ್ತಿದ್ದಳು. ಹುಟ್ಟಿದ ಸ್ವಲ್ಪವೇ ದಿನ ಗಳಲ್ಲಿ ತಾಯಿಯನ್ನು ಕಳೆದುಕೊಂಡು ಚಿಕ್ಕಮ್ಮನ ಹಿಂಸೆಯಲ್ಲಿ ಬೆಳೆದ ಆಕೆಗೆ ಸಾವಿತ್ರಮ್ಮ ನಿಜವಾಗಿಯೂ ಸಾಕುವ ತಾಯಿಯಾಗಿದ್ದರು. ವೆಂಕಟ

ರಾಯರಿಗೂ ಸೀತಮ್ಮನನ್ನು ಕಂಡರೆ ಎಲ್ಲಿಲ್ಲದ ಅಭಿಮಾನ, ಪ್ರೀತಿ. ಅವಳಿಗೆ ಗಂಡನನ್ನು ಕಂಡರೆ ಅತಿಭಕ್ತಿ.

ಈಗಿನ ಕಾಲದ ಹಲವು ಹುಡುಗಿಯರನ್ನು ನೋಡಿ ಸಾವಿತ್ರಮ್ಮ ಸಾಮಾನ್ಯವಾಗಿ ನುಡಿಯುತ್ತಿರುತ್ತಾರೆ. "ನಂಗೇನೊ ಅದೆಲ್ಲಾ ಸರಿ ಬರೋಲ್ಲರಿ....ಮದ್ವೆ ಆಗಿ ಒಂದು ಗಂಟೆ ಆಗೊಕಿಲ್ಲ. ಆಗ್ಲೆ ಹಸೆಮಣೇ ಮುಂದೇ ಎಲ್ಲಾರ ಮುಂದೂ ಮಾತ್ನಾಡ್ತಾರೆ....ಘನ ಇಲ್ಲ....ಗಂಭೀರ ಇಲ್ಲ....ನಾಚಿಕೆ ಎನ್ನೋದು ಸ್ವಲ್ಪನಾದ್ರೂ ಬೇಡ್ವೆ....? ಹೋಗ್ಲಿ ಗಂಡ ಅಂತ ಭಯ ಬೇಡ್ವೆ....! ನಾನು ನನ್ನ ಮದ್ವೆ ಆದ ಒಂದು ವರ್ಷದಮೇಲೆ ನನ್ನ ಗಂಡನಹತ್ರ ಎಲ್ಲೊ ಒಂದು ಮಾತ್ನಾಡಿದ್ದೆ. ಅವರು ಮಾತ್ನಾಡಿಸಿದ್ದಕ್ಕೆ 'ಹೂ' ಎಂದಿದ್ದೆ....ನನ್ನ ಮೊದಲ್ನೆ ಮಗ....ವೇಣುಗೋಪಾಲ....ಚೆನ್ನದಂತಾ ಹುಡ್ಗ....ಸತ್ತುಹೋದ ಅನ್ನಿ....ಅಂತಾ ಮಗನ್ನ ಇಟ್ಕೊಂಡಿರೋಕ್ಕೆನಾನು ಪುಣ್ಯ ಮಾಡಿರಲಿಲ್ಲ....ಯಾವ್ದಕ್ಕೂ ಅದೃಷ್ಟ ಇರಬೇಕಲ್ಲ....? ಅವನು ಹುಟ್ಟಿದ ಮೇಲೂ ಸರಿಯಾಗಿ ಎದ್ರಿಗೆ ನಿಂತು ಮಾತ್ನಾಡ್ತಾ ಇರ್ಲಿಲ್ಲ. ಅವರಜೊತೇಲಿ ಮಾತ್ನಾಡೊಕ್ಕೆ ನಂಗೆ ಬಾಯೇ ಬರ್‍ತಾ ಇರ್ಲಿಲ್ಲ....ಅದಕ್ಕೆ ಸರಿಯಾಗಿ ನನ್ನ ಸೊಸೆನೂ ಇದ್ದಾಳೆ. ಗಂಡನ್ನ ಕಂಡ್ರೆ ಏನುಭಯ ಅಂತಿರಾ ?....ನೋಡಿದೊಡ್ನೆ ಕುಸಿದುಹೋಗ್ತಾಳೆ. ಮಾತ್ನಾಡುವಾಗ್ಲಂತೂ ಒಂದು ಹಿಡಿ ಆಗಿ ಹೋಗ್ತಾಳೆ. ನಿಜವಾಗ಼್ೂ ಹೆಸರಿಗೆ ತಕ್ಕಂತೆ ಸೀತೆ....ನಂಗೇನೊ ಇದೇ ಚೆನ್ನ ಈಗಿನ ಬಾಯಿ ಬೊಡಕರನ್ನು ಕಂಡ್ರೆ ಕೋಪ ಬಂದುಬಿಡುತ್ತೆ"

ಸೊಸೆ ಬಂದ ಮೇಲೆ ಬೇಕಾದಷ್ಟು ಆಸ್ತಿ ಬಂತು ಅಂದರೆ ಹೊಗಳುವ ಮಾತಾಗಿರಲಿಲ್ಲ. ನಿಜವಾಗಿಯೂ ಸೀತಮ್ಮ ಒಳ್ಳೆಯ ಸತಿ. ಇಂತಹ ಪತ್ನಿಯನ್ನು ಹೊಂದಿದ್ದೇನೆಂದು ವೆಂಕಟರಾಯರಿಗೆ ಎಲ್ಲಿಲ್ಲದ ಹೆಮ್ಮೆ. ಸೀತಮ್ಮ ನನ್ನ ಮದುವೆಯಾಗಿ ನಿಷೇಕ ತೀರಿಸಿಕೊಂಡು ಮನೆದುಂಬಿಸಿಕೊಂಡ ದಿನವೇ ಬಹಳ ವರ್ಷಗಳಿಂದ ನಡೆಯುತ್ತಿದ್ದ ಒಂದು ಜಮೀನಿನ ಜಗಳ ಇವರ ಕಡೆಯಾಗಿತ್ತು.

"ವೆಂಕಟರಾಯರಿಗೆ ಹೆಂಡತಿಯನ್ನು ಕಂಡರೆ ನಿಸ್ಸಂಕೋಚವಾದ ಮೆಚ್ಚುಗೆ. ಆದರೆ ಇಷ್ಟೆಲ್ಲಾ ಇದ್ದರೂ ಅವರಿಗೆ ಬಹಳ ದಿನ ಮಕ್ಕಳ ಭಾಗ್ಯವೇ ಇರಲಿಲ್ಲ. ಇವರಿಗೆ ಎಲ್ಲಾ ಸುಖವೂ ಇತ್ತು. ಹಣವಿತ್ತು.ಗಂಡ ಹೆಂಡತಿಯರಲ್ಲಿ ಅಗಾಧ ಪ್ರೀತಿಯಿತ್ತು. ಆದರಿಸುವ ಅತ್ತೆಯಿದ್ದರು. ಎಲ್ಲವೂ ಇತ್ತು. ಆದರೆ ಸುಖಸೌಧಕ್ಕೆ ಕಳಸವೇ ಇಲ್ಲ. ರಮ್ಯ ಸುಪ್ರ

ಭೂತದ ಹಿರುಮೆಯನ್ನು ಮೆರಗುಗೊಳಿಸುವ ಹಕ್ಕಿಗಳ ಕಲಕಲನಿನಾದವೇ ಇರಲಿಲ್ಲ. ಇದು ವೆಂಕಟರಾಯರ ಕುಟುಂಬವನ್ನೆ ಆಳಲಿನ ಮಡುವಿನಲ್ಲಿ ಬಹಳ ದಿನ ಮುಳಗಿಸಿತ್ತು. ಮೊಮ್ಮಕ್ಕಳನ್ನು ಎತ್ತಿ ಮುದ್ದಿಸಲು ಸಾವಿತ್ರಮ್ಮ ನವರ ಸುಕ್ಕುಗೊಂಡ ಕೈಗಳು ಹಂಬಲಿಸುತ್ತಿದ್ದವು. "ಅಜ್ಜಿ" ಎಂದು ಯಾವುದಾದರೂ ಮಕ್ಕಳು ಅವರನ್ನು ಕೂಗಿದಾಗ ಅವರ ಹಣೆಯಲ್ಲಿ ಗೆರೆ ಗಳು ಮೂಡುತ್ತಿದ್ದವು. ಅತೀವ ವೇದನೆಯಾಗುತ್ತಿತ್ತು. ಕಂಡು ಕೇಳಿದ ದೇವರಿಗೆಲ್ಲಾ ಹರಿಕೆ ಹೊತ್ತಿದ್ದರು. ಮಗಸಿಗೂ ತಿಳಿಸದೆ ಹಲವಾರು ಕಡೆ ಗಳಿಂದ ಗುಟ್ಟಾಗಿ ಮಂತ್ರಿಸಿ ಕಾಯನ್ನು ತರಿಸಿದ್ದರು. ಸೀತಮ್ಮ, ವೆಂಕಟ ರಾಯರು ಇಬ್ಬರನ್ನು ಈ ದುಃಖ ದಹಿಸುತ್ತಿದ್ದರೂ ಅವರು ಹೊರಗೆ ತೋರ್ಪ ಡಿಸಿಕೊಳ್ಳುತ್ತಿರಲಿಲ್ಲ. ಸೀತಮ್ಮ ಒಬ್ಬಳೇ ದೇವರ ಮುಂದೆ ಕುಳಿತು ಕಣ್ಣೀ ರಿನ ಕೋಡಿಯನ್ನೇ ಹರಿಸುತ್ತಿದ್ದಳು. ಗಂಡನನ್ನು ಕಂಡಾಗ ನಗುವನ್ನು, ಬಳಲಿದ ತುಟಿಗಳಲ್ಲಿ ಮಿಂಚಿಸಿ ಸ್ವಾಗತಿಸುತ್ತಿದ್ದಳು. ಇವೆಲ್ಲದರಿಂದಾಗಿ ವೆಂಕಟರಾಯರ ಸಂಸಾರ ಹೊರಗೆ ನೋಡುವುದಕ್ಕೆ ಶಾಂತವಾಗಿ ಕಾಣು ತ್ತಿದ್ದರೂ ಒಳಗೆ ಪ್ರಕ್ಷುಬ್ಧವಾಗಿತ್ತು.

ಮದುವೆಯಾದ ಎಂಟು ವರ್ಷಗಳ ನಂತರ ಸೀತಮ್ಮನ ಮುಟ್ಟು ನಿಂತಿತು.

ಮನದ ಪ್ರಾರ್ಥನೆ ದೇವರಿಗೆ ಮುಟ್ಟಿತೆಂದು ಸೀತಮ್ಮನಿಗೆ ಎಲ್ಲಿಲ್ಲದ ಸಂತೋಷ. ಹರಕೆ ಕೊನೆಗೂ ಫಲ ಕೊಟ್ಟಿತೆಂದು ಸಾವಿತ್ರಮ್ಮನವರಿಗೆ ಬಹು ತೃಪ್ತಿಯಾಯಿತು. ಹೃದಯದ ಬಯಕೆ ಈಡೇರಿತೆಂದು ವೆಂಕಟ ರಾಯರು ಹರ್ಷಪಟ್ಟರು.

ಆ ದಿನವೇ ಆಫೀಸಿನಲ್ಲಿ ರಾಯರು ತನ್ನ ಸ್ನೇಹಿತರಿಗೆಲ್ಲಾ ಕಾಫಿ ಸಮಾರಾಧನೆಯನ್ನು ಮಾಡಿಸಿದರು. ಆಗ ಕಾರಣಯಾರಿಗೂ ಹೊಳೆಯ ಲಿಲ್ಲ. "ಕುಡೀರಿ...ಕುಡೀರಿ ಸಂಬಳ ಬಂತು ಒಂದು ದಿನನಾದ್ರೂ ನಿಮಗೆ ನನ್ನ ಆತಿಥ್ಯ ನಿಮಗೆ ಸಿಕ್ಕಿರಲಿಲ್ಲ." ಎಂದು ಚುಟಕದಲ್ಲಿ ಹಾರಿಸಿದ್ದರು ರಾಯರು.

ತಿಂಗಳುಗಳು ಸರಿದಂತೆಲ್ಲಾ ಏನೊ ಒಂದು ತರದ ಹೊಸ ಉತ್ಸಾಹ, ನವೀನ ಹುಮ್ಮಸ್ಸು ಎಂದೂ ಇಲ್ಲದ ಚೈತನ್ಯ ಸಾವಿತ್ರಮ್ಮನವರಲ್ಲಿ ಮೂಡ ಹತ್ತಿತ್ತು ಏಳನೆ ತಿಂಗಳಲ್ಲಿ ಮೊಳ ಕೈಯವರೆಗೂ ಹೊಸ ಬಳೆಗಳನ್ನು ತೊಡಿ ಸಿದರು. ಮಗನಿಗೆ ಹೇಳದೆ ತಾನೇ ಬಹಳ ದಿನಗಳಿಂದ ಹೆಂಗಸರ ಸೊಸೈಟಿ ಯಲ್ಲಿಟ್ಟಿದ್ದ ಹಣದಿಂದ ಎರಡು ಚಿನ್ನದ ಬಳೆಗಳನ್ನು ಮಾಡಿಸಿ ತೊಡಿಸಿದರು.

ಅವಳನ್ನು ಕೂತ ಕಡೆಯಿಂದ ಮೇಲೆ ಏಳಲು ಬಿಡುತ್ತಿರಲಿಲ್ಲ. ಕೈಕಾಲು ಎಷ್ಟು ಸೋತು ಹೋದರೂ, ಸೊಂಟದಲ್ಲಿ ನೋವು ಬಂದರೂ ಅವರೇ ಎಲ್ಲಾ ಕೆಲಸವನ್ನೂ ಮಾಡುತ್ತಿದ್ದರು. ಮುದಿ ಕಣ್ಣಲ್ಲಿ ಮುಂದಿನ ಸವಿಯನ್ನು ನೆನೆಯುತ್ತಿದ್ದಾಗ ಗುಡ್ಡೆ ಪಳಪಳನೆ ಕಣ್ಣಿನ ಹಳ್ಳದಲ್ಲಿ ಸರಿ ದಾಡುತ್ತಿತ್ತು. ಬಾಯಿ ತಾನಾಗಿ ತೆರೆದು ಹಲ್ಲಿಲ್ಲದ ಬಾಯಲ್ಲಿ ವಸಡು ಕಾಣಿಸಿ ಕೊಳ್ಳುತ್ತಿತ್ತು.

ವೆಂಕಟರಾಯರೂ ಕಛೇರಿ ಮುಗಿದ ತಕ್ಷಣ ಉತ್ಸಾಹದಿಂದ ಮನೆಗೆ ಬರುತ್ತಿದ್ದರು. ಬರುವಾಗ ಎಂದೂ ಹೂ, ಹಣ್ಣನ್ನು ತರುವುದನ್ನು ಮರೆ ಯುತ್ತಿರಲಿಲ್ಲ. ಬಂದೊಡನೆ ಹೋಗಿ ಮಂಚದ ಮೇಲೆ ಹೆಂಡತಿಯನ್ನು ಕಂಡ ಹೊರತು ಅವರ ಮನಸ್ಸಿಗೆ ನೆಮ್ಮದಿ ದೊರೆಯುತ್ತಿರಲಿಲ್ಲ.

ಒಂಭತ್ತು ತಿಂಗಳುಗಳು ಕಳೆದು ಹೋಗಿ ಒಂದು ದಿನ ಸೀತಮ್ಮ ಸುಗಮವಾಗಿ ಹೆಣ್ಣುಮಗುವನ್ನು ಹೆತ್ತಳು, ಹೆಣ್ಣು ಎಂದು ಕೇಳಿದಾಗ ಒಂದು ಕ್ಷಣ ಸಾವಿತ್ರಮ್ಮನವರ ಮುಖ ಸಪ್ಪಗಾದರೂ ಎಳೆಯ ಮಗುವಿನ ಅಳುವನ್ನು ಕೇಳಿದಾಗ ವಾತ್ಸಲ್ಯ ತುಂಬಿ ಹರಿಯಿತು. ಹೊಲೆಮನೆಯಲ್ಲೇ ಇದ್ದ ಅವರು ಕೈಚಾಚಿ ಮಗುವನ್ನು ಎತ್ತಿಕೊಂಡರು. ಮುದಿಕಣ್ಣನ್ನು ಅಗಲಿಸಿ ನೋಡಿ ಎದೆಗೆ ಅಪ್ಪಿಕೊಂಡರು.

ಅಪರೂಪದ ಮಗುವಾದ್ದರಿಂದ ಅದ್ದೂರಿಯಿಂದಲೇ ನಾಮಕರಣವನ್ನು ನಡೆಸಿದರು. ನೂರಾರು ಜನಕ್ಕೆ ಸಂತರ್ಪಣೆ ಮಾಡಿಸಿ ದಾನಧರ್ಮ ಮಾಡಿ ದರು.

" ಹುಟ್ಟಿದ್ರೆ ಇಂತೋರಿಗೆ ಮಕ್ಳು ಹುಟ್ಟಬೇಕು....ಸುಖವಾಗಿ ಬೆಳೆ ಯುತ್ವೆ...." ತೃಪ್ತರಾದ ಜನ ತೇಗಿ ಹೊಗಳಿದರು.

" ಕೃಷ್ಣ ಹುಟ್ತಾನೆ ಅಂತಿದ್ದೆ.... ಲಕ್ಷ್ಮಿ ಹುಟ್ಟಿದ್ಲು...."

ಸಾವಿತ್ರಮ್ಮ ನುಡಿದರು.

೩

" ಲೋ ! ಮಗೂ ...ಮಧ್ಯಾಹ್ನ ಸ್ವಲ್ಪ ಬೇಗ ಬಂದು ಬಿಡು ಮಗೂನ ದೇವಸ್ಥಾನಕ್ಕೆ ಕರ್ಕೊಂಡು ಹೋಗ್ಬೇಕು....ಎರಡು ಗಂಟೆ ಹೊತ್ತಿಗೆಲ್ಲಾ ಬಂದ್ಬಿಡು "

ಹೊರಗೆ ಹೋಗುತ್ತಿದ್ದ ಮಗನನ್ನು ಕರೆದು ಅ ಣ ತಿ ಯಿ ಟ್ಟ ರು. ಸಾವಿತ್ರಮ್ಮ.

" ಆಗ್ಲಿ ಅಮ್ಮ ಬರ್ತೀನಿ. ನೀವೆಲ್ಲಾ ತಯಾರಾಗಿರಿ ಒಂದು–ಒಂದೂ ವರೆ ಗಂಟೆ ಹೊತ್ತಿಗೆ ಬರ್ತೀನಿ....ಇನ್ನೂ ಬೇಗ ಬಂದ್ರೂ ಬರ್ತೀನಿ " ಹೇಳಿ ರಾಯರು ಕಛೇರಿಗೆ ಹೊರಟು ಹೋದರು.

ಸಾವಿತ್ರಮ್ಮ ಸೊಸೆಯನ್ನು ಊಟಕ್ಕೆ ಕರೆದರು. ಬಲವಂತಮಾಡಿ ತುಪ್ಪ ಹಾಕಿ ಅನ್ನ ಬಡಿಸಿ ತಿನ್ನಿಸಿದರು. ಊಟವಾದ ಮೇಲೆ ಖಾರವನ್ನು ಕೊಟ್ಟು ಲೇಹ್ಯವನ್ನು ತಿನ್ನಿಸಿದರು. ಬಾಯಿ ಖಾರವಾಗುತ್ತದೆಂದು ಸ್ವಲ್ಪ ಕೊಬ್ಬರಿಯನ್ನು ಕೊಟ್ಟರು. ಒಂದು ತಟ್ಟೆಯಲ್ಲಿ ಚಿಗುರು ವಿಳ್ಳೇದೆಲೆಯನ್ನು ಇಟ್ಟು ಘಮಘಮಿಸುವ ಅಡಿಕೆ ಪುಡಿಯನ್ನು ನಿತ್ಯಕ್ರಮದಂತೆ ಕೊಟ್ಟು ತಾವು ಊಟಮಾಡಲು ಹೋದರು. ಇಂದು ಮೊಮ್ಮಗಳನ್ನು ಹೊರಗೆ ಕರೆದು ಕೊಂಡು ಹೋಗುವುದರಲ್ಲಿ ಅವರಿಗೆ ಏನೋ ಒಂದು ಸಂಭ್ರಮ. ಎಲ್ಲೂ ಇಲ್ಲದ ಉತ್ಸಾಹ. ಊಟವಾದೊಡನೆಯೇ ಕೈಯ್ಯನ್ನು ತೊಳೆದುಕೊಂಡು ಬಂದು ಒಂದು ಬೆಳ್ಳಿ ತಟ್ಟೆಯನ್ನು ಪೆಟ್ಟಿಗೆಯಿಂದ ತೆಗೆಸಿದರು. ಎರಡು ದಪ್ಪ ತೆಂಗಿನ ಕಾಯನ್ನೂ, ವಿಳ್ಳೇದೆಲೆಯನ್ನು ಅಡಿಕೆಯನ್ನೂ, ಇಟ್ಟು ಸಿದ್ಧ ಪಡಿಸಿದರು. ಒಂದು ತೊಲ ಕರ್ಪೂರವನ್ನೂ ತರಿಸಿದರು. ಚಿಲ್ಲರೆ ಆಣೆ ಗಳನ್ನು ಸಾಸುವೆ ಡಬ್ಬದಿಂದ, ಅರಿಶಿನದ ಶೀಷೆಯಿಂದ ತೆಗೆದು ಸೊಂಟದಲ್ಲಿ ಸಿಕ್ಕಿಸಿಕೊಂಡರು. ತಾವು ಉಟ್ಟುಕೊಂಡು ಹೋಗಲು ತಮ್ಮ ಜಕಾಯಿ ಪೆಟ್ಟಿಗೆಯಿಂದ ಒಂದು ಕೆಂಪಂಚಿನ ಸೀರೆಯನ್ನು ಹೊರಗೆ ತೆಗೆದು ಗೂಡಿ ನಲ್ಲಿಟ್ಟರು.

" ಸೀತಾ....ಸೀತಾ....ನೀನೂನೂ ಪೆಟ್ಟಿಗೆ ತೆಗ್ದು ಆ ಧರ್ಮಾವರದ ಸೀರೇನ ಉಟ್ಕೊ ಚೆನ್ನಾಗಿರುತ್ತೆ. ಹೊಸ ರೇಷ್ಮೆ ಸೀರೆ ಏನೋ ಚೆನ್ನಾಗಿದೆ ಮೊನ್ನೆ ತಂದದ್ದು ಅದನ್ನು ಬೇಕಾದ್ರೂ ಉಟ್ಕೊ ಬಹ್ದು. ಆದರೆ ಏಕೊ ಹೊರಗೆ ಸ್ವಲ್ಪ ಮೋಡ ಆಡ್ತಾ ಇದೆ. ಮಳೆ ಬಂದ್ರೆ ನೆಂದು ಹೋಗುತ್ತೆ. ಆ ಮೇಲೆ ಚೆನ್ನಾಗಿರಲ್ಲ. ಮಗೂಗೆ ಉಲ್ಲನ್ ಕುಲಾವಿ ತೊಡಿಸು ಆವತ್ತಿ ನಿಂದ ಹಾಕ್ತಾ ಇದ್ದೀಯಲ್ಲ ಸ್ವೆಟ್ರೊ....ಪಟ್ರೊ ಆಗಿದ್ರೆ ಅದನ್ನೂ ಹಾಕು ಛಳಿ ಪಾಪ ಮಗೂಗೆ...." ಎಲ್ಲಾ ಮುನ್ನೆಚ್ಚರಿಕೆ ಕೊಟ್ಟರು. ತುಮಕೂರಿನಲ್ಲೆ ಬೇಕಾದಷ್ಟು ದೇವಸ್ಥಾನಗಳಿದ್ದರೂ ಅವರಿಗೆ ಅಲ್ಲಿಗೆ ಹೋಗುವುದು ಬೇಕಾ ಗಿರಲಿಲ್ಲ. ತಮ್ಮ ಸ್ವಗ್ರಾಮಕ್ಕೆ ಹೋಗಿ ರಂಗನಾಥಸ್ವಾಮಿಗೆ ಕಾಯಿ ಒಡೆಸಿ ದರ್ಶನಮಾಡಿಕೊಂಡು ಬರಬೇಕೆಂದು ಅವರ ಇಚ್ಛೆ. ನಂದೀ ಹಳ್ಳಿಯೂ ಅಲ್ಲಿಗೆ ಹೆಚ್ಚು ದೂರವಿರಲಿಲ್ಲ. ಕೇವಲ ಐದು ಮೈಲಿ. ಕುಣಿಗಲು ಬಸ್ಸು

ಹತ್ತಿ ಗೂಳೂರಿನ ಬಳಿಯಲ್ಲಿ ಇಳಿದರೆ ಅಲ್ಲಿಂದ ಸುಮಾರು ಒಂದು ಮೈಲಿ ಪಶ್ಚಿಮಕ್ಕೆ.

ರಸ್ತೆಯಿಂದ ಸೀದಾ ಊರಿನ ಕಡೆಗೆ ಹೊರಟರೆ ಮೊದಲು ಸಿಕ್ಕುವುದು ರಂಗನಪಾಳ್ಯ. ಪಾಳ್ಯದ ರಂಗಪ್ಪನ ಅಂಗಡಿಯ ಮುಂದೇ ನಂದೀ ಹಳ್ಳಿಗೆ ದಾರಿಹೋಗುತ್ತದೆ. ಅಲ್ಲಿಂದ ನೂರು ಗಜ ಹೋದರೆ ರಂಗೇಗೌಡನ ದೊಡ್ಡ ಹೊಲ. ಅಲ್ಲಿಂದಲೇ ನಂದೀ ಹಳ್ಳಿಯ ಜಮೀನು ಪ್ರಾರಂಭವಾಗುತ್ತದೆ. ನಾಲ್ಕು ಹೆಜ್ಜೆ ಮುಂದೆ ಬಂದು ಸಣ್ಣ ಹಳ್ಳಿ ಇಳಿದು ದಿಣ್ಣೆಯನ್ನು ಹತ್ತಿ ಉತ್ತರಕ್ಕೆ ನೋಡಿದರೆ ಊರಿನ ಕೆರೆ ಕಾಣುತ್ತದೆ. ಕೆಂಪಗೆ ಮಂಡಲ ಹೊಡೆಯುತ್ತ ಬಹುದೂರ ಹರಡಿ ಪ್ರಶಾಂತವಾಗಿ ನಿಂತಿದೆ. ಸಾಮಾನ್ಯವಾಗಿ ಆ ಕೆರೆಯಲ್ಲಿ ಎಂದೂ ನೀರು ಬಸಿದುಹೋಗುವುದಿಲ್ಲ. ಸ್ವಲ್ಪ ಮಳೆಯಾದರೂ ನಾಕು ಸುತ್ತಲು ಬಿದ್ದ ನೀರೆಲ್ಲಾ ಅಲ್ಲಿಗೆ ಬಂದು ಸೇರುತ್ತದೆ. ನೀತನ ಕಟ್ಟೆಯ ಮಾರ್ಗವಾಗಿ ಬರುವ ಆ ದೊಡ್ಡ ತೊರೆಯೂ ಅಸ್ಪಷ್ಟವಾಗಿ ಬಿದುರಿನ ಮೆಳೆಗಳ ಮಧ್ಯದಲ್ಲಿ ಕಾಣುತ್ತದೆ.

ದಾರಿಯ ಎಡಗಡೆ ದೊಡ್ಡ ಮಾವಿನ ಮರದ ತೋಪಿನ ಬೇಲಿಯ ಪಕ್ಕದಲ್ಲೇ ಕಾಲುದಾರಿ ಹೋಗುತ್ತದೆ. ಅಲ್ಲಿ ಮಾತ್ರ ಬಹು ಎಚ್ಚರಿಕೆಯಿಂದ ಸಾಗಬೇಕು. ಇಲ್ಲದಿದ್ದರೆ ಪಕ್ಕದ ಮುಳ್ಳು ತಂತಿಗೆ ಬಟ್ಟೆ ಸಿಕ್ಕಿಕೊಂಡು ಹರಿದುಹೋಗುವುದು ಶತಸಿದ್ಧ. ಗಾಡಿಯಲ್ಲಿ ಬಂದರೆ ಈ ತೋಪನ್ನು ಸುತ್ತಿಕೊಂಡು ಬರಬೇಕಾಗುತ್ತದೆ. ಇದನ್ನು ದಾಟಿ ಇನ್ನೂ ಹತ್ತು ಹೆಜ್ಜೆ ಬರುವುದಕ್ಕಿಲ್ಲ ಒಂದು ದೊಡ್ಡ ಹೆಂಚಿನ ಮನೆ ಕಾಣಿಸುತ್ತದೆ. ಅದೇ ಊರಿನ ಮಾಧ್ಯಮಿಕ ಶಾಲೆ. ಅದರ ಬಲದಲ್ಲಿರುವುದೇ ಹಳೆಯ ಈಶ್ವರ ದೇವಸ್ಥಾನ. ಒಂದೇ ಒಂದು ರಾತ್ರಿಯಲ್ಲಿ ಜೋಳರು ಇದನ್ನು ಕಟ್ಟಿಸಿದರಂತೆ. ಇದು ಸ್ಥಳ ಪುರಾಣ. ಇದಲ್ಲದೆ ಅಲ್ಲಿ ಈಶ್ವರನ ಮುಂದಿರುವ ಬಸವಣ್ಣನ ಕೆಳಗಡೆ ಗುಪ್ತಧನ ಅಮಿತವಾಗಿದೆಯಂತೆ. ಅದು ಈಶ್ವರ ದೇವಸ್ಥಾನದ ಆಚೆ ಸ್ವಲ್ಪ ದೂರದಲ್ಲಿರುವ ಒಂದು ಹಳ್ಳದಲ್ಲಿ ಬಿದ್ದಿರುವ ಹಳೆಯ ಶಾಸನವನ್ನು ಹಸು, ಕರು ನೀರು ಕುಡಿಯುವುದರಲ್ಲಿ ಓದಿ ಮುಗಿಸಬೇಕಂತೆ. ಹಾಗಲ್ಲದೆ ಅಷ್ಟರಲ್ಲಿ ಓದದೆ ಹೋದರೆ ಅವರು ರಕ್ತ ಕಾರಿ ಸತ್ತು ಹೋಗುತ್ತಾರೆ. ಆದ್ದರಿಂದ ಸಾಮಾನ್ಯವಾಗಿ ಆ ಹಳ್ಳದ ಹತ್ತಿರ ಯಾರೂ ಸಂಚರಿಸುವುದಿಲ್ಲ. ಇದನ್ನೆಲ್ಲಾ ದಾಟಿ ದೊಡ್ಡ ಆಲದ ಮರದ ಕೆಳಗಡೆ ಹುಣಸೆಯ ಮರದ ಪಕ್ಕಕ್ಕೆ ಬಂದರೆ ಊರನ್ನು ತಲುಪಿದಂತೆಯೆ. ಎದುರಿಗೇ ಕಾಣುವುದು ವೆಂಕಟರಾಯರ ತಾತ ಕಟ್ಟಿಸಿದ್ದ ಸಿಹಿ ನೀರಿನ

ಭಾವಿ. ಅವರ ಸತ್ಯದಿಂದಲೇ ಆ ಭಾವಿಯಲ್ಲಿ ನೀರು ಎಂದೂ ಇಂಗಿಹೋಗುವುದಿಲ್ಲವೆಂದು ಊರಿನವರೆಲ್ಲರ ನಂಬಿಕೆ. ಅಲ್ಲಿಂದ ಸ್ವಲ್ಪ ಮುಂದೆ ಹೋಗಿ ಬಲಕ್ಕೆ ತಿರುಗಿದರೆ ಊರಿನೊಳಗೆ ದಾರಿ ಹೋಗುತ್ತದೆ. ಎಡಗಡೆ ದಾರಿಯಲ್ಲಿ ಭಾವಿಯ ಪಕ್ಕದಲ್ಲೇ ಹೋದರೆ ಹೊಲೆಯರ ಹಟ್ಟಿಗೆ ಹೋಗುತ್ತದೆ. ಸಾಹುಕಾರ ಮಾರಯ್ಯನ ಮನೆಯ ಮುಂದೆ ಹಾಸಿರುವ ಹಾಸುಗಲ್ಲನ್ನು ತುಳಿದುಕೊಂಡು ತಳವಾರ ಸಿದ್ದಯ್ಯನ ಬಚ್ಚಲನ್ನು ದಾಟಿ ಹೋದರೆ ಊರಿನ ಮಧ್ಯಭಾಗವನ್ನು ತಲುಪಿದ ಹಾಗೇ ಆಯಿತು. ಅಲ್ಲಿಗೆ ಬಂದರೆ ಎದುರುಗಡೆ ಜೋಡಿ ಜೋಡಿಯಾಗಿ ಎರಡು ಹೆಂಚಿನ ಮನೆಗಳು ಕಾಣಿಸುತ್ತದೆ. ಒಂದು ಬಲಗಡೆಯದು ವೆಂಕಟರಾಯರ ಅಜ್ಜ ಕಟ್ಟಿಸಿದ್ದು. ಇನ್ನೊಂದು ರಾಮರಾಯರು ಹೊಸದಾಗಿ ಕಟ್ಟಿಸಿದ ಮನೆ. ಅವರೂ ಒಬ್ಬರು ಊರಿನ ಅನುಕೂಲವಾದ ಕುಳ. ವೆಂಕಟರಾಯರು ತಮ್ಮ ಜಮೀನನ್ನೆಲ್ಲಾ ವಾರಕ್ಕೆ, ಗುತ್ತಿಗೆಗೆ ಕೊಟ್ಟು ಹಳ್ಳಿ ವಾಸ ಬೇಜಾರೆಂದು ತುಮಕೂರಿನಲ್ಲಿ ವಾಸಿಸುತ್ತಿದ್ದರೂ ರಾಮರಾಯರು ಜಮೀನನ್ನು ನಂಬಿಕೊಂಡು ವ್ಯವಸಾಯವನ್ನೇ ಮುಖ್ಯ ಕಸುಬಾಗಿರಿಸಿಕೊಂಡು ಅವರು ಜೀವಿಸುತ್ತಿದ್ದಾರೆ. ಒಳ್ಳೆಯ ಹೆಸರನ್ನೂ ಗಳಿಸಿದ್ದಾರೆ.

ವೆಂಕಟರಾಯರ ಮನೆಯ ದಕ್ಷಿಣಕ್ಕೆ ಕೆಲವು ಗಜಗಳ ಆಚೆ ಇರುವುದೇ ರಂಗನಾಥದೇವಾಲಯ. ಅಷ್ಟು ಹತ್ತಿರ ಇದ್ದರೂ ಊರಿನ ಯಾವ ಭಾಗದಲ್ಲಿ ನಿಂತು ನೋಡಿದರೂ ಕಾಣಿಸುವುದಿಲ್ಲ. ಪಕ್ಕದ ಕೈ ತೋಟವನ್ನು ದಾಟಿ ಅಲ್ಲೇ ಇರುವ ದಿಣ್ಣೆಯನ್ನು ಹತ್ತಿ ಎದುರಿಗೆ ನೋಡಿದರೆ ಒಂದು ಇಪ್ಪೆ ಮರಗಳ ಭಾರಿ ತೋಪು ಕಾಣಿಸುತ್ತದೆ. ಅದರ ಮಧ್ಯದಲ್ಲಿ ಒಂದು ಹಳೆಯ ದೇವಸ್ಥಾನವಿದೆ. ಅದೇ ರಂಗನಾಥ ದೇವಾಲಯ ವೆಂಕಟರಾಯರ ಮನೆ ದೇವರು.

ರಂಗನಾಥ ಬಹಳ ಸತ್ಯ ದೇವರು. ನಾಸ್ತಿಕ ಜನ ಹತ್ತು ದಿನ ನಂದೀ ಹಳ್ಳಿಯಲ್ಲಿ ಇದ್ದು ಬಂದರೆ ಹನ್ನೊಂದನೆ ದಿನ ಆಸ್ತಿಕರಾಗಿ ರಂಗನಾಥನಿಗೆ ಕೈ ಮುಗಿಯುತ್ತಾರೆ. ಶುಕ್ರವಾರ ಊರಿನ ದನಗಳಿಂದ ಕರೆದ ಹಾಲನ್ನೆಲಾ ಸ್ವಲ್ಪವೂ ಉಪಯೋಗಿಸದೆ ಹೆಪ್ಪು ಹಾಕಿ ಕಡೆದು ಕಾಸಿ ತುಪ್ಪವನ್ನು ದೇವಸ್ಥಾನದ ಹೊರಗಿನ ಪ್ರಕಾರದಲ್ಲಿ ತೂಗಿ ಹಾಕಿರುವ ಒಂದು ಕುಡಿಕೆಗೆ ಹಾಕಬೇಕು. ಇಲ್ಲದಿದ್ದರೆ ದನಗಳೆಲ್ಲಾ ರಕ್ತವನ್ನು ಕರೆಯುತ್ತವೆ. ಇದು ಪೂರ್ವಿಕರು ಪ್ರಯೋಗ ನಡೆಸಿ ಅನುಭವಿಸಿ ಹೇಳುತ್ತಿದ್ದುದು. ಇಂದೂ ಎಲ್ಲರೂ ಇದೇ ಕ್ರಮವನ್ನೇ ನಡೆಸುತ್ತಿದ್ದಾರೆ. ಈ ಕ್ರಮದಿಂದ ಒಬ್ಬರೂ

ತಪ್ಪಿ ನಡೆಯಲಾರರು. ಯಾರಿಗೂ ಅಷ್ಟು ಧೈರ್ಯವಿಲ್ಲ. ಪರಿಶೀಲಿಸುವ ದುರ್ಬುದ್ಧಿಯೂ ಯಾರಿಗೂ ಇದುವರೆಗೆ ಬಂದುದಿಲ್ಲ. ಇಷ್ಟು ಕಟ್ಟುನಿಟ್ಟಿನ ಸತ್ಯದ ದೇವರಾದುದರಿಂದಲೇ ಸಾವಿತ್ರಮ್ಮ ಮೊಮ್ಮಗಳನ್ನು ಇಲ್ಲಿಗೆ ಕರೆದುಕೊಂಡು ಬರಲು ನಿರ್ಧರಿಸಿದ್ದು.

ಅಂದು ಶನಿವಾರವಾದ್ದರಿಂದ ವೆಂಕಟರಾಯ ಎಷ್ಟು ಬೇಗ ಮನೆಗೆ ಬರಬೇಕೆಂದರೂ ಎರಡು ಗಂಟೆ ಆಗಿಹೋಯಿತು ಅವಾಂತರವಾಗಿ ಹೊರಟು ಬಸ್ಸನ್ನು ಹತ್ತಿ ಗೂಳೂರಿನ ಹತ್ತಿರ ಇಳಿದು ಭೈರಣ್ಣನು ತಂದಿದ್ದ ಗಾಡಿಯನ್ನು ಹತ್ತಿ ನಂದೀ ಹಳ್ಳಿಯನ್ನು ಸೇರಬೇಕಾದರೆ ಮೂರು ಗಂಟೆಯ ಮೇಲಾಗಿ ಹೋಯಿತು. ಇವರು ಬಂಡಿಯಲ್ಲಿ ಕುಳಿತು ಊರನ್ನು ಪ್ರವೇಶಿಸುತ್ತಿದ್ದರೆ ಎಲ್ಲರೂ ಮಾತನಾಡಿಸುವವರೆ ಮಗುವನ್ನು ನೋಡಿ ನೋಡಿ ದೃಷ್ಟಿಯನ್ನು ತೆಗೆಯುವವರೆ. ಮಗಳನ್ನು ದಯಪಾಲಿಸಿದ ದೇವರನ್ನು ಹೊಗಳುವವರೆ. ಅಂತೂ ಊರಿನ ಗಡಿಯಿಂದ ಮನೆಯನ್ನು ಸೇರಬೇಕಾದರೆ ಇನ್ನರ್ಧ ಗಂಟೆಯಾಯಿತು. ಮನೆಯ ಮುಂದೆ ಗಾಡಿಯನ್ನು ನಿಲ್ಲಿಸುವುದಕ್ಕಿಲ್ಲ ಆಗಲೇ ರಾಮರಾಯನ ಮನೆಯಿಂದ ಕರೆ ಬಂತು.

"ಏನು ವೆಂಕಟರಾಯ ಇಷ್ಟೊಂದು ಜಂಭ ಬಂದುಬಿಟ್ಟಿದೆಯಲ್ಲ. ನಮ್ಮನೆ ಕಡೆ ತಿರ್ಗಿ ಕೂಡ ನೊಡಬೇಡ್ವೆ? ಆಗ್ಲಿ....ಆಗ್ಲಿ ನಿಂಗೂ ಕಾಲ ನಾವು ಬಡಹಳ್ಳಿ ಜನ. ನೀನಾದ್ರೆ ಸಾಹುಕಾರ ಸರಾಫ. ಲಕ್ಷ್ಮಿಪುತ್ರ." ನಗೆಯಾಡಿದ ರಾಮರಾಯ. ವೆಂಕಟರಾಯರು ನುಡಿಯುವುದಕ್ಕೆ ಮುಂಚೆಯೇ ಸಾವಿತ್ರಮ್ಮ ನುಡಿದರು.

"ಇಲ್ಲಪ್ಪ ರಾಮರಾಯ. ನಿನ್ನ ಮನ್ಗೆ ಬರ್ದೆ ಉಂಟೆ! ಇನ್ನೂ ನೋಡು ಈಗ ಗಾಡಿಬಿಡ್ತಾ ಇದ್ದೇವೆ."

ಸೀತಮ್ಮ ಮಗುವನ್ನು ಎತ್ತಿಕೊಂಡು ತಲೆತಗ್ಗಿಸಿ ಸುಮ್ಮನೆ ನಿಂತಿದ್ದಳು. ವೆಂಕಟರಾಯರು ರಾಮರಾಯನ ಮನೆಕಡೆ ಬಲವಂತ ಜಾಸ್ತಿಯಾದುದರಿಂದ ಭೈರಯ್ಯ ತನ್ನ ಮನೆಯ ಬಾಗಿಲು ತೆಗೆದು ಕರೆಯುತ್ತಿದ್ದರೂ ಅತ್ತ ನಡೆದ. ಆದರೆ ಸಾವಿತ್ರಮ್ಮ

"ವೆಂಕಣ್ಣ ಮೊದ್ಲು ನಮ್ಮನೆಗೆ ಹೋದ ಶಾಸ್ತ್ರಮಾಡಿ ಆಮೇಲೆ ಅಲ್ಲಿಗೆ ಹೋಗೋಣ." ಕರೆದರು ತಾಯಿ.

ರಾಯರು ಹೆಜ್ಜೆಯನ್ನು ಹಿಂದಕ್ಕೆ ಹಾಕಲೇಬೇಕಾಯಿತು. ಇಷ್ಟು ಹೊತ್ತಿಗೆ ತಾಯಿ ಸೀತಮ್ಮನನ್ನು ಕರೆದುಕೊಂಡು ಮನೆಯ ಮೆಟ್ಟಿಲನ್ನು ಹತ್ತುತ್ತಿದ್ದರು.

ಭೈರಣ್ಣ ಮನೆಯನ್ನು ಗುಡಿಸಿ ಚೊಕ್ಕ ಗೊಳಿಸಿದ್ದ. ಮನೆಯಿಂದ ಹೊತ್ತುತಂದು ಇರಿಸಿದ್ದ ಈಚಲ ಚಾಪೆಯನ್ನು ಕೂಡಲು ಹಾಸಿದ.

"ಚೆಂದಾಗಿದ್ದೀರಾ....ಅವ್ನೋರಾ...." ಚೆನ್ನಿ, ಭೈರಣ್ಣನ ಹೆಂಡತಿ ಪ್ರಶ್ನಿಸುತ್ತ ಒಂದು ತಂಬಿಗೆ ಹಾಲನ್ನು ತೆಗೆದುಕೊಂಡು ಬಂದಳು.

"ತಗೋಬೇಕು ಧಣೀರ...." ಭೈರಣ್ಣನ ಕಣ್ಣಲ್ಲಿ ನಮ್ರತೆ ತುಳುಕುತ್ತಿತ್ತು. ಕೈಮುಗಿದು ಬೇಡುವ ರೀತಿಯಲ್ಲಿ ನಿಂತಿದ್ದ.

"ಕುಡಿಯೊ ಮಗು...." ಸಾವಿತ್ರಮ್ಮ ಭೈರಣ್ಣನ ಮುಖ ನೋಡಿ ಮಗನಿಗೆ ಆಜ್ಞಾಪಿಸಿದರು. "ಬಗ್ಸಿಕೊಡೆ....ನೀನ್ಯಾಕೆ ಹಾಗೆ ಕೂತುಕೊಂಡೆ" ಸೀತಮ್ಮನಕಡೆ ತಿರುಗಿ ನುಡಿದರು.

ಬಾಗಿಲಿನ ಕಡೆಗೆ ನೋಡಿಕೊಂಡೆ ವೆಂಕಟರಾಯರು ಹಾಲನ್ನು ಕುಡಿದರು. ರಾಮರಾಯ ಕಂಡರೆ ಮನಸ್ಸಿನಲ್ಲಿ ಏನಾದರೂ ಅಂದುಕೊಂಡಾನೆಂದು ಅವರ ಮನಸ್ಸು ಅಳುಕುತ್ತಿತ್ತು.

"ನೀನೂ ಕುಡ್ಯೆ ಬೇಕಾದ್ರೆ...." ಸೀತಮ್ಮನಿಗೆ ಸಾವಿತ್ರಮ್ಮ ಹೇಳಿದರೂ ಆಕೆ ಕುಡಿಯಲಿಲ್ಲ.

ಅಷ್ಟು ಹೊತ್ತಿಗೆ ಹೊರಗಡೆ ಪುನಃ ರಾಮರಾಯ ತಿರುಗಾಡಿದುದರಿಂದ ಇನ್ನೂ ಅಲ್ಲೇ ಕೂಡುವಂತಿರಲಿಲ್ಲ.

ಮೂವರೂ ಮನೆಯನ್ನೆಲ್ಲಾ ಒಮ್ಮೆ ಸುತ್ತಿ ಬಂದರು. ನೋಡುವರಿಲ್ಲದೆ ಮನೆ ಆಗಲೇ ಶಿಥಿಲವಾಗ ಹತ್ತಿತ್ತು.

ಸಾವಿತ್ರಮ್ಮನವರಿಗೆ ಹಿಂದಿನ ನೆನಪು ಉಕ್ಕಿಬಂತು. ಮನೆಯ ಒಂದೊಂದು ಭಾಗವೂ ಒಂದೊಂದು ಇತಿಹಾಸ ನುಡಿದಿದ್ದಿರಬಹುದು. ತಲೆಯ ಮೇಲಿನ ಸೆರಗನ್ನು ಮುಖದ ಮುಂದೆ ಸರಿಸಿ ಕಣ್ಣನ್ನು ಒರಸಿಕೊಂಡರು.

ಮೂವರೂ ರಾಮರಾಯರ ಮನೆಯನ್ನು ಪ್ರವೇಶಿಸಿದರು. ರಾಮರಾಯರ ಪತ್ನಿ ಲಕ್ಷ್ಮೀದೇವಮ್ಮ, ಸೀತಮ್ಮನನ್ನೂ, ಸಾವಿತ್ರಮ್ಮನವರನ್ನೂ ಸ್ವಾಗತಿಸಿ ಮುದ್ದು ಶಕುಂತಳನ್ನು ಚುಂಬಿಸಿ ಒಳಗೆ ಕರೆದುಕೊಂಡು ಹೋದಳು. ನಡುಮನೆಯಲ್ಲಿ ಮೊದಲೇ ಹಾಸಿದ್ದ ಜಮಖಾನೆಯ ಮೇಲೆ ರಾಮರಾಯರೂ ವೆಂಕಟರಾಯರೂ ಕುಳಿತುಕೊಂಡರು ಇಬ್ಬರ ಮನೆಯ ಯೋಗಕ್ಷೇಮದ ಪ್ರಶ್ನೆಯ ವಿನಿಮಯವಾಯಿತು. ಹಪ್ಪಳ ಸೊಂಡಿಗೆಯೊಂದಿಗೆ ಹುಳಿ ಅವಲಕ್ಕಿ ಬಂತು. ಅದು ಮುಗಿಯುವ ಹೊತ್ತಿಗೆ ಬೆಳ್ಳಿ ತಟ್ಟೆಯಲ್ಲಿ ಹುರಿಗಾಳು ಕೊಬ್ಬರಿ ಬಂತು. ಇದನ್ನು ಮುಗಿಸುವಷ್ಟರಲ್ಲಿ ವೆಂಕಟರಾಯರು ಊರಿನ ಸಮಾಚಾರವನ್ನೆಲ್ಲಾ ಕೇಳಿ ತಿಳಿದಿದ್ದರು. ಅವರೂ

ತಮ್ಮ ಕಛೇರಿಯ ನಡತೆಯನ್ನೂ ತಿಳಿಸಿದ್ದರು. ಕೊನೆಗೆ ಕಾಫಿಯನ್ನು ಕುಡಿಯುತ್ತ "ನೋಡು ರಾಮರಾಯ ನಾನು ನೋಡಿದ್ರಲ್ಲಿ ನೀನೇ ಸುಖ ಪುರುಷ. ನಂಗಂತೂ ಯಾಕೆ ಊರು ಬಿಟ್ಟು ಹೋಪ್ನೊ ಅನ್ನಿಬಿಟ್ಟಿದೆ. ಊರ ಜೀವನ ಬೇಜಾರು ಬಂದುಬಿಟ್ಟಿದೆ. ಬೇಕಾದಷ್ಟು ಆಸ್ತಿ ಇರೋ ವಾಗ ಯಾವ ಯೋಚ್ನೆಯೂ ಇಲ್ದೆ ಸುಖವಾಗಿ ಇಲ್ಲೆ ಯಾಕೆ ಹಿರೀರಮನೆ ದೀಪ ಹಚ್ಕೊಂಡು ಇರಬಾರ್ದು ಅಂತ ಅಮ್ಮ ದಿನವೂ ಅನ್ತಾ ಇರ್ತಾಳೆ. ಏನ್ಮಾಡ್ಲಿ ಸೇರಿಬಿಟ್ಟೆ ಕೆಲ್ಸಕ್ಕೆ ಈಗ ಬಿಡೋಹಾಗಿಲ್ಲ." ಎಂದು ತನ್ನ ಮನ ಸ್ಸಿನ ಅಂಧೋಳನವನ್ನು ತಿಳಿಸಿದರು.

"ನಾವಿತ್ರಮ್ಮ ಹೇಳೋದು ನಿಜವಾಗ್ಯೂ ಸರಿ. ಈಗಿನ ಕಾಲ್ದಲ್ಲಿ ನೋಡ್ಕೊಂಡ್ರೆ ವ್ಯವಸಾಯದಂತ ಒಳ್ಳೆ ಕೆಲ್ಸ ಇನ್ನೊಂದಿಲ್ಲ. ನಂಗಂತೂ ಇದು ಚೆನ್ನಾಗಿ ಒಗ್ಗಿ ಹೋಗಿದೆ. ಎಷ್ಟು ನನ್ನ ಮಗನ್ನ ಓದಿಸಿದ್ರೂ ಅವನ್ನ ಇಲ್ಲೆ ಇಟ್ಟುಕೊಳ್ತೀನೆ ಹೊರತು ಹಾಳು ಸರಕಾರಿ ಜವಾನ ಚಾಕರಿಗೆ ಸೇರಿಸೋಲ್ಲ.... 'ಜವಾನ ಚಾಕರಿ' ಅಂದೆ ಅಂತ ನಿಂಗೆ ಸಿಟ್ಟು ಬರ ಬಹುದು. ಆದರೆ ನಂಗೇನೊ ಹಾಗೆ ಅನ್ನಿಬಿಟ್ಟಿದೆ. ಇಲ್ಲೇ ಇದ್ರೆ ಚೆನ್ನಾಗಿತ್ತು. ಎಲ್ಲಾ ನೋಡ್ಕೊಳೋರು ಇಲ್ದೆ ಪೋಲಾಗಿ ಹೋಗ್ತಾ ಇದೆ." ರಾಮರಾಯ ನುಡಿದ.

ಒಳಗಡೆಯೂ ಇದೇ ವಿಷಯ ಚರ್ಚೆ ನಡೆಯುತ್ತಿತ್ತು. ಇಷ್ಟೆಲ್ಲಾ ಆಗುವ ಹೊತ್ತಿಗೆ ೫ ಗಂಟೆಯ ಮೇಲೆ ಆಗಿಹೋಯಿತು. ಅವಾಂತರವಾಗಿ ಹೊರಟು ರಾಮರಾಯರ ಜೊತೆಯಲ್ಲಿ ರಂಗನಾಥ ದೇವಸ್ಥಾನಕ್ಕೆ ಬಂದರು. ಅರ್ಚಕನಿಗೆ ಮೊದಲೇ ಹೇಳಿ ಕಳುಹಿಸಿದ್ದುದರಿಂದ ಅವನು ಬಂದು ಬಾಗಿ ಲನ್ನು ತೆಗೆದು ಇವರನ್ನೆ ಕಾಯುತ್ತ ಕುಳಿತಿದ್ದ. ಸುತ್ತಲೂ ಮರಗಳು ಆವರಿಸಿದ್ದುದರಿಂದ ದೇವಾಲಯದೊಳಗೂ ಕತ್ತಲು ವ್ಯಾಚಿಸಿತ್ತು. ನಾಲ್ಕಾರು ಹೊಂಗೆ ಎಣ್ಣೆಯ ದೀಪಗಳು ಅಲ್ಲಿ ಇಲ್ಲಿ ಉರಿಯುತ್ತಿದ್ದವು. ಕತ್ತಲ ದೇವಸ್ಥಾನದೊಳಗೆ ಬಂದೊಡನೆ ಮಗುವಿಗೆ ದಿಗ್ಭ್ರಮೆಯಾಗಿರ ಬೇಕು, ಅಳಹತ್ತಿತು. ತಾಯಿ ಸ್ವಲ್ಪ ಸಮಾಧಾನ ಮಾಡಿದರೂ ಅದು ಸುಮ್ಮನಾಗಲಿಲ್ಲ. ಅದರತ್ತ ಇನ್ಯಾರೂ ಅಷ್ಟು ಗಮನ ಕೊಡಲಿಲ್ಲ. ಹಣ್ಣು ಕಾಯನ್ನು ದೇವರಿಗೆ ನೈವೇದ್ಯ ಮಾಡಿಸಿದ್ದೂ ಆಯಿತು. ಮಂಗಳಾರತಿ ಯನ್ನು ಮಗುವಿನ ಕಣ್ಣಿಗೆ ತಾಯಿಯ ಕೈಯಿಂದ ಇಟ್ಟಿದ್ದಾಯಿತು. ಅರ್ಚಕ ತೀರ್ಥವನ್ನು ಮಗುವಿನ ಮುಖಕ್ಕೆ ಪ್ರೋಕ್ಷಿಸಿದ. ಆದರೂ ಮಗು ಅಳು

ವನ್ನು ನಿಲ್ಲಿಸಲಿಲ್ಲ. ಹೊರಗೆ ಬಂದು ನಿರ್ಮಲ ವಾತಾವರಣದಲ್ಲಿ ನಿಂತಾಗ ಸುಮ್ಮನಾಯಿತು.

ಸೂರ್ಯ ಆಗಲೇ ಮುಳುಗುತ್ತಿದ್ದ. ಸಂಜೆ ಬಿಸಿಲು ಮಗುವಿನ ಹಾಲು ಗೆನ್ನೆಯ ಮೇಲೆ ಹೊಂಬಣ್ಣದಿಂದ ನರ್ತಿಸುತ್ತಿತ್ತು. ಸುತ್ತಲೂ ಇದ್ದ ಮರಗಳ ಮರೆಯಲ್ಲಿ ಬೆಳಕು ತೂರಿ ಬರಬೇಕಾಗಿದ್ದುದರಿಂದ ಎಲೆಗಳ ಚಲನೆಯಿಂದ ಮಗುವಿನ ಕೆನ್ನೆಯಮೇಲೆ ಚಿನ್ನದ ಕಿರಣ ಕುಣಿಯುತ್ತಿತ್ತು. ಸುತ್ತಲೂ ತಿಳಿ ಹಸರು ಮೇಲುಗಡೆ ಅದೇತಾನೆ ಚಿಗುರಿದ್ದ ಪುಟ್ಟ ಪುಟ್ಟಗಿಳಿ ಹಸಿರು ಎಲೆಗಳು. ಪಕ್ಷಿಗಳು ಮೇಲೆ ಹಾರಿ ಬಂದಾಗ ಮರಿಗಳು ವಿಚಿತ್ರವಾಗಿ ಕೂಗಿ ತಮ್ಮ ಇರುವಿಕೆಯನ್ನು ನೆನೆಸುತ್ತಿದ್ದವು. ಸುತ್ತಲೂ ಸುರಮ್ಯ ವಾತಾವರಣ. ಶುಭ್ರಗಾಳಿಯ ತಿಳಿ ಸುಳಿತ. ಸೀತಮ್ಮ ನಿಸರ್ಗದ ಈ ರಮ್ಯ ಸೊಬಗಿನಿಂದ ಸಂತೋಷಗೊಂಡು ಪಶ್ಚಿಮಕ್ಕೆ ತಿರುಗಿದಾಗ ಸೂರ್ಯ ದಿಗಂತವನ್ನು ಸೇರಿದ್ದ.

“ಬನ್ನಿ....ಬನ್ನಿ....ಊರಿಗೆ ಹೋಗೊದ್ರಲ್ಲಿ ಕತ್ತಲಾಗುತ್ತೆ....” ಮುಂದೆ ಹೋದ ವೆಂಕಟರಾಯರು ಹಿಂದೆ ತಿರುಗಿ ನುಡಿದರು. ಸೀತಮ್ಮನಿಗೆ ಇದು ಕೇಳಿಸಲಿಲ್ಲ. ಕಿವಿಯಲ್ಲೇ ನುಡಿದಿದ್ದರೂ ಬಹುಶಃ ಕೇಳಿಸುತ್ತಿರಲಿಲ್ಲ. ಸೂರ್ಯಾಸ್ತದ ಸೊಬಗನ್ನು ಸವಿಯುವುದರಲ್ಲಿ ಸಂಪೂರ್ಣವಾಗಿ ಸ್ವಾಹವಾಗಿದ್ದಳು. ಚಿನ್ನದ ಕಿರಣ ಚಕ್ರದ ಹಲ್ಲುಗಳಂತೆ ಸುತ್ತಲೂ ಮೋಡದ ಹಿಂದುಗಡೆ ಕಾಣುತ್ತಿತ್ತು. ಕೆಳಗೆ ಕೆಂಪಗೆ ಕಾದ ಕಬ್ಬಿಣದ ಗುಂಡಿನಂತೆ ಸೂರ್ಯ ಹೊಳೆಯುತ್ತಿದ್ದ. ಸೂರ್ಯನ ಸುತ್ತಲಿನ ಮೋಡ ಕೆಂಬಣ್ಣ ತಳೆದಿತ್ತು. ಹಗುರಾಗಿ ಮುಂದೆ ಹಾಯ್ದಾಗ ಮೋಡದ ಆಕೃತಿ ವಿಚಿತ್ರವಾಗಿ, ರಂಗು ನೂರ್ಮಡಿಯಾಗಿ ನೋಟ ಮತ್ತೂ ಭವ್ಯವಾಗುತ್ತಿತ್ತು. ಇದರ ಮೇಲಿದ್ದ ಮೋಡ ಹೊಂಬಣ್ಣ ತಳೆದಿತ್ತು. ಗಾಳಿಯಿಂದ ಕೆಳಗೆ ಸರಿದಾಗ ಕೆಂಡದಂತೆ ಕೆಂಪಗಾಗುತ್ತಿತ್ತು. ಮೇಲೆ ಹಾರಿದಾಗ ಇನ್ನೂ ತಿಳಿಯಾಗುತ್ತಿತ್ತು.

ಸೂರ್ಯ ಮುಳುಗಿದರೂ, ಕಾಣುತ್ತಿದ್ದ ನೀಳ ಕಿರಣಗಳು ಮೋಡಗಳ ಹಿನ್ನೆಲೆಯಲ್ಲಿ ಪಶ್ಚಿಮ ದಿಗಂತಕ್ಕೆ ಪ್ರಭಾವಳಿಯನ್ನು ನಿರ್ಮಿಸಿದ್ದವು.

ಸೀತಮ್ಮ ಎಂದೂ ಇಂತಹ ಸೂರ್ಯಾಸ್ತವನ್ನು ಕಂಡಿರಲಿಲ್ಲ. ತಮ್ಮ ಊರಿನಲ್ಲಿ ಹಿತ್ತಲಿನಲ್ಲಿ ನಿಂತು ಭಾವಿಯಲ್ಲಿ ನೀರನ್ನು ಸೇದುತ್ತ ಸೂರ್ಯ ಮುಳುಗುವುದನ್ನು ಅನೇಕದಿನ ನೋಡಿದ್ದಳು. ಆದರೆ ಎಂದೂ ಅದರಲ್ಲಿ ಆಸಕ್ತಿ ಹುಟ್ಟಿರಲಿಲ್ಲ. ನೋಡಬೇಕೆಂಬ ಬಯಕೆಯೂ ಉದ್ಭವಿಸಿರಲಿಲ್ಲ.

ಬದಲಾಗಿ ಬಿಸಿಲು ಕಣ್ಣನ್ನು ಚುಚ್ಚಿದಾಗ ಕೈಯಿಂದ ಅಡ್ಡ ಕಟ್ಟುತ್ತಿದ್ದಳು.

" ಬಾರೆ....ಸಿಂಗೇನು ಹುಚ್ಚೇನೆ ಹೀಗೆ ನಿಂತುಕೊಂಡೆ. ತಂಡಿ ಗಾಳಿ ಹೊಡೀತಾ ಇದೆ. ಮಗೂಗೆ ನೆಗಡಿ ಗಿಗಡಿ ಆದೀತು " ಸಾವಿತ್ರಮ್ಮ ಹತ್ತಿರಬಂದು ಕೈಯನ್ನು ಹಿಡಿದು ಕೂಗಿದಾಗಲೇ ಅವಳು ಇತ್ತ ತಿರುಗಿದ್ದು. ರಾಮರಾಯರು ಮಾತನಾಡಿಕೊಂಡು ಬಹುದೂರ ಹೊರಟುಹೋಗಿದ್ದರು.

ಇನ್ನೂ ಇವರು ದೇವಸ್ಥಾನವನ್ನು ಬಿಟ್ಟು ಹತ್ತು ಗಜವೂ ಬಂದಿರ ಲಿಲ್ಲ. ಅಷ್ಟರಲ್ಲಿ " ಸೀತಮ್ಮ...ಸೀತಮ್ಮ" ಎಂದು ಕೂಗುತ್ತ ಗೋಪಾಲ ಹತ್ತಿರ ಬಂದ. ಸೀತಮ್ಮ ಕಣ್ಣನ್ನು ಅಗಲಿಸಿ ನೋಡಿದಳು. ಸಾವಿತ್ರಮ್ಮನೂ ಹತ್ತಿರ ಬಂದು ದೃಷ್ಟಿಸಿ ನೋಡಿ ಗುರುತಿಸಿದರು. ಮಗ ಕೂಗಿದ ಶಬ್ದ ಕೇಳಿ ರಾಮರಾಯರು ಹಿಂದೆ ಒಮ್ಮೆ ನೋಡಿ ಪುನಃ ಮಾತಿಗೆ ವಿಘ್ನ ಬಾರ ದಂತೆ ಮಾತನಾಡಿಕೊಂಡು ಮುಂದೆ ನಾಗಿದರು.

" ಏನು ಗೋಪಾಲ....ಎಷ್ಟು ದೊಡ್ಡೋನಾಗಿಹೋಗಿದ್ದೀಯೊ ? ಎಲ್ಲಿ ಹೋಗಿದ್ದೆ....? ನಾವು ಮನೆಗೆ ಬಂದಾಗ ಕಾಣಿಸಲೆ ಇಲ್ವಲ್ಲ." ಸಾವಿತ್ರಮ್ಮ ಅವನ ಮುಂಗುರಳನ್ನು ಹಿಂದಕ್ಕೆ ಸರಿಸಿದರು.

ಗೋಪಾಲ ಸೀತಮ್ಮನ ಸನಿಹಕ್ಕೆ ಬಂದು ಪುಟ್ಟಮಗುವಿನ ಕೆಂಪು ಕಾಲನ್ನು ಸವರುತ್ತಿದ್ದ. " ಅಮ್ಮ ಹೇಳಿದ್ಲು....ನೀವು ದೇವಸ್ಥಾನಕ್ಕೆ ಹೋದ್ರಿ ಅಂತ....ಬಂದುಬಿಟ್ಟೇ ನಾನೂ ..." ಗೋಪಾಲ ನುಡಿದ.

" ಸೀತಮ್ಮ....ಸೀತಮ್ಮ ನಂಕೊಡಿ ಎತ್ಕೊತೀನಿ....ಏನು ಹೆಸರಿಟ್ಟಿ ದೀರಿ....ನಂಕೊಡಿ ಸೀತಮ್ಮ ಬೀಳ್ಸಲ್ಲ...."ಗೋಪಾಲ ಮಗುವನ್ನು ಬಲವಂತ ದಿಂದ ಕೆಳಗೆ ಎಳೆಯುತ್ತಿದ್ದ.

" ಎಷ್ಟು ಚೆನ್ನಾಗಿದೆ ಪುಟ್ಟಮರಿ ...! ಲೇ....ಲೇ ಮರಿ....ಕಡ್ಲೆಪುರಿ ಕೊಡ್ತೀನಿ...." ತನ್ನ ಜೇಬಿನಲ್ಲಿ ಶೇಖರಿಸಿದ್ದ ಪುರಿಯನ್ನು ಒಂದು ಹಿಡಿ ಅವಳ ಮುಂದೆ ಹಿಡಿದ. ಸೀತಮ್ಮ ಗಟ್ಟಿಯಾಗಿ ನಕ್ಕುಬಿಟ್ಟಳು.

[" ಲೇ ...! ಲೇ....! ತಿನ್ಸಬೇಡ್ವೊ ಗಂಟಲಲ್ಲಿ ಸಿಕ್ಕಿಕೊಂಡೀತು...." ಸಾವಿತ್ರಮ್ಮ ಓಡಿಬಂದು ಅವನ ಕೈ ಹಿಡಿದು ಹಿಂದಕ್ಕೆ ಎಳೆದಳು. ಗೋಪಾಲ ಗಾಭರಿಯಾಗಿ ಒಂದು ಕ್ಷಣ ಸ್ತಬ್ಧನಾಗಿ ನೋಡುತ್ತ ನಿಂತ. ಸೀತಮ್ಮನ ಮುಖವನ್ನು ನೋಡಿದ. ಸೀತಮ್ಮ ಹುಸಿಯಾಗಿ ನಕ್ಕಳು.]

ಗೋಪಾಲ ಮಾತನಾಡದೆ ನಾಲ್ಕು ಹೆಜ್ಜೆ ಅವರನ್ನು ಅನುಸರಿಸಿದ. ಮೆಲ್ಲಮೆಲ್ಲನೆ ಪುನಃ ಸೀತಮ್ಮನ ಹತ್ತಿರಕ್ಕೆ ಬಂದ. " ಸೀತಮ್ಮ....ಕೊಡ್ರಿ ನಾನು ಬೀಳ್ಸಲ್ಲ..." ತನ್ನ ಸಣ್ಣ ಕೈಗಳನ್ನು ಮುಂದೆ ಚಾಚಿದ. ಕಣ್ಣ

ನಲ್ಲಿ ಆಸೆ ಮಿಡಿಯುತ್ತಿತ್ತು. ಸೀತಮ್ಮನ ಮನಸ್ಸು ಕರಗಿತು. ಮಗುವನ್ನು ತನ್ನ ಕೈಯಲ್ಲಿ ಹಿಡಿದುಕೊಂಡು ಅವನ ಕೈಯನ್ನು ಅದರ ಹೊಟ್ಟೆಯ ಸುತ್ತ ಬಳಸಿ ಹಿಡಿದುಕೊಂಡಿದ್ದ. ಮುಖದಲ್ಲಿ ನಗೆ ಮೆರೆದಾಡುತ್ತಿತ್ತು.

"ಸೀತಮ್ಮ....!" ಗೋಪಾಲನ ನುಡಿಯಲ್ಲಿ ಕೃತಜ್ಞತೆಯಿತ್ತು. ಪುಟ್ಟ ಬಾಯನ್ನು ಅಗಲಿಸಿ "ಲೇ....! ಮರಿ....!?" ಎಂದ. ಹಾಲುಗೆನ್ನೆಯನ್ನು ಮೆಲ್ಲಗೆ ಸವರಿದ.

ಹಿಂತಿರುಗಿ ನೋಡಿದ ಸಾವಿತ್ರಮ್ಮ ಮುಂದೆ ನಿಂತು ಗುಡಗಿದರು.

"ಲೇ....ಸೀತಾ! ನಿಂಗೇನೇ ಬಂತು ಗೋಪಾಲನ ಕೈಲಿ ಮಗು ಕೊಟ್ಟಿದ್ದೀಯಲ್ಲ....ಎಲ್ಲಾದ್ರೂ ಬೀಳ್ಸಿದ್ರೆ ?!" ಓಡಿಬಂದು ಅವನಕೈಯಿಂದ ಮಗುವನ್ನು ಕಿತ್ತುಕೊಂಡರು. ಮಗು ಗಟ್ಟಿಯಾಗಿ ಅಳಹತ್ತಿತು.

("ಲೇ ಸೀತಾ....ಮಗೂನ್ನ ಯಾಕೆ ಅಳಿಸ್ತಿಯಾ...." ಹೋಗುತ್ತಿದ್ದ ರಾಯರು ಹಿಂದೆ ತಿರುಗಿ ನೋಡದೆಯೆ ಪ್ರಶ್ನಿಸಿದರು. ಸೀತಮ್ಮ ಏನೂ ಉತ್ತರ ಕೊಡಲಿಲ್ಲ. ಸಾವಿತ್ರಮ್ಮ ಶಕುಂತಲೆಯನ್ನು ಹೆಗಲಿನಮೇಲೆ ಎತ್ತಿಕೊಂಡು ಮುದ್ದಿಸಿ ಸುಮ್ಮನಿರಿಸಿದರು. ಗೋಪಾಲ ಹಿಂದುಗಡೆ ಸುಮ್ಮನೆ ನಡೆಯುತ್ತಿದ್ದ.)

"ನಾಳೇನೂ ಇಲ್ಲೇ ಇರಿ ಸೀತಮ್ಮ" ಏನನ್ನೋ ನೆನೆದು ಸೀತಮ್ಮನ ಮುಂದೆ ನಿಂತು ನುಡಿದು ಮುಖವನ್ನು ಕಾತುರದಿಂದ ನೋಡತೊಡಗಿದ ಗೋಪಾಲ.

ಸೀತಮ್ಮ ಅತ್ತೆಯ ಮುಖವನ್ನು ನೋಡಿ ಸುಮ್ಮನೆ ನಕ್ಕಳು.

ಇವರು ಮನೆಯನ್ನು ಸೇರುವ ಹೊತ್ತಿಗೆ ಸಂಪೂರ್ಣವಾಗಿ ಕತ್ತಲು ಆವರಿಸಿತ್ತು. ಲಕ್ಷ್ಮೀದೇವಮ್ಮ ಇವರ ಬರುವನ್ನೆ ಕಾಯುತ್ತಾ ಬೀದಿಯ ಬಾಗಿಲಲ್ಲೇ ನಿಂತಿದ್ದಳು. ಸೀತಮ್ಮ ದೇವರ ಪ್ರಸಾದ ಕೊಟ್ಟು ಕುಂಕುಮ ಕೊಟ್ಟಳು.

"ನೀನು ನೋಡಿ ತುಂಬಾದಿವ್ಸ ಆಗಿತ್ತು ಅಲ್ವೆ....ಸೀತಮ್ಮ....ಎಲ್ಲೋ ನಿನ್ನ ಮದ್ವೆ ಆದಾಗ ಬಂದಿದ್ದೆ ಅಂತ ಕಾಣ್ಸತ್ತೆ....ಅಷ್ಟೆ...." ಲಕ್ಷ್ಮೀದೇವಮ್ಮ ಪ್ರಶ್ನಿಸಿದಳು. "ಇಲ್ಲೇ ಹಾಲಿನಲ್ಲಿ ತಣ್ಣಗೆ ಕೂತ್ಕೊಳ್ಳಿ...." ಅವರಿಗೆ ಹೇಳಿ ಒಲೆಯಮೇಲೆ ಇಟ್ಟಿದ್ದ ಸಾರನ್ನು ನೆನೆದು ಒಳಗೆ ಹೋದಳು.

ಅಪರೂಪವಾಗಿ ಬಂದವರೆಂದು ರಾತ್ರಿಯ ಊಟಕ್ಕೆ ಹೊಸದಾಗಿ ಸಾರು, ಪಲ್ಯ, ಚಟ್ನಿ ಎಲ್ಲವನ್ನೂ ಸಿದ್ಧಪಡಿಸಿದಳು ಲಕ್ಷ್ಮೀದೇವಮ್ಮ.

ಕಂಠಪೂರ್ತಿಯಾಗಿ ಎಲ್ಲರೂ ಊಟಮಾಡಿದರು. "ಇದ್ಯಾಕೊ

ನೀವು ಹೊಸ ಮನೆಗೆ ಬಂದಹಾಗೆ ಆಡ್ತಾ ಇದ್ದೀರ....ಸರಿಯಾಗಿ ಊಟಾನೇ ಮಾಡ್ಲಿಲ್ಲ...." ರಾಮರಾಯ ಹೆಂಡತಿ ಇಬ್ಬರೂ ಸೀತಮ್ಮ ರಾಯರನ್ನು ಆಕ್ಷೇಪಿಸಿದರು. ನಿಜವಾಗಿಯೂ ಅವರು ದಿನಕ್ಕಿಂತ ಸ್ವಲ್ಪ ಹೆಚ್ಚಿಗೇನೆ ಊಟಮಾಡಿದ್ದರು. ಲಕ್ಷ್ಮೀದೇವಮ್ಮ ಶಕುಂತಳನ್ನು ಎತ್ತಿ ಮುದ್ದಿಸಿದಳು. ತೃಪ್ತಿಯಾಗುವಷ್ಟು ಮುತ್ತನ್ನು ಕೊಟ್ಟು ಕಾಲಬೆರಳಿನಿಂದ ತಲೆ ಕೂದಲಿನ ತನಕ ಹೊಗಳಿದಳು. "ಕಲ್ಲುಗುಂಡಿನಂತ ನೂರು ಮಕ್ಕಳ ಹಡೆಯೋಕ್ಕಿಂತ ಇಂಥಾದು ಒಂದನ್ನ ಹಡೆದ್ರೂ ಸಾಕು...." ಎಂದು ನೈಜ ನಲ್ಮೆಯನ್ನು ವ್ಯಕ್ತಗೊಳಿಸಿದಳು.

ರಾಮರಾಯರೂ, ವೆಂಕಟರಾಯರೂ ಮಹಡಿಯ ಮೇಲೆ ಮಲಗಿದ ಮೇಲೂ ಇವರು ಬಹಳ ಹೊತ್ತು ಮಾತನಾಡುತ್ತಲೇ ಇದ್ದರು. ಎಂಟು ಗಂಟೆಗೆಲ್ಲಾ ಕನಸಿನ ರಾಜ್ಯದಲ್ಲಿರುತ್ತಿದ್ದ ಗೋಪಾಲ ತಾನೂ ಮಾತು ಕೇಳುತ್ತಾ ತಾಯಿಯ ಪಕ್ಕದಲ್ಲೇ ಕುಳಿತಿದ್ದ. ಮಗು ಸೀತಮ್ಮನ ತೊಡೆಯ ಮೇಲೆಯೇ ಮಲಗಿ ನಿದ್ರೆ ಹೋಗಿತ್ತು. ಒಂದು ಸೀರೆಯನ್ನು ಜಮುಖಾನದ ಮೇಲೆ ಹಾಸಿ ಸೀತಮ್ಮ ಮಗುವನ್ನು ಅದರ ಮೇಲೆ ಮಲಗಿಸಿದಳು. ತಾಯಿಯ ಪಕ್ಕದಲ್ಲಿ ಸುಮ್ಮನೆ ಕುಳಿತಿದ್ದ ಗೋಪಾಲ ಚಂಗನೆ ನೆಗೆದು ಮಗುವಿನ ಬಳಿಯಲ್ಲಿ ಹೋಗಿ ಕುಳಿತುಕೊಂಡ. ಅವನ್ನೇ ದಿಟ್ಟಿಸುತ್ತಿದ್ದ ಲಕ್ಷ್ಮೀದೇವಮ್ಮ ಗಟ್ಟಿಯಾಗಿ ನಕ್ಕುಬಿಟ್ಟಳು. ಸೀತಮ್ಮ, ಸಾವಿತ್ರಮ್ಮ ಕುತೂಹಲದಿಂದ ಅತ್ತ ನೋಡಿದರು.

"ಲೇ ಗೋಪಾಲ....ಅಷ್ಟೊಂದು ನೋಡ್ತಾ ಇದ್ದೀಯಲ್ಲಾ. ಏನು ಮದ್ವೆ ಆಗ್ತೀಯೇನೊ....ನೋಡು ಚೆನ್ನಾಗಿದ್ರೆ....ಒಪ್ಗೆ ಆದ್ರೆ ಈಗ್ಲೆ ಗೊತ್ತು ಮಾಡಿಬಿಡೋಣ." ಲಕ್ಷ್ಮೀದೇವಮ್ಮ ಪ್ರಶ್ನಿಸಿದಳು. ಸೀತಮ್ಮ, ಸಾವಿತ್ರಮ್ಮ ಇಬ್ಬರೂ ನಕ್ಕರು.

"ಏನ್ಹೇಳಪ್ಪ...." ಸಾವಿತ್ರಮ್ಮ ಪ್ರಶ್ನಿಸಿದರು.

"ಹೂಂ! ಆಗ್ತೀನಿ...." ಗೋಪಾಲ ತಲೆಯೆತ್ತಿ ಗಂಭೀರವಾಗಿಯೇ ನುಡಿದ.

"ಘಾಟಿ ಕಣೋ ನೀನು...." ಸೀತಮ್ಮ ನುಡಿದಳು.

"ಹ್ಞೂ ಬಿಡಪ್ಪ ಹೋಗ್ಲಿ ಮನೆ ಹತ್ರದ ಸೊಸೇನೇ ಸಿಕ್ಕಿದಳಲ್ಲ ನಂಗೆ" ತಾಯಿ ನುಡಿದಳು. ಸೀತಮ್ಮ ಹುಸಿಯಾಗಿ ನಕ್ಕಳು.

ಮಲಗಿದ್ದ ಮಗುವನ್ನು ಎಬ್ಬಿಸಿಯಾನೆಂದು ಲಕ್ಷ್ಮೀದೇವಮ್ಮ ಮಗ ನನ್ನು ತನ್ನ ಹತ್ತಿರ ಎಳೆದುಕೊಂಡಳು.

ರಾಮರಾಯರ ಆದರಾತಿಥ್ಯದಿಂದ ಬಿಡುಗಡೆ ಹೊಂದಿ ಭೈರಣ್ಣ ತಂದಿದ್ದ

ಬಂಡಿಯನ್ನು ಹತ್ತಿ ಊರಿನ ಕಡೆಗೆ ಹೋಗಬೇಕಾದರೆ ಸಾಯಂಕಾಲ ನಾಲ್ಕು ಗಂಟೆ ಆಯಿತು. ಬೆಳಿಗ್ಗೆ ಎದ್ದವರು ಹೊರಡುತ್ತೇವೆಂದು ಹೇಳಿದರೆ ಅಪರೂಪವಾಗಿ ಮನೆಗೆ ಬಂದವರು ಎಣ್ಣೆ ನೀರನ್ನು ಹಾಕಿಕೊಳ್ಳದೆ ಹೋಗುವುದು ಸರಿಯಲ್ಲವೆಂದೂ ಹಾಗೇ ಕಳುಹಿಸುವುದು ಸಂಪ್ರದಾಯವಲ್ಲವೆಂದೂ ರಾಮರಾಯರು ಹೇಳಿದುದರಿಂದ ಎದುರು ಯಾರೂ ನುಡಿಯುವಂತಿರಲಿಲ್ಲ. ಮೇಲಾಗಿ ಅವತ್ತು ಭಾನುವಾರ. ವೆಂಕಟರಾಯರ ಯಾವ ಹುಸಿ ಕಾರಣವೂ ಅವರಿಗೆ ಬಲಿಕೊಡಲಿಲ್ಲ. ಬೆಳಗ್ಗೆ ಸೊಗಸಾದ ಕಾಫಿ ತಿಂಡಿ, ನೀರು ಹಾಕಿಕೊಂಡು ಬಳಲಿದ ಮೈಗೆ ತ್ರಾಣ ಕೊಡುವ ಹಾಲುಕೀರು, ಚಿತ್ರಾನ್ನ, ಒಬ್ಬಟ್ಟು ಇವರನ್ನು ಸ್ವಾಗತಿಸಿ ಪೂರ್ಣ ಬಳಲಿಸಿತು. ಸಾಕು-ಸಾಕೆಂದು ಹೇಳುತ್ತಿದ್ದರೂ "ನಿಮ್ಮದು ಯಾಕೊ ಸಂಕೋಚಪ್ರಕೃತ್ತಿ ಜಾಸ್ತಿಯಾಗ್ತಾ ಇವೆ" ಲಕ್ಷ್ಮೀದೇವಮ್ಮನವರ ಬಾಯಿ ನುಡಿಯುತ್ತಿತ್ತು, ಕೈ ಎರಡು ಮೂರು ಒಬ್ಬಟ್ಟನ್ನು ಇವರ ಎಲೆಗೆ ಕೆಡವಿರುತ್ತಿತ್ತು. "ನಿಮಗೋಸ್ಕರ ಮಾಡಿದ್ದೇನೆ....ಕುಡೀರಿ....ಆದ್ರು ನಂಗೇನು ಅಷ್ಟು ಚೆನ್ನಾಗಿ ಮಾಡೋಕೆ ಬರೋಲ್ಲ...ಚೆನ್ನಾಗಿಲ್ವೊ ಏನೊ—ಅದಕ್ಕೆ ನೀವು ಕುಡೀತಾ ಇಲ್ಲ..." ಹಾಲುಕೀರಿನ ಸುವಾಸನೆಯೇ ಅದರ ಚೆನ್ನವನ್ನು ತಿಳಿಸುತ್ತಿದ್ದರೂ ಬೇಕೆಂದೇ ನುಡಿದು ಹೊಟ್ಟೆಯ ಮುಕ್ಕಾಲನ್ನು ಇದರಿಂದಲೇ ತುಂಬಿದಳು. ಚಿತ್ರಾನ್ನ, ಆಂಬೊಡೆ ಇದನ್ನು ತುಂಬಿದ ಹೊಟ್ಟೆಗೆ ಸೇರಿಸಲೇಬೇಕಾಯ್ತು.

"ನಮ್ಮನೇಲಿ ಬಿಸಾಕೋ ಪದ್ಧತೀನೇ ಇಲ್ಲ....ಏನಾದ್ರೂ ಬಿಸಾಕಿದ್ರೆ ನಂಗೆ ರೇಗಿಹೋಗುತ್ತೆ ಕಷ್ಟಪಟ್ಟು ಮಾಡೊದು ಬಿಸಾಕೋಕ್ಕಾ?" ರಾಮರಾಯರು ಊಟಮಾಡುತ್ತ ನುಡಿದುದರಿಂದ ಹೆಚ್ಚಾದುದನ್ನು ಬಿಸಾಕುವ ಧೈರ್ಯ ಯಾರಿಗೂ ಬರಲಿಲ್ಲ.

"ಗೋಪಾಲಂಗೆ ಇವತ್ತು ಊಟ ತಿಂಡಿ ಯಾವ್ದೂ ಬೇಡ...ಶಕುಂತಲ ಒಬ್ಳಿದ್ರೆ ಸಾಕು...." ತಾಯಿ ರೇಗಿಸಿದರು. ಗೋಡೆಯ ಪಕ್ಕದಲ್ಲಿ ಮಲಗಿದ್ದ ಶಕುಂತಲಳನ್ನು ನೋಡುತ್ತಿದ್ದನೇ ವಿನಃ ಸರಿಯಾಗಿ ಅವನು ಊಟ ಮಾಡಿರಲಿಲ್ಲ. ಅವಳು ನಿದ್ದೆಯಿಂದ ಎದ್ದರೆ ಸಾಕೆಂದು ಅವನ ಮನ ಬಯಸುತ್ತಿತ್ತು. ಊಟದ ಮಧ್ಯದಲ್ಲಿ ಎಲ್ಲಿ ಎಬ್ಬಿಸುತ್ತಾನೊ ಎಂದು ತಾಯಿ ಅನುಮಾನಿಸುತ್ತಿದ್ದಳು.

ಹನ್ನೆರಡೂವರೆ ಗಂಟೆಗೆ ಊಟಕ್ಕೆ ಅಡಿಗೆ ಮನೆಗೆ ಬಂದವರು ಊಟ ಮುಗಿಸಿ ಹಾಲನ್ನು ಹಾದು ಹಿತ್ತಲಿಗೆ ಹೋಗುವಾಗ ಹಾಲಿನಲ್ಲಿದ್ದ ದೊಡ್ಡ ಗಡಿಯಾರ ಎರಡು ಬಾರಿಸಿತು.

ಬಿಸಿಲು ತಂಪಿದ ಮೇಲೆ ಸುಮಾರು ನಾಲ್ಕು ಗಂಟೆ ಹೊತ್ತಿಗೆ ವೆಂಕಟ ರಾಯರ ಮನೆಯವರು ಹೊರಟು ನಿಂತರು. ಹೊರಗಡೆ ಗಾಡಿಯಲ್ಲಿ ಹುಲ್ಲನ್ನು ಹಾಕಿ ಜಮಖಾನೆಯನ್ನು ಹಾಸಿ ಭೈರಯ್ಯ ಸಿದ್ಧನಾಗಿ ಕುಳಿತಿದ್ದ. ಕೊರಳಿಗೆ ಘಲು ಘಲು ಎನ್ನುವ ಗೆಜ್ಜೆಯನ್ನು ಕಟ್ಟಿದ್ದ ಅಚ್ಚ ಬಿಳಿಯ ರಾಮ ರಾಯರ ಹೋರಿಗಳು ನೊಗದ ಬಳಿಯಲ್ಲಿ ಹುಲ್ಲನ್ನು ತಿನ್ನುತ್ತ ಇವರ ಬರು ವನ್ನೇ ನಿರೀಕ್ಷಿಸುತ್ತಿದ್ದವು.

ಸೀತಮ್ಮ, ಸಾವಿತ್ರಮ್ಮ ಗಾಡಿಯಲ್ಲಿ ಬಂದು ಕುಳಿತರು. ಸೀತಮ್ಮ ನಿಗೆ ತೌರುಮನೆಯನ್ನು ಬಿಡುವಾಗಿನ ದುಃಖ ಈಗ ಅವಳಿಗೆ ಆಗುತ್ತಿತ್ತು. ಒಂದು ದಿನದಲ್ಲಿ ಅಷ್ಟು ಒಲುಮೆ ಬೆಳೆದಿತ್ತು.

" ಬರ್ತೀರಾ........ಸೀತಮ್ಮ........" ಬೀದಿಯ ಬಾಗಿಲಲ್ಲಿ ನಿಂತಿದ್ದ ಗೋಪಾಲ ಪ್ರಶ್ನಿಸಿದ. "ಲೇ ಪುರಿ....ಶಕುಂತಲ....ಹೋಗಿ ಬರ್ತೀಯೇನೆ...." ಮುಂದುವರಿಸಿ ತಾನೂ ಮುಂದಕ್ಕೆ ಬಂದ.

" ಬರ್ತೀವಿ....ಲಕ್ಷ್ಮೀದೇವಮ್ಮ....ಬರ್ತೀನಿ ಗೋಪಾಲ...." ಸೀತಮ್ಮ ನುಡಿದಳು.

" ಇನ್ನೇನು ಸಮಾಚಾರ ರಾಮರಾಯ....ಬರ್ಲಾ ನಾನು...." ವೆಂಕಟ ರಾಯರು ರಾಮರಾಯನನ್ನು ಪ್ರಶ್ನಿಸಿದರು.

" ಅಪರೂಪಕ್ಕೆ ಬಂದೋರು ನಾಲ್ಕು ದಿನ ಇದ್ದು ಹೋಗಿ ಅಂದ್ರೆ ಕೇಳ್ಳಿಲ್ಲ ಹೊರ್ಟು ನಿಂತ್ರಿ....ಸರಿ, ಹೋಗಿ ಬನ್ನಿ....ನಾನೂ ಕಲ್ತು ಕೊಳ್ತೀನೆ. ನಿಮ್ಮನೆಗೆ ಬಂದ್ರೆ ಒಂದು ಗಂಟೆ ಇದ್ದು ಕೆಲ್ಸ ಇದೆ ಅಂತ ತಪ್ಪಿಸಿ ಕೊಳ್ತೀನೆ...." ನಗುತ್ತ ನುಡಿದ ರಾಮರಾಯ. ವೆಂಕಟರಾಯರು ನಕ್ಕರು.

" ಬರ್ತೀವೆ...." ಸಾವಿತ್ರಮ್ಮ ಎಲ್ಲರನ್ನೂ ಉದ್ದೇಶಿಸಿ ನುಡಿದರು.

ಭೈರಣ್ಣ ಎತ್ತಿಗೆ ' ಹೆ ' ಅಂದ.

ನೆಗೆಯುತ್ತ ಹೋರಿಗಳು ಮುಂದೆ ಸಾಗಿದವು. ಸೀತಮ್ಮ, ಸಾವಿತ್ರಮ್ಮ ಬಹು ಹೊತ್ತು ಹಿಂದೇ ನೋಡುತ್ತಿದ್ದರು.

ರಾಮರಾಯ, ಲಕ್ಷ್ಮೀದೇವಮ್ಮ ಸ್ವಲ್ಪ ಹೊತ್ತು ನಿಂತಿದ್ದು ಒಳಗೆ ಹೋದರು. ಗೋಪಾಲ ಬಹು ಹೊತ್ತು ಹೊರಗೇ ನಿಂತಿದ್ದ.

## ೪

ಅವರಿವರ ಹೆಗಲಮೇಲೆ ನಲಿದು ಬೆಳದ ಶಕುಂತಲ ದೇಕಿ, ಅಂಬಗಾ ಲಿಕ್ಕಿ ಇಂದು ಗೋಡೆ ಹಿಡಿದು ನಡೆಯ ಹತ್ತಿದ್ದಾಳೆ. ತಾಯಿ ಸೀತಮ್ಮ

ಅಜ್ಜಿ ಸಾವಿತ್ರಮ್ಮ ಮಗುವಿನ ಮುಗ್ಧ ಆಟವನ್ನು ನೋಡಿ ನಲಿಯುತ್ತಾರೆ. "ಮ್ಮ....ಮ...." ಎಂದು ಪುಟ್ಟ ಬಾಯನ್ನು ಅಲುಗಾಡಿಸಿ ಜೊಲ್ಲು ಸುರಿಸಿ ಗೋಡೆಯ ಆಸರೆ ಬಿಟ್ಟು ತಾನೇ ಎದ್ದು ನಿಲ್ಲಲು ಹೋದಾಗ ತ್ರಾಣವಿಲ್ಲದೆ ಯಾವುದಾದರೂ ಒಂದು ಪಕ್ಕಕ್ಕೆ ಉರುಳುತ್ತಾಳೆ. ತಾಯನ್ನು ಒಮ್ಮೆ ನೋಡಿ ನಕ್ಕು ಪುನಃ ಗೋಡೆ ಹಿಡಿದು ನಡೆಯ ಹತ್ತಿದಾಗ ಅಜ್ಜಿಯ ಸಂತೋಷಕ್ಕೆ ಪಾರವಿಲ್ಲ. ಮುದಿಕಾಲು ನಡಗುತ್ತಿದ್ದರೂ ಬೊಚ್ಚು ಬಾಯನ್ನು ಅಲುಗಾಡಿಸುತ್ತ ಓಡಿಬಂದು ಮಗುವನ್ನು ಎತ್ತಿಕೊಂಡು ಎಷ್ಟು ದೃಷ್ಟಿ ತೆಗೆದರೂ ಸಾಲದು.

(" ಅಯ್ಯೊ....ನನ್ನ ಚಿನ್ನ ಅದೆಷ್ಟು ಆಟವಾಡ್ತೀಯೆ...ನಿನ್ನ ಆಟಾನೇ ನೋಡ್ತಾ ಕೂತಿರೊಣಾನ್ನಿಸ್ತಲ್ಲೆ....! ಆದ್ರೆ ಹಾಳು ಕೆಲ್ಸ ಬಿಟ್ಟದಾಗೆ ಬಿದ್ದಿದೆ....ನೀನು ಮಾಟಗಾತಿಕಣೆ. ಐದುನಿಮಿಷ ನಿನ್ನ ನೋಡ್ದೆ ಇದ್ರೆ ಅದ್ಯಾಂಗಾಗೊ ಆಗುತ್ತೆ....ಎಲ್ಲಾದರೂ ಚೆನ್ನಾಗಿರೆ....ನನ್ನ ಚಿನ್ನ" ಮುಖವನ್ನು ತನ್ನ ಎರಡು ಕೈಯಿಂದಲೂ ನೀವಾಳಿಸಿ ಕೆನ್ನೆಗೆ ತನ್ನ ಹಲ್ಲಿಲ್ಲದ ಬಾಯನ್ನು ಅದುಮಿ ಅವಳನ್ನು ಎದೆಗೆ ಅಪ್ಪಿಕೊಂಡರು ಸಾವಿತ್ರಮ್ಮ.)

ಶಕುಂತಲಳ ತುಟಿ ಬಿರಿದು ಹುಸಿನಗೆ ತಲೆಹಾಕಿತು. ತನ್ನ ಪುಟ್ಟ ಕೈಯನ್ನು ಮೇಲಕ್ಕೆ ಎತ್ತಿ ಬಗ್ಗಿದ್ದ ಅಜ್ಜಿಯ ಕೆನ್ನೆಗೆ ಮೆಲ್ಲಗೆ ಹೊಡೆದಳು. ಅಜ್ಜಿ, ಮೊಮ್ಮಗಳ ಆಟವನ್ನು ನೋಡಿ ಒಳಗೊಳಗೇ ನಗುತ್ತಿದ್ದ ಸೀತಮ್ಮ ಓಡಿಬಂದು ಮಗಳನ್ನು ಎತ್ತಿಕೊಂಡಳು.

" ಲೇ....ಗಟವಾಣಗಿತ್ತಿ....ಅಜ್ಜೀನ ಹೊಡೆಯೊಹಾಗೆ ಆದೆಯೇನೆ....!" ತಾಯಿ ಮೆಲ್ಲಗೆ ಹಾಲು ಗಲ್ಲವನ್ನು ಚಿವಿಟಿದಳು. ಅಳಲಾರಂಭಿಸಿದ ಮಗುವನ್ನು ಸಾವಿತ್ರಮ್ಮ ಎತ್ತಿಕೊಂಡರು.

(" ಸೀತಾ....ಅದೇನು ಮಗೂನೊ ಅಥವಾ ಮರದ ಕೊರಡೊ....? ಚೆನ್ನಾಗಿದೆ. ನಿನ್ಹಾಗೇ ಅಲ್ವೆ ಎಲ್ಲರೂ ಮಕಳ್ನ ಸಾಕೋದು? ಚೆನ್ನಾಗಿದೆ....ನನ್ನ ಚಿನ್ನ ನನ್ನ ಎಷ್ಟು ಬೇಕಾದ್ರೂ ಹೊಡೀಲಿ. ಏನ್ಮಾಡಿದ್ರೂ ಇದು ನನ್ನ ಮೊಮ್ಮಗು...." ಸಾವಿತ್ರಮ್ಮ ಸೊಸೆಯ ಕೈಯಿಂದ ಮಗುವನ್ನು ಕಿತ್ತುಕೊಂಡು ತಾನು ಎತ್ತಿಕೊಂಡರು. "ಹೂಂ....ಮ್ಮಾ....ಮಾ...." ಶಕುಂತಲ ಅಳತೊಡಗಿದಳು.)

(" ಲೇ ಕಳ್ಳಿ....ಏನ್ಮಾಡಿದ್ರೂ ಅವಳು ನಿನ್ನಮ್ಮ....ಎಷ್ಟು ಮಾಡಿದ್ರೆ ತಾನೇ ನಾನು ಅಮ್ಮ ಆಗ್ತೀನಾ....ನಿಂಗೆ." ಕಪಟಕೋಪ ತಾಳಿ ಅಜ್ಜಿ ಪಕ್ಕಕ್ಕೆ ತಿರುಗಿದರು.

ಶಕುಂತಲ ತಾಯಿಯ ಕೊರಳನ್ನು ಕೈಯಿಂದ ಸುತ್ತುವರಿದಿದ್ದವಳು ಅಜ್ಜಿಯ ಕಡೆಗೆ ಕೈಚಾಚಿ "ಅಜ್ಜಿ....ಜ್ಜಿ..." ಎಂದಳು.

ಅಜ್ಜಿಯ ಕೋಪ ಎತ್ತಲೋ ಸರಿದು ಹೋಯಿತು.

"ಅಯ್ಯೊ ಚಿನಾಲಿ....! ನಿಮ್ಮ ಅಮ್ಮನ ಹತ್ತಿರಾನೇ ಇರಮ್ಮ. ನಂಗೆ ಬೇಕಾದಷ್ಟು ಕೆಲ್ಸ ಬಿದ್ದಿದೆ....ಅಳಬೇಡ ಹಾಗೇ ಆಟವಾಡ್ತಿರಮ್ಮ" ಅವಳ ಮುದ್ದು ಕೆನ್ನೆಗೆ ಮುತ್ತು ಕೊಟ್ಟರು ಅಜ್ಜಿ.)

ಶಕುಂತಲ ನಕ್ಕಳು.

"ಚೆನ್ನಾಗಿದೆ....ಚೆನ್ನಾಗಿದೆ. ಬೆಳಗ್ಗೆ ಇಂದ ಕೆಲ್ಸ ಮಾಡಿ ಸುಸ್ತಾಗಿ ಮನೆಗೆ ಬಂದ್ರೆ ಮಾತೂ ಆಡಿಸೋರಿಲ್ಲ. ಯಾವಾಗ್ಲೂ ಮಗುವಾಯ್ತು... ನೀವಾಯ್ತು. ಇವಳೊಬ್ಬಳು ಮಾಟಗಾತಿ. ಮನೆಯೋರಿಗೆಲ್ಲಾ ಸೋಮಾರಿ ತನ ಕಲ್ಸಿಬಿಟ್ಟಿದ್ದಾಳೆ..." ಮನೆಗೆ ಬಂದ ರಾಯರ ತುಟಿಗಳು ಅಲುಗಿ ನಾಲಿಗೆ ಇಷ್ಟನ್ನು ನುಡಿದರೂ ಅರಳಿದ್ದ ಕಣ್ಣು ಮನಸ್ಸಿನಲ್ಲಿಯೇ ಸಂತೋಷ ವನ್ನು ತಿಳಿಸುತ್ತಿತ್ತು. ಒಳಗೆ ಬಂದಮೇಲೆ ಮಗುವನ್ನು ಕೈಗೆ ಎತ್ತಿಕೊಂಡರು. ತಂದಿದ್ದ ಹೂವನ್ನು ಹೆಂಡತಿಯ ಕೈಗೆ ಕೊಟ್ಟು "ಅಮ್ಮಾ ಇವತ್ತು ಏನಾದ್ರೂ ತಿಂಡಿ ಮಾಡಿದ್ದೀಯೊ...ಅಥವ ಬರೀ ಕಾಫೀನೋ....?" ಪ್ರಶ್ನಿಸಿದರು.

"ಹಾಳು ಮುಂಡೇಳು ನಂಗೆ ಜ್ಞಾನವೇ ಇಲ್ಲ. ಆಗ್ಲೇ ನೀನು ಬರೋ ಹೊತ್ತಾಗಿದ್ರೂ ಇವಳ್ಜತೇಲಿ ಆಟ ಆಡ್ತಾ ಕೂತಿದ್ದೇನೆ....ಈಗ ಐದು ನಿಮಿಷ ದಲ್ಲಿ ಮಾಡಿಬಿಡ್ತೇನಿ ಕಾಫಿ...ಮಧ್ಯಾಹ್ನ ಗುಲಪಾವಟೆ ಮಾಡಿದ್ದೆ... ಗುರುವಾರ...ಗುರುಗಳ ನೇವಿದ್ಯಕ್ಕೆ ಅಂತ...ಅದೇ ಆಗುತ್ತೆ ತಿಂಡಿ ...ಈಗ ಹೊತ್ತಾಯ್ತು ಇನ್ನೆಲ್ಲಿ ಮಾಡೋದು" ಹೇಳಿಕೊಂಡು ತಾಯಿ ಅಡುಗೆ ಮನೆಗೆ ಹೊರಟುಹೋದರು.

"ಲೇ....ಶಕ್ಕೂ..." ಮಗುವಿನ ಮುದ್ದು ಮುಖವನ್ನು ತನ್ನ ಕಡೆಗೆ ತಿರುಗಿಸಿಕೊಂಡು ಏನೋ ಹೇಳಲು ಬಯಸಿದರು ರಾಯರು.

"ಥೂ ! ಅದೇನು ಶಕ್ಕೂ....ಪಿಕ್ಕೂ ಅಂತ ಹಾಳು ಹೆಸರು. ನನ್ನ ಮಗೂನ ಹಾಗೆಲ್ಲ ಕೂಗಬೇಡಿ" ಸೀತಮ್ಮ ಸಿಟ್ಟಾಗಿ ಮಗುವನ್ನು ಕಿತ್ತು ಕೊಳ್ಳಲು ಹೋದಳು.

"ನನ್ನ ಮಗೂನ ನಾನು ಹ್ಯಾಗೆ ಬೇಕಾದ್ರೂ ಕೂಗಿಕೊಳ್ತೀನಿ ನಿಂಗೇನು....ನಿಂಗೆ ಹ್ಯಾಗೆ ಬೇಕೊ ಹಾಗೆ ಕೂಕ್ಕೊ...ನಾನೇನೊ ಕೂಗೊದು ಸಕ್ಕು ಅಂತಲೇ....ಅಲ್ವೇನೆ....? ನೀನು ನನ್ನ ಮಗಳು ಅಲ್ವೇನೆ ?" ಮಗು ವಿನ ಕೆನೆಯನ್ನು ಮುದ್ದಿಸಿದರು ರಾಯರು.

ಮಗು ಅಳತೊಡಗಿತು. ರಾಯರ ಮೀಸೆ ಅದರ ಹಾಲು ಕೆನ್ನೆಯನ್ನು ನೋಯಿಸಿತ್ತು.

"ಸುಮ್ನಿರಿ ಅಂದ್ರೆ ಮಗೂನ ಯಾಕೆ ಅಳಿಸ್ತೀರಾ....ಬಾರೆ....ಮಗು ....ಶಕುಂತಳ....ನನ್ನ ಕಂದ....ನನ್ನ ಚಿನ್ನ." ಸೀತಮ್ಮ ಕೈ ಚಾಚಿದಳು.

ವೆಂಕಟರಾಯರು ಜೇಬಿನಿಂದ ಬಿಸ್ಕತ್ತನ್ನು ತೆಗೆದು ತೋರಿಸಿದರು. ತಾಯಿ ಹತ್ತಿರ ಹೋಗಲು ಹಾಲಿದ್ದವಳು ಸುಮ್ಮನಾಗಿ ಬಿಸ್ಕತ್ತಿನ ಕಡೆಗೆ ಕೈ ಚಾಚಿದಳು. ತಂದೆಯ ಕೊರಳನ್ನು ಬಳಸಿ ಬಿಸ್ಕತ್ತನ್ನು ಕೈಯಲ್ಲಿ ಹಿಡಿದು ಕೊಂಡು ತಿನ್ನತೊಡಗಿದಳು.

"ನೋಡು ಇದಕ್ಕೆ ಇನ್ನೊಂದು ಬೇಕಂತೆ...." ಮತ್ತೆ ಮುದ್ದಿಸಿದರು ರಾಯರು. ತಾಯಿಯೂ ನಕ್ಕಳು.

("ಕಾಫಿ ಆಯ್ತು....ಕೈಕಾಲು ತೊಳೆದುಕೊಂಡು ಬಾ ಹೋಗು.... ನಾನು ಇನ್ನೂ ಮಾಡಿಲ್ಲ ಅಂತ ರೇಗಾಡ್ದೆ....ನೀನೇ ನಿಧಾನ ಮಾಡ್ತಾ ಇದ್ದಿ...." ಅಡಿಗೆ ಮನೆಯಲ್ಲಿ ಸಾವಿತ್ರಮ್ಮ ಕೂಗಿದರು.

"ನನ್ನ ಪಾಲಿಂದು ಆಯ್ತು....ಇನ್ನು ಅವಳ ಪಾಲಿಂದು ಇಸ್ಕೊ.") ರಾಯರು ಮಗಳನ್ನು ಸೀತಮ್ಮನ ಹೆಗಲ ಮೇಲೆ ಕೂಡಿಸಿ ಕೋಟು ಕಳಚಿಟ್ಟು ಕೈಕಾಲು ತೊಳೆಯಲು ಹೋದರು.

"ಬಂದೆ....ನೀರು ಕೊಡ್ತೀನಿ ತಾಳಿ...." ಸೀತಮ್ಮ ಮಗಳನ್ನು ಕೆಳಗೆ ಇಳಿಸಿ ಹಗ್ಗದ ಮೇಲೆ ಹಾಕಿದ್ದ ಟವಲನ್ನು ತೆಗೆದುಕೊಂಡಳು.

ಶಕುಂತಳ ಅಳಲು ಮೊದಲು ಮಾಡಿದಳು.

"ಅಳಿಸ ಬೇಡ್ವೆ ಮಗೂನ....ಎತ್ತಿಕೊಳ್ಳೆ...." ಸಾವಿತ್ರಮ್ಮ ಅಣತಿ ಇಟ್ಟರು.

"ಅವಳು ಸ್ವಾರ್ಥಿ ಕಣೆ...." ರಾಯರು ಹಿತ್ತಲ ಕಡೆ ಹೋಗುತ್ತ ಮೆಲ್ಲಗೆ ನುಡಿದರು.

ಸೀತಮ್ಮ ಮುಗುಳು ನಗೆ ನಕ್ಕು "ಕಾಫಿ ಕುಡಿಸ್ತೇನಿ....ಬಾರೆ" ಅಡಿಗೆ ಮನೆಗೆ ಹೋದಳು. ತಾಯ ಕೈ ಹಿಡಿದು ಶಕುಂತಳ ಮೆಲ್ಲಗೆ ಒಳಗೆ ಹೋದಳು.

ಕೈಕಾಲು ತೊಳೆದು ರಾಯರು ಅಡಿಗೆ ಮನೆಗೆ ಬರುವಷ್ಟರಲ್ಲಿ ಸೀತಮ್ಮ ಮಣೆ ಹಾಕಿ ಒಂದು ತಟ್ಟೆಯಲ್ಲಿ ಎರಡು ಗುಲಪಾವಟೆ ಉಂಡೆ, ಹುರಿಗಾಳನ್ನು ಇಟ್ಟಿದ್ದಳು.

ವೆಂಕಟರಾಯರು ಬಂದು ಮಣೆಯ ಮೇಲೆ ಕುಳಿತುಕೊಂಡರು.

ಶಕುಂತಲೆ ತಾಯಿಯ ಕೊಂಕಳಿಂದ ಇಳಿದು ತಂದೆಯ ಬಳಿಗೆ ಹೋದಳು. ರಾಯರು ಕೈಚಾಚಿ ಅವಳನ್ನು ಎತ್ತಿಕೊಂಡು ತೊಡೆಯ ಮೇಲೆ ಕೂಡಿಸಿ ಕೊಂಡರು.

"ಲೇ ಕಳ್ಳಿ....ನಿಂಗೂ ಬೇಕೇನೆ...." ಪುರಿಗಾಳಿನಲ್ಲಿದ್ದ ಒಂದು ಚೂರು ಕೊಬರಿಯನ್ನೂ, ಪುರಿಗಾಳನ್ನು ಅವಳನ್ನು ಅವಳ ಬಾಯಲ್ಲಿ ಇಟ್ಟರು.

ಸಾವಿತ್ರಮ್ಮ ಸಿಟ್ಟಿನಿಂದ ಅಬ್ಬರಿಸಿದರು "ವೆಂಕಣ್ಣ, ಹಾಳೂ ಮೂಳು ತಿನ್ನಬೇಡ ಅಂತ ಒಂದು ದಿನ ಅಲ್ವೇನೊ ಹೇಳೋದು. ಸಿಕ್ಕಾಬಟ್ಟೆ ಅವಳು ಎಲ್ಲಾ ಬೇಕು ಅನ್ನೋದಕ್ಕೂ ನೀನು ಕೊಡೋದಕ್ಕೂ ಚೆನ್ನಾಗಿದೆ. ಮಕ್ಕಳು ಸೊಂಪಾಗಿ ಬೆಳೀಬೇಕಾದ್ರೆ ಹೀಗೆ ಸಿಕ್ಕಾಬಟ್ಟೆ ತಿನ್ನಿಸಿದರೆ ಅಂತ ನೀನೂ, ಅವಳೂ ತಿಳಿದಿರೊ ಹಾಗಿದೆ. ನಾನು ಹೇಳ್ತಾ ಇರೋದೆ ನೀವು ಈ ಕಿವೀಲಿ ಕೇಳಿ ಆ ಕಿವೀಲಿ ಬಿಟ್ಟುಬಿಡ್ತಾ ಇರೋದೆ....ಹೋಗ್ಲಿ ವೆಂಕಣ್ಣ ನಾನು ಮೊನ್ನೆ ದಿನ ಹೇಳಿದ್ದ ವಿಷಯ ಏನು ಮಾಡ್ದೆ. ಮಗು ಹುಟ್ಟಿ ಆಗ್ಲೆ ಒಂದು ವರ್ಷದ ಮೇಲಾದ್ರೂ ನೀನು ಇನ್ನೂ ಜಾತ್ಕ ಬರೀಸ್ಲೇ ಇಲ್ಲ. ಇದ್ಯಾಕೆ ಶಾಮಾಶಾಸ್ತ್ರಿಗಳು ಈಗೀಗ ಇತ್ತ ಸುಳೀತ್ಲೆ ಇಲ್ಲ. ಏಕೆ ಏನಾದ್ರೂ ಸಿಟ್ಟಾ ಅವರ್ಗೆ ನಮ್ಮ ಮೇಲೆ? ನಾವೇನೂ ನಾಮಕರಣದಲ್ಲಿ ಕೊಡೋದು ಬಿಡೋ ದ್ರಲ್ಲಿ ಕಡ್ಮೆ ಮಾಡಿರಲಿಲ್ಲವಲ್ಲ. ನೀನೇ ಪುನಃ ಅವರ್ನ ಕೇಳೇ ಇಲ್ಲ ಅಂತ ಕಾಣುತ್ತೆ. ಹೆಣ್ಣು ಅಂತ ಹುಟ್ಟಿದ ಮೇಲೆ ಒಂದು ಜಾತ್ಕ ಅಂತ ಇರ ಬೇಡ್ವೆ..."

"ಹುಟ್ಟಲಿಲ್ಲ ಬೆಳೀಲಿಲ್ಲ ಆಗ್ಲೇ ನಿಮ್ಗೆ ಅವಳ ಮದ್ವೆ ಯೋಚ್ನೆ. ಜೋಯಿಸರಿಗೆ ಅವತ್ತೇ ಇವಳು ಹುಟ್ಟಿದ ದಿನ, ತಾರೀಖು, ಗಳ್ಗೆ ಎಲ್ಲಾ ಸರಿಯಾಗಿ ಗುರ್ತು ಹಾಕಿ ಬೇರೆ ಕೊಟ್ಟಿದ್ದೇನೆ. ಅದಲ್ದೆ ನಮ್ಮ ಶಾಮಾ ಶಾಸ್ತ್ರಿಗಳಿಗೆ ಅವೆಲ್ಲಾ ಬೇರೇ ಹೇಳ್ಬೇಕೆ...? ನಾನೂ ಒಂದು ಮಾತು ಸರಿ ಯಾಗಿ ಬರ್ದು ಕೊಡಿ ಅಂತ ಹೇಳೂ ಇದ್ದೇನೆ. ಈಗ ಅವಳ ಜಾತ್ಕ ಕಟ್ಟಿ ಕೊಂಡು ನಾವೇನು ಮಾಡಬೇಕಾಗಿದೆ ಹೇಳು. ನಿಧಾನವಾಗಿ ಬರ್ದುಕೊಡ್ಲಿ. ಅದೂ ಅಲ್ದೆ ಈಗಿನ ಕಾಲದಲ್ಲಿ ಜಾತ್ಕ ನೋಡಿ ಯಾರು ಮದ್ವೆ ಆಗ್ತಾರೆ ಹೇಳು...." ಇನ್ನೂ ಏನನ್ನೊ ಹೇಳಲು ಬಯಸುತ್ತಿದ್ದರು.

"ನಾಕೋ ನಿನ್ನ ಒಣವೇದಾಂತ. ನಾಲ್ಕು ಕಾಸು ಸಂಪಾದಿಸೊ ಹಾಗೆ ಆದೆ ಅಂತ ನಂಗೇ ಉಪದೇಶ ಕೊಡೋಕೆ ಶುರುಮಾಡಿ ಬಿಟ್ಟೆಯಲ್ಲ. ಜಾತ್ಕ, ಶಾಸ್ತ್ರ ಸುಳ್ಳು ಅಂತ ಮಾತ್ರ ಹೇಳ್ಬೇಡ. ನಿಮ್ಮ ತಂದೆ ಜಾತ್ಕದಲ್ಲಿ ಶುಕ್ರಮಾರ ದೆಸೆಯಿದ್ದು ನನ್ನ ಜಾತ್ಕಾನೂ ಚೆನ್ನಾಗಿದ್ದು ಒಳ್ಳೆ ಗಳಿಗೇಲಿ

ಮದ್ವೆ ಆಗಿದ್ದರಿಂದ ಇಷ್ಟೆಲ್ಲಾ ಆಸ್ತಿ ಸಂಪಾದ್ಸಿ ಹೋದ್ರು ನಿಮ್ಮ ತಂದೆ. ಹಾಳಾದೌಳು ನಾನು....ನನ್ನ ಹಣೇಲಿ ಹೀಗೆ ಬರ್ದಿತ್ತು. ಯಾರೇನು ಮಾಡ್ತಾರೆ ಹೇಳು....ನಮ್ಮೂರ ಜನ ಅವರ್ನ ಬಾಳ ದಿನ ಬದ್ಕ ಕೊಡಲಿಲ್ಲ.... ಹಾಳು ಜನ ಮಾಟ ಮಾಡಿ ಕೊಂದು ಹಾಕಿದ್ರು....ದುರ್ಮರಣ ಇದೆ ಅಂತ ಅವರ ಜಾತ್ಕದಲ್ಲಿತ್ತಂತೆ. ಅದೊಂದು ಗಂಡಾಂತರ ಕಳೆದಿದ್ರೆ ನಂಗೆ ಈ ದೆಸೆ ಬರ್ತಿರ್ಲಿಲ್ಲ...." ಸಾವಿತ್ರಮ್ಮನವರಿಗೆ ಹಿಂದಿನ ನೆನಪು ಒತ್ತರಿಸಿ ಬಂತು. ಕಣ್ಣಿಂದ ನೀರು ತೊಟ್ಟಿಕ್ಕಿತು.

"ನಿಮ್ದು ಯಾವತ್ತೂ ಇದೇ ಬುದ್ಧೀನೇ....ಅಮ್ಮನ್ನ ಕೆಣಕಿ.... ರೇಗ್ಸಿ ಅಳಿಸ್ತೀರಾ....ಪಾಪ ಹಿಂದಿನ ನೆನಪು ಬಂದ್ರೆ ತಡೆಯೋಕ್ಕೆ ಆಗೋಲ್ಲ ....ನೀವು ಎಷ್ಟು ಹೇಳಿದ್ರೂ ಕೇಳಲ್ಲ....ಸುಮ್ನೆ ಅಮ್ಮ ಹೇಳ್ದಾಗೆ ಕೇಳ ಬಾರ್ದೆ....ಅವರು ಹೇಳೋದು ಎಲ್ಲಾ ನಮ್ಮ ಸುಖಕ್ಕೆ ತಾನೇ....? ಅಮ್ಮ ಹೇಳಿದ್ರಲ್ಲಿ ತಪ್ಪೇನಿದೆ....?! ಇವತ್ತಲ್ಲ ನಾಳೆ ಬೇಕಾಗೋದು ತಾನೆ ಜಾತ್ಕ ....ದಿನ ಕಳದ್ರೆ ಮರ್ತು ಹೋಗುತ್ತೆ ಅಂತ ಅಮ್ಮ ಹೇಳೋದು....ಬರ್ಸಿ ಕೊಂಡು ಬಂದು ಬಿಡಿ...." ಸೀತಮ್ಮ ನುಡಿದಳು.

"ಹೂ ಕಣೊ ಮಗು....ಅವಳ್ಗೆ ಎಷ್ಟು ವರ್ಷ ವಯಸ್ಸಿದೆ. ಶುಕ್ರದೆಸೆ ಯಾವಾಗ....? ಮದ್ವೆ ಯಾವಾಗ ಆಗುತ್ತೆ. ಮಕ್ಕಳೆಷ್ಟು. ಎಲ್ಲಾ ಬರ್ಸಿ ಕೊಂಡು ಬಾ. ನಿಂಗೆ ಇವೆಲ್ಲಾ ಕೇಳೋಕೆ ನಾಚ್ಕೆ ಆದ್ರೆ ಒಂದು ದಿನ ಇಲ್ಲಿ ಕರಕೊಂಡು ಬಾ....ನಾನು ಕೇಳ್ದೆ ಅನ್ನು ಕಂಡಿತಾ ಬರ್ತಾರೆ" ತಾಯಿ ಕಣ್ಣೀರನ್ನು ವರಸಿಕೊಂಡು ನುಡಿದರು.

"ಅದಕ್ಕಲ್ಲ ನಾನು ಹೇಳಿದ್ದು. ಶಾಸ್ತ್ರಿಗಳಿಗೆ ಅವತ್ತೇ ಹೇಳಿ ಬಂದಿ ದ್ದೇನೆ. ಮೊನ್ನೆನೂ ಸಿಕ್ಕಿದ್ರು ಕೇಳ್ದೆ. ಅವರು ಇನ್ನೂ ಬರೆದಿಲ್ಲವಂತೆ. ಬರ್ದು ಕೊಡ್ತೇನೆ ಊರಿನಲ್ಲಿರಲಿಲ್ಲ ಅಂತ ಹೇಳಿದ್ರು ಅದಕ್ಕೇಳ್ದೆ ಅಷ್ಟೆ. ಇವತ್ತೊ ನಾಳೇನೊ ನಾನೇ ಹೋಗಿ ಕೂತು ಬರ್ಸಿಕೊಂಡು ಬರ್ತೇನಿ ಹೇಳು...." ರಾಯರು ತಾಯನ್ನು ಹೆಂಡತಿಯನ್ನು ನೋಡಿದರು.

ಮುಖ ಅರಳಿದ್ದವು.

"ಇಷ್ಟು ಸಣ್ಣ ವಿಷಯಕ್ಕೆಲ್ಲಾ ನೀನು ಕಣ್ಣೀರು ಸುರಿಸಬೇಕೆ. ನಾನೂ ಬರಸಿದ್ರೆ ಆಯ್ತು ಅಂತ ಸುಮ್ಮನಾದೆ. ಮಗೂನ ಆಟಪಾಟ ನೋಡಿ ನಾವು ಸುಖವಾಗಿರೋವಾಗ ಜಾತ್ಕ ಫಲ ಅಂತ ಜೋಯ್ಸರು ಏನಾದ್ರೂ ಹೇಳಿದ್ರೆ ಸುಮ್ನೆ ಮನಸ್ಸಿಗೆ ಬೇಜಾರಾಗುತ್ತೆ, ಶಾಮಾ ಶಾಸ್ತ್ರಿ ಗಳೊ ಮನಸ್ನಲ್ಲಿ ಒಂದು, ಬಾಯಲ್ಲಿ ಹೇಳೋದು ಒಂದು ಎಂದೂ ಮಾಡಲ್ಲ

....ಅದಕ್ಕೆ ನಾನೂ ಅವರ್ನ ಹೆಚ್ಚಿಗೆ ಬಲವಂತ ಮಾಡಲಿಲ್ಲ...." ವೆಂಕಟ ರಾಯರು ಮುಂದುವರಿಸಿದ್ದರು.

ಸಾವಿತ್ರಮ್ಮನ ಸುಕ್ಕು ಮುಖದಲ್ಲಿ ಹೂ ಬಂದ ಬಿಳಿಯ ಗುಡ್ಡೆ ಬಹು ಚಂಚಲವಾಗಿ ಸರಿದಾಡಿ ಬಾಯಿ ನಡುಗಿ ಕೊನಗೆ ನಾಲಿಗೆ ಚಲಿಸಿತು

"ಅದೇನೋ ವೆಂಕಣ್ಣ ನೀನು ಹೇಳ್ತಾ ಇರೋದು....? ಜೋಯಿಸ್ರು ....ಏನಾದ್ರೂ...ಹೇಳಿದ್ರೇನೋ....! ಅವರು ಹೇಳಿದ ಮಾತೂ ಎಂದೂ ಸುಳ್ಳಾಗಲ್ಲ....ಅವರು ಸಾಯೊಕ್ಕೆ ಮುಂಚೆ ಒಂದು ತಿಂಗಳ ಕೆಳ್ಗೆ ಈ ಗಂಡಾಂತ್ರ ಕಳಿದ್ರೆ....ನಾನು ಸುಮಂಗಲೆಯಾಗಿ ಸಾಯ್ತೀನಿ....ಅಂತ ಹೇಳಿದ್ರು ...ಗಂಡಾಂತರ ಕಳೀಲಿಲ್ಲ ..." ಒಳಗಿನ ಅಳಲು ಉಕ್ಕಿಬಂತು.

"ಹೋಗ್ಲಿ....ಈಗ ಜೋಯ್ಸರು ಏನು ಹೇಳಿದ್ರೊ....ವೆಂಕಣ್ಣ ?– ಹೇಳೂ ವೆಂಕಣ್ಣ....ಏನೊ ಹೇಳೇ ಇರಬೇಕು....!....ಏನಾಗ್ಬೇಕೊ ಅದು ಆಗೆ ತೀರುತ್ತೆ....ವಿಧಿನಿಯಮ ಯಾರೂ ತಪ್ಸಕ್ಕೆ ಆಗೊಲ್ಲ" ಉಕ್ಕಿಬಂದ ಕಣ್ಣೀರನ್ನು ವರಸಿಕೊಳ್ಳುತ್ತ ಪ್ರಶ್ನಿಸಿದರು.

"ಅದೇನು ಹೇಳಿದ್ರು ಹೇಳಿ ಅಂದ್ರೆ...." ಕುಳಿತಿದ್ದ ಸೀತಮ್ಮ ಎದ್ದು ನಿಂತಿದ್ದಳು. ಮೊಡ ಕವಿದ ಮುಖದಂಗಳದಲ್ಲಿ ವರ್ಷವಾಗಲೇ ಶುರು ವಾಗಿತ್ತು.

ವೆಂಕಟರಾಯರು ಮೂಕರಾಗಿ ಇಬ್ಬರ ಕಡೆಗೂ ಶೂನ್ಯ ದೃಷ್ಟಿ ಯನ್ನು ಬೀರಿದರು.

ಇವರು ಯಾಕೆ ಹೀಗಿ ಅಳುತ್ತಿದ್ದಾರೆ ಎಂಬುದು ವೆಂಕಟರಾಯರಿಗೆ ಒಂದು ಸಮಸ್ಯೆ !

ಮನಸ್ಸಿನಲ್ಲಿ ಏನನ್ನೂ ಬಚ್ಚಿಟ್ಟುಕೊಳ್ಳದೆ ಸುಮ್ಮನೆ ನುಡಿದಿದ್ದರು.

ಅವರಿಗೂ ಹಳೆಯ ಸಂಪ್ರದಾಯದ ಅಂಥ ವ್ಯವಹಾರದಲ್ಲಿ ಸಂಪೂರ್ಣ ವಾದ ನಂಬಿಕೆ ಇಲ್ಲದಿದ್ದರೂ ಅದನ್ನು ಪೂರ್ತಿ ಬಿಡಲು ಅವರ ಮನಸ್ಸು ಒಪ್ಪುತ್ತಿರಲಿಲ್ಲ. ಏನಾದರೂ ಹಿಂದಿನವರು ನಿಜವಾಗಿಯೂ ನಮಗಿಂತ ವ್ಯವಹಾರತಜ್ಞರು. ಬುದ್ಧಿವಂತರು, ಮೇಧಾವಿಗಳು, ಎಲ್ಲಕ್ಕು ಮಿಗಿಲಾಗಿ ಆಧ್ಯಾತ್ಮಿಗಳು; ಇವರುಗಳು ನಡೆಸಿದ ಯಾವ ಕಾರ್ಯಗಳೂ ಸರಿಯಾದ ಕಾರಣವಿಲ್ಲದೆ ನಡೆದವುಗಳಲ್ಲ....ಅವುಗಳನ್ನು ಸಂಪೂರ್ಣವಾಗಿ ಅರಿಯುವ ಮನೋಭಾವ ಹೀನರಾಗಿರುವುದರಿಂದ ಹೊಸ ಸಂಸ್ಕೃತಿ, ಹೊಸ ಸಂಪ್ರ ದಾಯದ ಭ್ರಾಂತಿ, ಉಬ್ಬರದಲ್ಲಿ ನಾವು ಕೊಚ್ಚಿ ಹೋಗುತ್ತಿದ್ದೇವೆ. ಇವು ಗಳನ್ನು ಕೂಲಂಕುಶವಾಗಿ ವಿಶ್ಲೇಷಿಸಿ ಅರಿಯುವ ಬಯಕೆಯಿಲ್ಲ. ಹೊಸ

ವಿದ್ಯೆಯ ಅಮಲಿನಲ್ಲಿ ಹಿಂದಿನ ನಮ್ಮ ಸಂಸ್ಕೃತಿಯನ್ನು ಮರೆಯುತ್ತಿದ್ದೇವೆ. ಇಂದಿನ ಹೊಸ ಸಂಸ್ಕೃತಿಯು ಗುರಿ ಏನು, ಎತ್ತ ಸಾಗುತ್ತಿದೆ ಎಂಬುದನ್ನು ಅರಿಯದವರಾಗಿದ್ದೇವೆ.

ಆಂಗ್ಲ ತತ್ವದ ದಾಸತ್ವ....! ಆತ್ಮಘಾತ....

ವೆಂಕಟರಾಯರು ತಾನೂ ಇಂಗ್ಲೀಷನ್ನು ಕಲಿತಿದ್ದೇನೆ, ಕಛೇರಿಯಲ್ಲಿ ಚಾಕರನೂ ಆಗಿದ್ದೇನೆ, ಎಂಬ ಹೆಮ್ಮೆಯಿಂದ ತಮ್ಮ ಘನತೆಯನ್ನು ತೋರಿಸಿಕೊಳ್ಳಲು ನುಡಿದಿದ್ದರು. ಅಷ್ಟೆ.

ರಾಯರು ತಟ್ಟೆಯ ಮುಂದೆ ಸುಮ್ಮನೆ ಕುಳಿತು ತಾಯಿಯನ್ನೊಮ್ಮೆ, ಹೆಂಡತಿಯನ್ನೊಮ್ಮೆ ನೋಡುತ್ತಿದ್ದರು.

ಸಾವಿತ್ರಮ್ಮ ತಾನು ಮಡಿ ಎನ್ನುವುದನ್ನೂ ನೆನೆಯದೆ ಏನೂ ಅಶಂಕೆಯಿಂದ ಕಂಪಿಸುತ್ತ ಶಕುಂತಲೆಯನ್ನು ಬಾಚಿ ತಬ್ಬಿಕೊಂಡರು. "ಅದೇನು ಅಂದ್ರು ಹೇಳು ವೆಂಕಣ್ಣ...." ಇನ್ನೊಮ್ಮೆ ಪ್ರಶ್ನಿಸಿದರು.

"ಇಲ್ಲಮ್ಮ....ಸತ್ಯವಾಗ್ಲೂ ಅವರು ಏನೂ ಹೇಳ್ಳಿಲ್ಲ....ನಾನೂ ಕೇಳ್ಳಿಲ್ಲ....ಸುಮ್ನೆ ಹೇಳ್ದೆ ಅಷ್ಟೆ. ಅದಕ್ಕೇ ಇಷ್ಟೊಂದು ಹೆದರೋದೆ ನೀವು ....ಇವಳು ನಮ್ಮನೆ ಭಾಗ್ಯಲಕ್ಷ್ಮಿ....ನನ್ನ ಚಿನ್ನ...." ವೆಂಕಟರಾಯರು ಎತ್ತಲೋ ಸಾಗಿದ್ದ ಮಾತನ್ನು ಸ್ವಲ್ಪ ಸತತವಾಗಿರಿಸಲು ಪ್ರಯತ್ನಿಸಿದರು. ಆದರೆ ಸೀತಮ್ಮ ಸಾವಿತ್ರಮ್ಮ ನಗಲಿಲ್ಲ. ರಾಯರೊಬ್ಬರೇ ಅರ್ಥವಿಲ್ಲದ ನಗು ನಕ್ಕರು.

"ಏನೊ ಅಪ್ಪ....ನಿನ್ನ ಮಾತೇ ಅರ್ಥವಾಗಲ್ಲ. ಏನು ಆಗ್ಬೇಕಾಗಿದ್ಯೋ ಅವೆಲ್ಲಾ ಆಗ್ಲೇಬೇಕು. ನೀನು ಮಾತ್ರ ಏನೂ ಮುಚ್ಚಿಡಬೇಡ" ಸಾವಿತ್ರಮ್ಮ ನುಡಿದರು.

"ಇಲ್ಲ ಅಮ್ಮ....ನಿಮ್ಹತ್ರ ಸುಳ್ಳು ಹೇಳ್ಬೇಕೆ? ನಂಗೆ ಏನೂ ಗೊತ್ತಿಲ್ಲ. ಆಗಬೇಕಾದ್ದು ಆಗೇತೀರುತ್ತೆ. ಅದಕ್ಕೆ ಯಾಕೆ ಯೋಚಿಸಬೇಕು ಅಂತ ಸುಮ್ನೆ ಹೇಳ್ದೆ ಅಷ್ಟೆ. ಅದನ್ನೇ ನೀವು ಆಳವಾಗಿ ತೊಗೊಂಡ್ರಿ...."

"ಹೊತ್ತು ಹೆತ್ತ ನಂಗೆ ಗೊತ್ತು ಅದರ ಸಂಕಟ" ಸೀತಮ್ಮ ನುಡಿದು ಕಣ್ಣೀರನ್ನು ಒರೆಸಿಕೊಂಡಳು.

"ಇವಳೇ ನಮ್ಮನೆ ನಂದಾದೀಪ...." ಸಾವಿತ್ರಮ್ಮ ಮೊಮ್ಮಗಳನ್ನು ಎದೆಗೆ ಭದ್ರವಾಗಿ ಅಪ್ಪಿಕೊಂಡು ಮುದ್ದಿಸಿದರು.

"ಬರ್ತಿಯೇನೆ ಶಕ್ಕು ಎಲ್ಲಾದ್ರೂ ವಾಕಿಂಗ್ ಹೋಗೋಣಾ...." ತಂದೆ ಕೈ ಚಾಚಿದರು. ಶಕುಂತಲ ತಂದೆಯ ಬಳಿಗೆ ಹೋಗಲು ಆಸೆಯಿಂದ

ತೋಳ್ಸೆರೆಯಲ್ಲಿಯೇ...." ಅ....ಣ್ಣಾ....ಣ್ಣಾ...." ಕೂಗಿದಳು.

" ಎಲ್ಲಿ ಬೇಕಾದ್ರೂ ನೀನು ಹೋಗ್ಬಾ. ವಾಕಿಂಗೂ ಬೇಡ ಗೀಕಿಂಗೂ ಬೇಡ ಇವಳ್ಗೆ. ಹೊರಗಡೆ ಆಗ್ಲೆ ಆಶಾಢಮಾಸದ ಗಾಳಿ ಬೀಸ್ತಾ ಇದೆ. ಎಲ್ಲಾದ್ರೂ ಥಂಡಿ ಗಿಂಡಿ ಆದೀತು....ಹೋಗೆ ಸೀತೆ ಇವಳ್ನ ತೊಟ್ಟಿಲಲ್ಲಿ ಹಾಕಿ ಮಲಗಿಸೋಗೆ...." ತಾಯಿ ಮಗನಿಗೆ ಹೇಳಿ ಸೊಸೆಗೆ ಆಜ್ಞೆ ಇತ್ತರು. ಮಗುವನ್ನು ತಾಯಿಯ ಕಡೆಗೆ ಕೊಟ್ಟರು. ಮಗು ತಂದೆಯ ಕಡೆಗೆ ಹೋಗಲು ಕೈ ಚಾಚಿ ಅಳತೊಡಗಿತು.

" ಸ್ವೆಟರ್ ಹಾಕಿ ಕೊಡೆ ಹೋಗ್ಲಿ. ಅವಳು ಬರ್ತೀನಿ ಅಂತ ರಗಳೆ ಹಿಡ್ದು ಕೂತಿರೋವಾಗ ನೀನು ತೂಗಿದ್ರೆ ಮಲಗಿಕೊಳ್ತಾಳಾ....ನಿದ್ದೆ ಬಂದಿರೋ ಕಣ್ಣಾ ಇವು...." ತಂದೆ ಮಗಳ ನಿರ್ಮಲ ತೆರೆದಿದ್ದ ಕಣ್ಣುಗಳನ್ನು ಈಕ್ಷಿಸುತ್ತ ನುಡಿದರು.

" ಈಗ್ಲಿಂದ ಹೊರಗೆ ಅಲೆಯೋ ಹಾಳು ವಿದ್ಯೆ ಕಲ್ಸಿ ಚೆನ್ನಾಗಿರುತ್ತೆ." ಸೀತಮ್ಮ ಗೊಣಗಿ ಸ್ವೆಟರನ್ನು ಹಾಕಿ, ತಲೆಗೆ ಕುಲಾವಿ ಕಟ್ಟಿ ಗಂಡನ ಕೈಗೆ ಕೊಟ್ಟಳು.

ವೆಂಕಟರಾಯರು ಮಗಳನ್ನು ಕರೆದು ಕೊಂಡು ಹೊರಗೆ ಹೋದರು.

" ನಮ್ಮ ವೆಂಕಟರಾಯನಿಗೆ ಮಗು ಅಂದ್ರೆ ಎಷ್ಟು ಪ್ರೀತಿ....!" ಸಾವಿತ್ರಮ್ಮ ನಡಿದರು.

" ಅದೂ ಅವರ್ನೇ ಹೆಚ್ಗೆ ಹಚ್ಚಿಕೊಂಡಿದೆ "

ಸೀತಮ್ಮ ಧ್ವನಿಗೂಡಿಸಿದಳು.

† † † † †

ಶ್ರಾವಣ ಶುದ್ಧ ಪಂಚಮಿ.

ಶಕುಂತಲ ಹುಟ್ಟಿ ಇವತ್ತಿಗೆ ಸರಿಯಾಗಿ ಐದು ವರ್ಷ. ಹುಟ್ಟಿದ ಹಬ್ಬಕ್ಕೆ ಹೇಳಿಕಳುಹಿಸಿದ ಹಾಗೆ ಸುಬ್ಬಣ್ಣ ಬಂದಿದ್ದ. ಊಟ ತಿಂಡಿಯಲ್ಲಾ ತೀರಿದಮೇಲೆ ರೂಮಿನಲ್ಲಿ ರಾಯರು ಸುಬ್ಬಣ್ಣ ಹಾಸಿಗೆ ಒರಗಿ ಮಾತ ನಾಡುತ್ತ ಕುಳಿತುಕೊಂಡರು.

" ಅಣ್ಣಾ....ಅಣ್ಣಾ....ನಂಗೆ ಬರೆಯೊಕ್ಕೆ ಬಂತು...." ಶಕುಂತಲ ಹೊರಗಿನಿಂದ ಕೈಯಲ್ಲಿ ಸ್ಲೇಟನ್ನು ಹಿಡಿದು ಒಳಗೆ ಓಡಿ ಬಂದಳು.

" ನೋಡು ವೆಂಕಟರಾಯ ನಿನ್ನ ಮಗಳು ಆಗ್ಲೆ ಎಷ್ಟು ಎತ್ತರ ಬೆಳೆ ದಿದ್ದಾಳೆ...." ಕೈ ಚಾಚಿ ಶಕುಂತಲಳನ್ನು ಸುಬ್ಬಣ್ಣ ತನ್ನ ಬಳಿಗೆ ಎಳೆದು ಕೊಂಡ. ಶಕುಂತಲ ದೂರ ನೆಗೆದು ತಂದೆಯ ಬೆನ್ನಿನ್ನ ಹಿಂದೆ ಹೋಗಿ.

ನಿಂತು ತನ್ನ ಸಣ್ಣ ಕಣ್ಣಿನಿಂದ ಸುಬ್ಬಣ್ಣನನ್ನು ತೀಕ್ಷ್ಣವಾಗಿ ನೋಡುತ್ತ ನಿಂತುಕೊಂಡಳು.

"ನೋಡಣ್ಣ....ನಾನು ಆಗ್ಲೆ....ಅ....ಆ...ಬರ್ದೆ" ಬೆನ್ನಿನ ಮೇಲೆ ಒಂದು ಕೈಯನ್ನು ಊರಿ ಇನ್ನೊಂದು ಕೈಯಲ್ಲಿ ಸ್ಲೇಟನ್ನು ಹಿಡಿದು ಹಿಂದಿನಿಂದಲೆ ತಂದೆಯ ಮುಂದೆ ಹಿಡಿದಳು. ತುಂಟನಗು ಬಿಂ ತುಟಿಗಳ ಮಧ್ಯದಲ್ಲಿ ನಲಿಯುತ್ತಿತ್ತು.

ವೆಂಕಟರಾಯರು ಜೋರಾಗಿ ನಕ್ಕರು.

ಬುದ್ದಿವಂತೆ ಕಣೆ ನೀನು....ಅಮ್ಮನ ಕೈಲಿ ಹಾಕ್ಸಿಕೊಂಡು ಬಂದು ನಾನು ಬರ್ದೆ ಅಂತಿಯಾ....? ನೋಡು ಸುಬ್ಬಣ್ಣ, ಹ್ಯಾಗಿದ್ದಾರೆ ಈಗಿನ ಕಾಲದ ಮಕ್ಳು. ಗುರುವಿಗೆ ತಿರಮಂತ್ರ ಹೇಳ್ತಾರೆ." ರಾಯರ ಮಾತಿನಲ್ಲಿ ಮಗಳ ಮೇಲಿನ ಪೂರ್ಣ ಮೆಚ್ಚಿಗೆಯಿತ್ತು.

"ನೀನು ನಿಜವಾಗ್ಲೂ ಭಾಗ್ಯವಂತನಪ್ಪ....ಇಂಥ ಲಕ್ಷ್ಮಿನ ಪಡೆಯೊಕ್ಕೆ....ಎಷ್ಟು ಸುಂದರವಾಗಿದ್ದಾಳೆ. ಮುಖದಲ್ಲಿ ಏನು ಕಳೆ ಇದೆ.... ಎಲ್ಲಾರಿಗೂ ಈ ಭಾಗ್ಯ ಲಭಿಸೊಲ್ಲ ಇವಳ ಕೈ ಹಿಡಿಯೋಕ್ಕೆ ಯಾವ ಪುಣ್ಯಾತ್ಮ ಹುಟ್ಟಿದ್ದಾನೊ...."ಸುಬ್ಬಣ್ಣನ ಮಾತಿನಲ್ಲಿ ತುಂಬ ನಲ್ಮೆಯಿತ್ತು.

"ನೋಡಿಬಿಡು ಒಂದು ಗಂಡನ್ನು ಒಳ್ಳೇಕಡೆ" ಒಳಗಿನಿಂದ ಸಾವಿತ್ರಮ್ಮ ಕೂಗಿದರು.

"ನಾನೇನೊ ಇವಳ್ನ ಚೆನ್ನಾಗಿ ಓದಿಸಬೇಕು ಅಂತ ಮಾಡಿದ್ದೇನೆ. ಇವಳೇ ನಂಗೆ ಗಂಡು ಹೆಣ್ಣು ಎರಡೂ ಆಗಿದ್ದಾಳೆ. ಓದೋ ಮಗನಂತೂ ಹುಟ್ಟಲಿಲ್ಲ. ಹುಟ್ಟಿದ ಹುಡಗೀನೆ ಚೆನ್ನಾಗಿ ಓದಿ ಅವಳಿಗೆ ಬೇಕಾದವ್ರನ್ನ ಮದ್ವೆ ಆಗ್ಲಿ. ನಂದೇನು ಅದಕ್ಕೆ ಅಡ್ಡಿಯಿಲ್ಲ. ಮುಖ್ಯವಾಗಿ ಅವಳು ಸುಖವಾಗಿರಬೇಕು. ಅಷ್ಟೇ ನನಗೆ ಬೇಕಾದ್ದು. ಹೌದೊ ಅಲ್ವೊ....?" ಪ್ರಶ್ನಾರ್ಥಕ ದೃಷ್ಟಿಯಲ್ಲಿ ಸುಬ್ಬಣ್ಣನತ್ತ ನೋಡಿದರೂ ತೀರ್ಮಾನಿಸೇ ನುಡಿದಿದ್ದರು ರಾಯರು.

"ನನ್ನ ಮೊಮ್ಮಗಳು ಓದಿ ಯಾವ ಮಾಮುಲೆ ಕೆಲ್ಸ ಮಾಡ್ಬೇಕಾಗಿದೆ....?! ಎಲ್ಲಾರೂ ಒಳ್ಳೆ ಗಂಡನ್ನ ಮದ್ವೆ ಆಗಿ ಸುಖವಾಗಿದ್ರೆ ಸಾಕು. ಅಷ್ಟು ಬಿಟ್ಟು ಓದಿಸಬೇಕಂತೆ! ಓದಿಸೋದ!!" ಸಿಟ್ಟಿನಿಂದ ಅಡುಗೆ ಮನೆಯಿಂದಲೇ ಸೌಟನ್ನು ಕೈಲಿ ಹಿಡಿದುಕೊಂಡೆ ಹೊರಗೆ ಬಂದರು ಸಾವಿತ್ರಮ್ಮ.

"ಹಾಡು ಹಸೆ ಚೆನ್ನಾಗಿ ಕಲ್ತುಕೊಂಡು ಅಚ್ಚುಗಟ್ಟಾಗಿ ಮನೆ ಕೆಲ್ಸ ಮಾಡೋ ಹುಡ್ಗಿ ಆದ್ರೆ ಸಾಕು ನನ್ನ ಹೊಟ್ಟೇಲಿ ಹುಟ್ಟಿದ್ದಕ್ಕೆ ಸಾರ್ಥಕ.

ಅವಳೇನು ಓದಿಬರೆದು ಬಿ. ಎ. ಪಾಸು ಮಾಡಿ ನಮಗೆ ತಂದು ಹಾಕಬೇಕಾಗಿಲ್ಲ." ಸೀತಮ್ಮ ನಡುಮನೆಯಲ್ಲಿ ನುಡಿದರು.

ವೆಂಕಟರಾಯರು ಮೌನವಾಗಿ ಸುಬ್ಬಣ್ಣನನ್ನು ನೋಡಿದರು. ಸುಬ್ಬಣ್ಣ ಮೀಸೆಯ ಮರೆಯಲ್ಲಿ ನಗುತ್ತಿದ್ದ.

"ಹೋಗ್ಲಿ ಅವಳ್ನೆ ಕೇಳಿಬಿಡೋಣ. ಅವಳು ಹ್ಯಾಗೆ ಹೇಳಿದ್ರೆ ಹಾಗೆ. ಏನು ಶಕುಂತಲ ನೀನು ಓದ್ತಿಯೊ ಅಥವ ಮದ್ವೆ ಆಗಿ ಮಕ್ಕಳು ಹೆರ್ತಿಯೊ....?" ವೆಂಕಟರಾಯರು ಮಗಳನ್ನು ತಮ್ಮ ತೊಡೆಯ ಮೇಲೆ ಕೂಡಿಸಿಕೊಳ್ಳುತ್ತ ಪ್ರಶ್ನಿಸಿದರು.

"ನೋಡಣ್ಣ....ನಂಗೆ ಅ....ಆ ಆಗ್ಲೆ ಬರೆಯೋಕ್ಕೆ ಬಂದೇಬಿಡ್ತು....?" ಚಪ್ಪಾಳೆ ಹಾಕಿ ಎದ್ದು ನಿಂತು ನುಡಿದಳು. ಸುಬ್ಬಣ್ಣ ಅವಳನ್ನು ತನ್ನ ಸನಿಹಕ್ಕೆ ಸೆಳೆದುಕೊಂಡ. ಅವಳ ಕೈಯಲ್ಲಿದ್ದ ಸ್ಲೇಟನ್ನು ಕೈಗೆ ತೆಗೆದುಕೊಂಡು ನೋಡಿದ. ತಾಯಿ ಬರೆದುಕೊಟ್ಟದ್ದ ಅಕ್ಷರಗಳ ಪಕ್ಕದಲ್ಲಿ ಅ....ಆಗಳ ಆಕಾರವನ್ನು ಅಸ್ಪಷ್ಟವಾಗಿ ವಕ್ರವಾಗಿ ಬರೆದಿದ್ದಳು.

"ನೋಡು ವೆಂಕಣ್ಣ ಆಗ್ಲೆ ಮೊದಲ್ನೆ ದಿನವೇ ನಿನ್ನ ಮಗಳು ಎರಡು ಅಕ್ಷರ ಕಲ್ತುಬಿಟ್ಟಿದ್ದಾಳೆ. ನಿಜವಾಗ್ಲೂ ಇವಳ್ಗೆ ಸರಸ್ವತಿ ಒಲಿದಿದ್ದಾಳೆ. ಎಷ್ಟೋ ಮಕ್ಕಳು ತಿಂಗಳಿಗೊಂದು ಅಕ್ಷರ ಕಲಿಯೋದು ಕಷ್ಟವಾಗುತ್ತೆ" ಸುಬ್ಬಣ್ಣ ಶಕುಂತಲೆಯ ತಲೆಯನ್ನು ಮೃದುವಾಗಿ ನೇವರಿಸುತ್ತ ನುಡಿದ.

"ಹೇಳಮ್ಮ ನಿಂಗೆ ಮದುವ್ವೆ ಬೇಕೊ ಅಥವ ಓದು ಬೇಕೊ....?" ಹುಸಿನಗುತ್ತ ಸುಬ್ಬಣ್ಣನೇ ಪ್ರಶ್ನಿಸಿದ.

"ನಂಗೆ ಪುಚ್ಗ ತರಿಸಿಕೊಡಣ್ಣ...ಪಕ್ಕದ ಮನೆ ಶಾರ್ದ ಒಂದು ದೊಡ್ಡ ಪುಚ್ಗ ತರ್ಸಿಕೊಂಡಿದ್ದಾಳೆ. ಅದ್ರಲ್ಲಿ ತುಂಬಾ ಬೊಂಬೆ ಇದೆ....ನಂಗೂ ಅಂತೋದೊಂದು ತಂದು ಕೊಡಣ್ಣ ...ತಂದು ಕೊಡ್ತಿಯಣ್ಣಾ ?" ಸುಬ್ಬಣ್ಣನ ಕೈಯ ಹಿಡಿತವನ್ನು ಬಿಡಿಸಿಕೊಂಡು ಹೋಗಿ ತಂದೆಯ ಬಳಿಯಲ್ಲಿ ನಿಂತಳು. "ನಾನು ತುಂಬಾ ಓತ್ತೀನಿ. ತಂದು ಕೊಡ್ತೀಯಾ...." ಆಶೆಯಿಂದ ತಲೆ ಎತ್ತಿ ತಂದೆಯನ್ನು ನೋಡಿದಳು. ರಾಯರ ಕೆನ್ನೆಯನ್ನು ತನ್ನ ಪುಟ್ಟ ಕೈಯಿಂದ ತಟ್ಟಿ ಅವರ ಮುಖದ ಹತ್ತಿರ ಮುಖ ಇಟ್ಟು ಕಿಲಕಿಲನೆ ನಕ್ಕಳು.

"ಲೇ ಶಕುಂತಲಾ....ನಿಂಗೆ ಪುಟ್ಟ ಗಂಡ ಬೇಡ್ವೇನೆ....? ಮದ್ವೆ ಆದ್ರೆ ನಿನ್ನ ಗಂಡ ದಿನಾಲು ತಿಂಡಿ ತಂದು ಕೊಡ್ತಾನೆ. ಹೂವು ತಂದು ಕೊಡ್ತಾನೆ." ಸಾವಿತ್ರಮ್ಮ ನುಡಿದಾಗ "ನೀನು ಹೇಳ್ದಾಗೆ ಕೇಳ್ತಾನೆ.

ಕೂತ್ಕೊ ಅಂದ್ರೆ ಕೂತ್ಕೊತಾನೆ. ನಿಂತ್ಕೊ ಅಂದ್ರೆ ನಿಂತ್ಕೊತಾನೆ." ಸುಬ್ಬಣ್ಣ ನಗುತ್ತ ಮುಂದುವರಿಸಿದ.

ರಾಯರು ಹೆಂಡತಿಯನ್ನು ಉದ್ದೇಶಿಸಿ ಕೆಣಕುವ ಧ್ವನಿಯಲ್ಲಿ ನುಡಿದರು. 'ಲೇ ಶಕ್ಕು ನಿಂಗೆ ಏನು ಬೇಕೋ ಅದೆಲ್ಲಾ ಓದೆ. ಹೈಸ್ಕೂಲು ಓದು....ಕಾಲೇಜು ಓದು....ಓದಿ ಡಾಕ್ಟರಾಗು....ಲಾಯರಾಗು....ನಿಂಗೆ ಏನು ಬೇಕೊ ಅದಾಗೆ ಮಗು....ಎಷ್ಟಾದ್ರೂ ಖರ್ಚಾಗ್ಲಿ ನೀನೇ ನನ್ನ ಗಂಡು ಮಗು ಅಂತ ಓದ್ಸಿಬಿಡ್ತೀನೆ. ನಮ್ಮ ವಂಶದಲ್ಲಿ ಯಾರೂ ಓದಿಲ್ಲ. ನೀನಾದರೂ ಓದು. ನಮ್ಮಪ್ಪ ಕಾಲೇಜು ಓದಿ ಪಾಸು ಮಾಡ್ಲಿ ಅಂತಿದ್ದ. ನಂಗೆ ಓದು ಹತ್ತಲಿಲ್ಲ. ಎಸ್. ಎಸ್. ಎಲ್. ಸಿ. ನಾಲ್ಕು ವರ್ಷ ಫೇಲಾಗಿ ಕೊನೆಗೆ ಹಾಳು ವಿದ್ಯೆ ಬೇಡ ಈ ಮಹರಾಯಿತಿ ನಿನ್ನ ಅಮ್ಮನ ಕೈ ಹಿಡ್ಕೊಂಡೆ....ಸರಿ ಸಮಾಪ್ತಿಯಾಯ್ತು. ಈ ಲಕ್ಷ್ಮಿ ಮನೆಗೆ ಕಾಲಿಟ್ಟಳು. ಆ ಸರಸ್ವತಿ ಹೆದ್ರಿ ಓಡಿಹೋದ್ಳು." ರಾಯರು ನುಡಿದು ಹುಸಿಯಾಗಿ ನಕ್ಕರು.

"ಅದ್ಯಾವ ನಾಲ್ಗೇಲಿ ಅವಳ್ನ ಅಂತಿಯೊ....ಅವಳು ಬಂದ ಗಳಿಗೇ ಚೆನ್ನಾಗಿದ್ದುದರಿಂದ್ಲೆ ನಿಂಗೆ ಮದ್ವೆ ಆದವರ್ಷ ಕೆಲ್ಸಕ್ಕೆ ಸೇರೊ ಅಂತ ಪಾಸಾಯ್ತು. ಕಾಲೇಜಿಗೆ ಸೇರ್ದೆ ಹೋದ್ದಕ್ಕೆ ಏನು ನಷ್ಟವಾಯ್ತು." ತಾಯಿ ಅಡುಗೆ ಮನೆಯಲ್ಲೆ ನುಡಿದರು.

"ಅದೇನೋ ಅಂತೂ ಇವಳ್ನ ಮದ್ವೆ ಆದವರ್ಷ ಚೆನ್ನಾಗಿ ಓದ್ದೆ. ಇ. ಪಿ. ಎಸ್. ಆಯ್ತು. ಕೆಲ್ಸಕ್ಕೆ ಸೇರ್ದೆ. ಅಮ್ಮ ಹೇಳಿದ್ಹಾಗೆ ನಾನೇನೊ ಲಕ್ಷ್ಮಿಪುತ್ರ....ಸರಾಫ. ಇದಕ್ಕೆಲ್ಲಾ ಇವಳೆ ಕಾರಣ ಅಂದ್ರೆ ಹ್ಯಾಗೊ ಸುಬ್ಬಣ್ಣ ನಂಬೋದು." ಗಂಭೀರವಾಗಿ ರಾಯರು ನುಡಿದರೂ ಹಾಸ್ಯ ಕಣ್ಣಲ್ಲಿ ನರ್ತಿಸುತ್ತಿತ್ತು.

" ಸಾಕು ಸುಮ್ನಿರೊ ಯಾಕೆ ಅವಳ್ನ ಅಂತಿಯಾ....ಹೋಗ್ಲಿ ....ಕಾಫಿ ಕುಡೀರಿ....ಮಾತ್ನಾಡಿ ಬಾಳ ದಣಿದಿದ್ದೀರ...." ತಾಯಿ ಎರಡು ಕೈಯಲ್ಲೂ ಎರಡು ಲೋಟವನ್ನು ಹಿಡಿದುಕೊಂಡು ಬಂದು ಅವನ್ನು ನೆಲದ ಮೇಲೆ ಇಡುತ್ತ ನುಡಿದರು. "ನೀನೂ ಹೋಗೆ ಸೀತಾ. ಶಕುಂತಲಳನ್ನು ಕರಕೊಂಡು ಅಡ್ಗೆ ಮನೆಗೆ ಹೋಗಿ ಕುಡ್ದು ಬಾ....ಲೋಟಕ್ಕೆ ಹಾಕಿ ಇಟ್ಟಿದ್ದೇನೆ." ಪುನಃ ಮುಂದುವರಿಸಿದರು.

"ಸುಬ್ಬಣ್ಣ ನೀನು ಈಗ ಬಹಳ ಇಳಿದು ಹೋಗಿದ್ದಿ. ನಿನ್ನ ಆರೋಗ್ಯದ ಕಡ್ಗೆ ನಿನ್ನ ಗಮನವೇ ಇಲ್ಲ. ಎಲ್ಲಾರ ಸುಖಾನೂ ನಂದೆ

ಅನ್ನೋಕ್ಕೆ ಹೋಗ್ತಿ. ಈಗ ಕಷ್ಟ ಪಟ್ಟರೂ ಮುಂದಿನ ಜನ್ಮಕ್ಕೆ ಗಟ್ಟಿ ಚಿನ್ನ ಗಳಿಸಿಡ್ತಾ ಇದ್ದೀ ಅಷ್ಟೆ....ನಮ್ದು ಯಾವ್ದೂ ಇಲ್ಲ....ಹೋಗ್ಲಿ ಈಸಾರಿ ಎಷ್ಟು ಮದ್ವೆ ಮಾಡ್ಸಿದೆ." ಸಾವಿತ್ರಮ್ಮ ಅಲ್ಲೆ ಕುಳಿತು ಪ್ರಶ್ನಿಸಿದರು.

"ಏನು ಸುಬ್ಬಣ್ಣ ಮಾವ....ಎಲ್ಲಾರ ಮದ್ವೆನೂ ಮಾಡಿಸ್ತೀಯಲ್ಲ.... ನಮ್ಮ ಶಕುಂತಲಳಿಗೆ ಯಾವ ದುಶ್ಯಂತನ್ನ ಹೊಂಚಿದ್ದೀಯಾ...." ಸೀತಮ್ಮನ ಮಾತು ನಗುವಿನಲ್ಲಿ ಅಂತಗೊಂಡಿತು.

"ನಿಮ್ಮ ಶಕುಂತಲಳ ಕೈ ಹಿಡಿಯೊ ಗಂಡು ನಾಲ್ಕು ಜನ್ಮದಲ್ಲೂ ಅಶ್ವಮೇಧ ಯಾಗ ಮಾಡಿರಬೇಕು. ಗಂಡಿಗೇನು ಬೇಕಾದಷ್ಟು ಇವೆ. ವಯಸ್ಸಿಗೆ ಬರುತ್ಲೂ ಮಾಡಿದ್ರಾಯ್ತು ಹೇಳಿ" ಸುಬ್ಬಣ್ಣ ನುಡಿದು ನಾಲ್ಕಾರು ಗಂಡುಗಳ ಹೆಸರುಗಳನ್ನು ಹೇಳಿ ಅವರ ಮನೆತನದ ಘನತೆಯನ್ನು ಕೊಂಡಾಡಿ, ಗುಣ, ಐಶ್ವರ್ಯವನ್ನು ತೂಕ ಮಾಡಿ ವಿವರ ಒಪ್ಪಿಸಿದ.

ವೆಂಕಟರಾಯರು ಗಹಗಹಿಸಿ ನಕ್ಕರು.

"ಸಾಕು....ಸಾಕು....ಸುಬ್ಬಣ್ಣ....ನನ್ನ ಕಿವಿ ಚಿಟ್ಟು ಹಿಡ್ದು ಹೋಯ್ತು ....ನಿನ್ನ ವಿವರ ಕೇಳಿ ...ನೀನು ಯಾವ ಲಗ್ನದಲ್ಲಿ ಹುಟ್ಟಿದ್ಯೊ....ಏನೊ ?.... ಮದ್ವೆ ...ಮದ್ವೆ....ನಿನ್ನ ಜೀವಮಾನವೆಲ್ಲಾ ಅದ್ರಲ್ಲೆ ಆಗಿಹೋಯ್ತು. ನಮ್ಮ ಮಗೂಂದೂ ನೀನೇ ಮಾಡ್ಬಿಂತಿ ಸುಮ್ಮನಿರು....ಮಗು ಹುಟ್ಟಕ್ಕಿಲ್ಲ ಕುಲಾವಿ ಹೊಲಿಸಿದ್ರು ಅಂತ ಇನ್ನೂ ಹುಡುಗಿಗೆ ಐದು ವರ್ಷ ಇವತ್ತಿಗೆ ತುಂಬ್ತು ಆಗ್ಲೆ ಮದ್ವೆ ಯೋಚ್ನೆ. ಅಮ್ಮನೂ ಇದು ತನ್ನ ಕಾಲ ಅಂತ ತಿಳಿಕೊಂಡ ಹಾಗಿದೆ." ರಾಯರು ಕಾಫಿಯನ್ನು ಕುಡಿದು ಮೇಲಕ್ಕೆ ಎದ್ದರು.

"ನಂಗೆ ಬೇಡ ಅಣ್ಣ ಮದ್ವೆ....ಗಂಡ ಬೇಡ...." ಶಕುಂತಲ ತಂದೆಯ ಕಿರುಬೆರಳನ್ನು ಹಿಡಿದುಕೊಂಡು ತಲೆಯನ್ನು ಎತ್ತಿ ತಂದೆಯನ್ನು ನೋಡುತ್ತ ನುಡಿದಳು.

"ಸುಮ್ನಿರೆ ಸಾಕು .... ಮದ್ವೆ ಅಂದ್ರೆ ಇವಳ್ಗೆ ಬಾಳ ಗೊತ್ತಾಗೋದು....? ಏನೆ ಮದ್ವೆ ಅಂದ್ರೆ...." ತಾಯಿ ಪ್ರಶ್ನಿಸಿದಳು.

ಎಲ್ಲರೂ ನಕ್ಕರು.

೫

"ಅಮ್ಮಾ....ಅಮ್ಮಾ" ಎಂದು ಕೂಗುತ್ತಲೇ ವೆಂಕಟರಾಯರು ಒಳಗೆ ಬಂದರು.

ಸೀತಮ್ಮ ಹಾಲಿನಲ್ಲಿ ಮಗಳಿಗೆ ಹೆಳಲನ್ನು ಹಾಕುತ್ತ ಕುಳಿತಿದ್ದಳು. ಶಕುಂತಲ ತಂದೆಯನ್ನು ಕಂಡು "ಅಣ್ಣಾ....ಅಣ್ಣಾ" ಎಂದು ಕೂಗಿ ಏಳಲು ಹೋದಾಗ ಸೀತಮ್ಮ ಹಿಂದೆ ಜಡೆಯನ್ನು ಹಿಡಿದು ಎಳೆದಳು. "ಅಯ್ಯೋ!" ಎಂದು ಕೂಗಿ ದೈನ್ಯದೃಷ್ಟಿಯಿಂದ ತಂದೆಯ ಕಡೆ ನೋಡಿ ತನ್ನ ಅಸಹಾಯತೆಯನ್ನು ತೋರಿಸಿಕೊಂಡಾಗ ವೆಂಕಟರಾಯರೂ ನಕ್ಕು ಬಿಟ್ಟರು.

"ಇದೇನು ವೆಂಕಣ್ಣ ಇವತ್ತು ಇಷ್ಟು ಬೇಗ ಬಂದುಬಿಟ್ಯಲ್ಲ. ಇನ್ನು ಸೂರ್ಯ ಕಿಟಕಿ ಕೆಳಗೆ ಬಂದೆ ಇಲ್ಲ." ಸಾವಿತ್ರಮ್ಮ ಹೊರಗೆ ಬಂದು ಎದುರಿಗಿದ್ದ ದೊಡ್ಡ ಕಿಟಕಿಯನ್ನು ನೋಡುತ್ತ ಪ್ರಶ್ನಿಸಿದಳು. ವೆಂಕಟರಾಯರು ಪ್ರತಿದಿನವೂ ಕಛೇರಿ ಮುಗಿಸಿ ಸ್ವಲ್ಪಹೊತ್ತು ಸ್ನೇಹಿತರೊಡನೆ ಹರಟೆ ಕೊಚ್ಚಿ ಮನೆಗೆ ಬರಬೇಕಾದರೆ ಆರು ಗಂಟೆ ಆಗಿ ಹೋಗುತ್ತಿತ್ತು. ಪ್ರತಿದಿನ ಸೂರ್ಯ ಕೆಂಪಗೆ ಹೊಳೆಯುತ್ತ ಹೊನ್ನು ಕಿರಣ ಕಿಟಕಿಯಿಂದ ಮನೆಯೊಳಗೆ ಚೆಲ್ಲಿದಾಗ ಸಾಮಾನ್ಯವಾಗಿ ರಾಯರು ಮನೆಗೆ ಬರುತ್ತಿದ್ದ ಪದ್ಧತಿ. ಇಂದು ಇನ್ನೂ ಸೂರ್ಯ ಕಿಟಕಿಯಿಂದ ಬಹುಮೇಲೆ ಇದ್ದ.

"ರಾಮರಾಯ ಹೇಳಿ ಕಳ್ಸಿದ್ದಾನೆ....ನಾಳೆ ನಾವೆಲ್ಲಾ ಹಳ್ಳಿಗೆ ಹೋಗ್ಬೇಕು" ವೆಂಕಟರಾಯರು ನುಡಿದು ಅಲ್ಲೆ ಹಾಲಿನಲ್ಲಿ ತಗುಲಿ ಹಾಕಿದ್ದ ಒಂದು ಸಣ್ಣ ಕೈ ಚೀಲವನ್ನು ತೆಗೆದುಕೊಂಡು ಬಾಗಿಲ ಬಳಿಯಲ್ಲಿ ಬಿಟ್ಟಿದ್ದ ಚಪ್ಪಲಿಯನ್ನು ಹಾಕಿಕೊಂಡು ಹೊರಗೆ ಹೋಗಲು ಅಣಿಯಾದರು.

"ಅದೇನೊ ಅಷ್ಟು ಅವ್ಸರದ ಕೆಲ್ಸ? ಯಾವಾಗ ಹೇಳಿ ಕಳ್ಸಿದ?" ಸಾವಿತ್ರಮ್ಮ ಗಾಭರಿಯಿಂದ ಪ್ರಶ್ನಿಸಿದರು. ಏನೋ ಕಳವಳ ಅವರ ಮುದಿ ಮುಖದಲ್ಲಿ ಆಗಲೆ ಮೂಡಿತ್ತು.

"ಇದೇನು ಇಷ್ಟು ಅವಸರವಾಗಿ ಬಂದೋರೆ ಹೊರ್ಟುಬಟ್ರಲ್ಲ...." ಸೀತಮ್ಮ ಮಗಳಿಗೆ ಹೆರಳನ್ನು ಹಾಕಿ ಹೂ ಮುಡಿಸುತ್ತ ಎದ್ದು ನಿಂತು ಪ್ರಶ್ನಿಸಿದಳು.

"ಅಮ್ಮಾ ಇವಳ್ಗೆ ಸ್ವಲ್ಪ ಬುದ್ದಿ ಹೇಳಮ್ಮ. ಗಂಡ್ಸು ಹೊರಗೆ ಹೋಗೊವಾಗ ಹಾಗೆಲ್ಲ ಕೇಳಬಾರ್ದು ಅಂತ" ನಗುತ್ತ ನುಡಿದರು ರಾಯರು. ಹಾಗೇ ಚಪ್ಪಲಿ ಕಾಲಿನಿಂದಲೇ ಮುಂದೆ ಬಂದು ಮಗಳನ್ನು ಎತ್ತಿಕೊಂಡರು.

"ಅಯ್ಯೋ ಇಳಿಸಿ ಮೊದ್ಲು...ಚೆನ್ನಾಗಿದೆ! ಅವಳೇನು ಇನ್ನು ಎಳೆ ಕೂಸೆ? ನೀವು ಮುದ್ದಿಸಿ ಕೂಡಿಸುವುದು ನನಗೆ ಬರುತ್ತೆ ಪ್ರಾಣಸಂಕಟಕ್ಕೆ ...." ತಾಯಿ ಕೆಣಕುವ ಧ್ವನಿಯಲ್ಲಿ ನುಡಿದರು. ಅದರಲ್ಲಿ ಬೇಸರವಿರಲಿಲ್ಲ.

"ಇವರ ಹರಟೇನೆ ಆಯ್ತು....ನಾನು ಕೇಳಿದ್ದು ಮರ್ತೇ ಹೋಯ್ತು ಅಂತ ಕಾಣುತ್ತೆ." ಸಾವಿತ್ರಮ್ಮ ನುಡಿದಳು.

"ನಾಳೆ ರಾಮರಾಯ ಸತ್ಯನಾರಾಯಣನ ವ್ರತ ಮಾಡ್ತಾನಂತೆ. ನಾವೆಲ್ಲಾ ಹೋಗ್ಬೇಕಂತೆ. ಇವತ್ತು ಮಧ್ಯಾಹ್ನ ಚೀಟಿ ಬರ್ದು ಹೇಳಿ ಕಳ್ಸಿದ್ದ. ಮನೆಯವರನ್ನೆಲ್ಲಾ ಕಂಡಿತ ಕರಕೊಂಡು ಬೆಳಿಗ್ಗೆ ಅಷ್ಟು ಹೊತ್ತಿಗೆ ಬಂದುಬಿಡು ಅಂತ ಬರೆದಿದ್ದಾನೆ. ರಸ್ತೆ ಹತ್ರಕ್ಕೆ ಗಾಡೀನೂ ಕಳಿಸಿರ್ತಾನಂತೆ....ಏನಮ್ಮ ಹೋಗೋದು ತಾನೆ....? ನಾವೂ ಹೋಗಿ ತುಂಬ ದಿವ್ಸ ಆಯ್ತು ನೋಡಿಕೊಂಡು ಬಂದ ಹಾಗಾಗುತ್ತೆ....ವ್ರತ ಬೇರೆ ಪುಣ್ಯ ಬರುತ್ತೆ ನೋಡಿದ್ರೆ. ಏನಮ್ಮ....ಹೂಂ ಬರ್ತೇವಿ ಅಂತ ನಾನೇನೋ ಹೇಳಿಕಳ್ಸಿಬಿಟ್ಟೆ....ಸರಿತಾನೆ...."

ಬೇಡವೆಂದು ಉತ್ತರ ಬರುವುದಿಲ್ಲವೆಂದು ರಾಯರಿಗೆ ಚೆನ್ನಾಗಿ ಗೊತ್ತಿತ್ತು. ರಾತ್ರಿ ಸರಿಹೊತ್ತಿನಲ್ಲಿ ಊರಿಗೆ ಹೋಗಿ ನೋಡಿಕೊಂಡು ಬರೋಣ ಎಂದು ತಾಯಿಯನ್ನು ಎಬ್ಬಿಸಿದರೂ ಅವರು ಉತ್ಸಾಹದಿಂದ ಹೊರಡುತ್ತಿದ್ದರು. ತಮ್ಮ ಗ್ರಾಮವೆಂದು ಅಷ್ಟು ಅಭಿಮಾನ. ಬೆಳೆದು ಬಾಳಿದ ಮನೆಯನ್ನು ನೋಡುವ ಹುಚ್ಚು ಬಯಕೆ. ಇದನ್ನು ಅರಿತಿದ್ದ ರಾಯರು ಹೊರಡುವುದನ್ನು ನಿರ್ಧರಿಸಿ ಹೇಳಿ ಕಳುಹಿಸಿಬಿಟ್ಟಿದ್ದರು.

"ನಾವೂ ಇಷ್ಟರಲ್ಲೆ ಒಂದುದಿನ ವ್ರತ ಮಾಡ್ಬೇಕು ವೆಂಕಣ್ಣ. ಇವತ್ತು ರಾತ್ರಿ ನಾನೂ ಈ ವಿಷಯ ಪ್ರಸ್ತಾಪಿಸೋಣ ಅಂತಿದ್ದೆ. ನಿನ್ನೆ ರಾತ್ರಿ ಕನಿಸ್ನಲ್ಲಿ ಒಬ್ಬ ಬ್ರಾಹ್ಮಣ ಬಂದು 'ಏನು ನನ್ನ ಮರ್ತು ಬಿಟ್ರಲ್ಲ' ಅಂದರು. ತಕ್ಷಣ ಎಚ್ಚರ ಆಯ್ತು. ಮೈ ಬೆವರಿಹೋಗಿತ್ತು. ಆಗ್ಳೆ ಕೆನ್ನೆಗೆ ನಾಲ್ಕು ಹಾಕಿಕೊಂಡು ನಾವು ಮಾಡಿದ ತಪ್ಪನ್ನು ಕ್ಷಮಿಸು ಅಂತ ಬೇಡಿಕೊಂಡೆ. ಎರಡು ವರ್ಷ ಆಗಿಹೊಯ್ತು. ಇನ್ನು ನಾವು ವ್ರತ ಮಾಡಿಲ್ಲ....ಆ ಮಾರಾಯ ನಮ್ಮಪ್ಪ ಸತ್ಯನಾರಾಯಣ ಎಚ್ಚರಿಸಿದ. ಅದಕ್ಕೆ ಸರಿಯಾಗಿ ಇವತ್ತು ಅವನ ಹೆಸರನ್ನು ನಿನ್ನ ಬಾಯಲ್ಲೆ ಕೇಳ್ದೆ. ನಾಳೆ ಅವನ ವ್ರತಾನೂ ನೋಡೊ ಭಾಗ್ಯ ಬೇರೆ ಲಭಿಸಿದೆ. ಅಂತೊದ್ರಲ್ಲಿ ಹೋಗ್ದೆ ಉಂಟೇನೊ ?....ಎಷ್ಟು ದೂರ ಆಗಿದ್ರೂ ಹೋಗ್ಲೇಬೇಕಾದ ವಿಷಯ. ನಾಳೆ ಬೆಳಗ್ಗೇ ಎದ್ದೋರೆ ಹೊರ್ಟುಬಿಡೋಣಾ. ಅಲ್ಲಿಂದ ಬಂದ ಮೇಲೆ ನಾವೂ ಒಂದು ದಿನ ವ್ರತ ಮಾಡಿ ಅವರನ್ನು ಕರೆಸೋಣಾ....ಅದಿರ್ಲಿ ಹಾಗೆ ಹೊರಗೆ ಹೋಗ್ತಾ ಇದ್ದೀಯಲ್ಲ. ಸ್ವಲ್ಪ ಹೆಚ್ಚಾಗಿಯೇ ಹೂವು, ಹಣ್ಣು, ತರಕಾರಿ ಎಲ್ಲಾನೂ ತಂದುಬಿಡು. ನಮ್ಮ ಸೇವೇನೂ ಸ್ವಲ್ಪ

ಸೇರಲಿ." ಸಾವಿತ್ರಮ್ಮ ಉಪದೇಶಿಸಿದರು.

"ನಡಿಯಣ್ಣ ಹೋಗೋಣಾ....ನಂಗೆ ಬಿಸ್ಕತ್ತು ಕೊಡ್ಸು" ತಂದೆಯ ಬೆನ್ನಿನ ಮೇಲೆ ತನ್ನ ಪುಟ್ಟ ಕೈಯಿಂದ ಒಂದು ಏಟನ್ನು ಕೊಟ್ಟಳು. ಶಕುಂತಲ.

"ಹೂ! ನಡಿ ಹೋಗೋಣಾ" ಎತ್ತಿಕೊಂಡಿದ್ದವಳನ್ನು ಕೆಳಗೆ ಇಳಿಸಿ ಕೈ ಹಿಡಿದು ಹೊರಗೆ ಹೊರಟರು.

ವೆಂಕಟರಾಯರು, ಸೀತಮ್ಮ, ಸಾವಿತ್ರಮ್ಮ, ಶಕುಂತಲ ಇವರನ್ನು ಇಳಿಸಿದ ಬಸ್ಸು ಭರ್ ಎಂದು ಶಬ್ದ ಮಾಡಿ ಧೂಳನ್ನು ಹಿಂದೆ ತಳ್ಳಿ ಮುಂದೆ ಹೊರಟುಹೋಯಿತು. "ಅಮ್ಮ ಯಾಕಮ್ಮ ಬಸ್ಸು ಹೊರ್ಟು ಹೋಯ್ತು" ಹೋದ ಕಡೆಗೇ ದೃಷ್ಟಿಯನ್ನು ನಿಲ್ಲಿಸಿದ್ದ ಶಕುಂತಲೆ ತಾಯಿಯ ಸೀರೆಯ ಸೆರಗನ್ನು ತನ್ನ ಬೆರಳಿಗೆ ಸುತ್ತಿಕೊಳ್ಳುತ್ತ ಪ್ರಶ್ನಿಸಿದಳು. ಸೀತಮ್ಮ ಮಗಳ ಪ್ರಶ್ನೆಗೆ ಉತ್ತರ ಕೊಡಲಿಲ್ಲ.

"ಇದೇನು ಗಾಡೀನೂ ಬಂದಿಲ್ಲ ಏನೂ ಇಲ್ಲ...." ಒಂದು ಮೈಲಿಯನ್ನು ನಡೆಯಬೇಕೆಂಬ ಬೇಸರ ಸೀತಮ್ಮನ ಮಾತಿನಲ್ಲಿ ಸಿಡಿದಿತ್ತು.

"ನಾನ್ಹೇಳ್ದೆ ಎರಡನೆ ಬಸ್ಸಿಗೆ ಹೋಗೋಣಾ ಅಂತ. ಇನ್ನೂ ಚೆನ್ನಾಗಿ ಬೆಳಕೆ ಹರಿಯೊಕಿಲ್ಲ ನಾವು ಬಂದ್ರೆ ಅವರಿಗೆ ಏನು ಗೊತ್ತು ನಾವು ಇಷ್ಟು ಬೇಗ ಬರ್ತೇವಿ ಅಂತ, ಸ್ವಲ್ಪ ಹೊತ್ತು ನೋಡೋಣಾ ಬಂದುಬಿಡುತ್ತೆ ಗಾಡಿ" ವೆಂಕಟರಾಯರು ಆದೇತಾನೇ ಹುಟ್ಟುತ್ತಿದ್ದ ಸೂರ್ಯನನ್ನು ನೋಡುತ್ತ ನುಡಿದರು. ಸೂರ್ಯಕ್ಷಿತಿಜದಿಂದ ಒಂದು ಮಾರು ಮೇಲೆ ಬಂದಿದ್ದರೂ ಮೋಡ ಮುಸಿಕಿದ್ದುದರಿಂದ ಬಿಸಿಲು ಚೆನ್ನಾಗಿ ಬಿದ್ದಿರಲಿಲ್ಲ. ಮೋಡದ ಹಿನ್ನೆಲೆಯಲ್ಲಿ ಹೊರಟ ಹೊನ್ನು ಕಿರಣ ಚಕ್ರದ ಹಲ್ಲುಗಳಂತೆ ಕಾಣುತ್ತಿದ್ದವು. ಸುತ್ತಲ ಶಾಂತ ನಿಸರ್ಗ ರಾತ್ರಿಯ ಮಂಜಿನಿಂದ ನವ್ಯವಾಗಿ ನಿಂತಿತ್ತು.

"ಅಯ್ಯೊ ಬನ್ನಿ... ನಿಂತಿರೊಬದ್ಲು ಹಾಗೇ ಹೋಗ್ತಾ ಇರೋಣಾ ಗಾಡಿ ಬಂದ್ರೆ ಹತ್ತಿಕೊಳ್ಳೋಣ" ಸಾವಿತ್ರಮ್ಮ ಉತ್ತರವನ್ನು ನಿರೀಕ್ಷಿಸದೆ ಮುಂದೆ ಸರಿದರು.

"ಯಾಕೆ ನಡೆದು ಹೋಗ್ಬೇಕು ಇನ್ನೇನು ಗಾಡಿ ಬಂದುಬಿಡುತ್ತೆ.... ಬಾಮ್ಮ ಹೋಗೋಣಾ" ಹೋಗುತ್ತಿದ್ದ ತಾಯಿಯನ್ನು ಕೂಗಿ ಕರೆದರು ರಾಯರು.

ತಾಯಿ ಉತ್ತರ ಕೊಡದೆ ಏರುತ್ತಿದ್ದ ದಿಣ್ಣೆಯನ್ನು ಪೂರ್ಣ ಹತ್ತಿ ಮೇಲೆ ನಿಂತು ಸುತ್ತಲೂ ದೃಷ್ಟಿಯನ್ನು ಹರಿಸಿದರು.

"ಬಾರೆ ಹೋಗ್ಲಿ ಹೋಕ್ತಾ ಇರೋಣಾ ಅಮ್ಮ ಹೊರ್ಟುಹೋದಳು" ರಾಯರು ಮಗಳ ಕೈಯನ್ನು ಹಿಡಿದೆತ್ತಿ ಹೆಂಡತಿಯನ್ನು ಉದ್ದೇಶಿಸಿ ನುಡಿದರು.

"ಅಣ್ಣಾ....ಅಣ್ಣಾ....ಆ ಹೂವು ಚೆನ್ನಾಗಿದೆ ಕಿತ್ತುಕೊಡಣ್ಣ.... ಅದಲ್ಲ....ಅದಲ್ಲ....ಅದರ ಮೇಲಿಂದು" ಬೇಲಿಯ ಗಿಡದ ಮೇಲೆ ಬೆಳೆದು ಅರಳಿ, ನಿಂತಿದ್ದ ಉಗಣೆಯ ಅಗಲ ಹೂವನ್ನು ನಿರ್ದೇಶಿಸಿ ನುಡಿದಳು. ರಾಯರು ಒಂದು ನಿಮಿಷ ಅಲ್ಲಿ ಇಲ್ಲಿ ಕೈಯಾಡಿಸಿ ಮಗಳ ನಿರ್ದೇಶನದಂತೆ ಕೊನೆಗೆ ಆ ಹೂವನ್ನು ಕಿತ್ತರು.

"ಇದೇನು ಅಂದ್ರೆ ಚೀಲ ಎಲ್ಲಿ ಹಣ್ಣು ಹೂವಿಂದು....!?" ಇದ್ದಕ್ಕಿದ್ದಂತೆಯೇ ಬೆಚ್ಚಿಬಿದ್ದು ಪ್ರಶ್ನಿಸಿದಳು ಸೀತಮ್ಮ.

ಕಿತ್ತಿದ್ದ ಹೂವನ್ನು ಹಾಗೆಯೇ ಬೇಲಿಯ ಪೊದೆಯ ಮೇಲೆಯೇ ಬಿಟ್ಟು "ಎಲ್ಲಿ....!ಏನು....!!....ಚೀಲ....?!" ಗಾಬರಿಯಾಗಿ ಹೆಂಡತಿಯತ್ತ ತಿರುಗಿದರು.

"ಅಮ್ಮಾ ಚೀಲ ಇದ್ಯೇನಮ್ಮ" ನಾಲ್ಕು ಹೆಜ್ಜೆ ಮುಂದೆ ಹೋಗಿ ಮುಂಗಾಲ ಮೇಲೆ ನಿಂತು ಅತ್ತೆಯನ್ನು ಕೂಗಿದಳು ಸೀತಮ್ಮ.

"ಏನು ಬಸ್ಸಿನಲ್ಲೇ ನಿಂತು ಹೋಯ್ತೊ ಏನೋ....ಅಮ್ಮನ ಕೈಲೂ ಇರೊ ಹಾಗಿಲ್ಲ" ನುಡಿಯುವಾಗ ರಾಯರ ಕೊರಳು ಕಂಪಿಸುತ್ತಿತ್ತು. ಅಮೂಲ್ಯ ವಸ್ತುವನ್ನು ಕಳೆದುಕೊಂಡಾಗಿನ ವ್ಯಸನವಿತ್ತು ಮಾತಿನಲ್ಲಿ.

"ಏನು ಹಾಳು ಮರವೊ..." ಇದರಲ್ಲಿ ತಾನು ಭಾಗಿಯಲ್ಲವೆಂಬಂತೆ ಗಂಡನ ಕಡೆಗೆ ತೀಕ್ಷ್ಣವಾಗಿ ನೋಡುತ್ತ ನುಡಿದಳು ಸೀತಮ್ಮ.

"ಬಂತು ಗಾಡಿ....ಬನ್ನಿ....ಬನ್ನಿ....ಮೊನ್ನೆ ತಂದನಂತಲ್ಲ ಅವೆ ಎತ್ತಿರಬೇಕು....ದೊಡ್ಡ ಬಿಳಿಯ ಎತ್ತುಗಳು." ಮೇಲೆ ನಿಂತಿದ್ದವರು ಪುನಃ ದಿಣ್ಣೆಯನ್ನು ಇಳಿದರು ತಾಯಿ.

ತಾಯಿಯ ಕೈ ಬರಿದಾಗಿರುವುದನ್ನು ಕಂಡ ಇವರು ಅವರ ಮಾತಿಗೆ ಪುಷ್ಟಿ ಕೊಡುವ ಸ್ಥಿತಿಯಲ್ಲಿರಲಿಲ್ಲ.

"ಅಣ್ಣಾ....ಅಣ್ಣಾ ಹೂವು ಬಿದ್ದುಹೋಯ್ತು ತೆಕ್ಕೊಡಣ್ಣ.... ಹಾಗೆ ಅದರ ಮೇಲಿಂದು ಇನ್ನೊಂದು ಬಿಳಿ ಹೂವು ..." ಶಕುಂತಲೆಯ ಮುಗ್ಧ ಮನಸ್ಸಿನ ಓಟ ಅದೆತ್ತಲೊ.

"ಅದ್ಯಾಕೆ ಕಲ್ಲು ನಿಂತಾಗೆ ನಿಂತಿದ್ದೀರಿ ಬನ್ನಿ ಮೇಲಕ್ಕೆ ಗಾಡಿ ಬಂತು

...." ಕೆಳಗೆ ಇಳಿಯುತ್ತಲೇ ಇವರನ್ನು ದಿಬ್ಬದ ಹತ್ತಿರ ಬರುವಂತೆ ಕೂಗಿದರು ಅಜ್ಜ.

ಅಮ್ಮಾ ಚೀಲ್ವೆ ಇಲ್ವಲ್ಲ. ಬಸ್ಸಿನಲ್ಲೊ ಏನೋ ಮರ್ತು ಹೋಯ್ತು...." ನುಡಿಯುವಾಗ ರಾಯರ ಬಾಯಿ ಒಣಗಿ ಹೋಗಿತ್ತು.

"ಹಾ !....ಏನಂದಿ....!!....ಚೀಲವಿಲ್ಲ....ದೇವರಿಗೆ ತಂದದ್ದು....!!!"

ನುಡಿಯುವಾಗ ತಾಯಿಯ ಮುಖ ವಿವರ್ಣವಾಗಿತ್ತು. ಹಲ್ಲುಗಳು ಬಿದ್ದು ಹೋಗಿದ್ದ ಬೊಚ್ಚು ಬಾಯಲ್ಲಿ ತೆಳವು ಕಪ್ಪು ತುಟಿಗಳು ಬಹುವಾಗಿ ಕಂಪಿಸಿದವು. ಗುಣಿಯಲ್ಲಿ ಹಿಣಕಿ ನೋಡುತ್ತಿದ್ದ ನೀಲಿಯ ಗುಡ್ಡೆಗಳು ನಿಶ್ಚಲವಾದವು. ಕಾಲುಗಳು ನಿರ್ಬಲವಾಗಿದ್ದರೂ ಏನೋ ಸ್ಫೂರ್ತಿ ಬಂದಂತಿತ್ತು. ಒಂದು ಕ್ಷಣದಲ್ಲಿ ದಿಬ್ಬವನ್ನು ಪೂರ್ಣ ಕೆಳಗೆ ಇಳಿದಿದ್ದರು

"ಇದೇನು ಮಾಡಿಬಿಟ್ಯೊ ವೆಂಕಣ್ಣ....? ಕೈಲೆ ಹಿಡಿದು ಕೊಂಡು ಕೂತಿದ್ದೆಯಲ್ಲೊ....ಅದ್ಯಾಗೆ ಮರ್ತು ಬಿಟ್ಟೆ...." ನುಡಿ ಒಳಗಿನ ಅಳಲಿನಿಂದ ನಡುಗುತ್ತಿತ್ತು. "ಹಾಳು ಮುಂಡೇಳು ನಂಗೂ ಜ್ಞಾನ ಬೇಡ್ವೆ.... ಅದೇನು ಮಂಕು ಕವಿದಿತ್ತೊ ನಮ್ಮ ಬುದ್ಧಿಗೆ....?! ಅಯ್ಯೊ ಸೀತೆ ನೀನಾರೂ ಜ್ಞಾಪಿಸೋಕ್ಕಿಲ್ವೇನೆ....?....ಆ ಸತ್ಯನಾರಾಯಣನಿಗೆ ನಮ್ಮ ಪದಾರ್ಥ ಬೇಕಾಗಿರಲಿಲ್ಲ ಅಂತ ಕಾಣುತ್ತೆ" ನೊಂದ ಮನಸ್ಸಿನಿಂದ ಬಿಸಿಯುಸಿರು ನುಗ್ಗಿ ಬಂತು. ವೆಂಕಟರಾಯರು ಮೂಕರಾಗಿ ಮೇಲೆ ಕೆಳಗೆ ನೋಡುತ್ತಿದ್ದರು. ಏನೋ ಮೂಕಯಾತನೆ....! ಮಾಡಬಾರದ ಕಾರ್ಯ ಮಾಡಿದಾಗಿನ ಕಳವಳ....!! ದೇವರ ಕೆಲಸಕ್ಕಾಗಿ ಬಹಳ ಭಕ್ತಿಯಿಂದ ತಂದದ್ದು ಹೀಗಾಯಿತಲ್ಲ ಎಂದು ಅಸಮಾಧಾನ.

"ಸತ್ಯನಾರಾಯಣನಿಗೆ ನಮ್ಮ ಪೂಜೆ ಬೇಕಾಗಿರಲಿಲ್ಲ...." ತಾಯಿ ಸೌಮ್ಯವಾಗಿ ನುಡಿದರೂ ಅಂತರ್ಯದಲ್ಲಿ ಬೇಗೆ ದಹಿಸುತ್ತಿತ್ತು.

"ರಾಮರಾಯನೇನೋ ಬೇಕಾದಷ್ಟು ಬೇರೆ ತರ್ಸಿಯೇ ಇರ್ತಾನೆ...." ರಾಯರು ನುಡಿದರು. "ಎಂದೂ ಇಲ್ಲದ ಮರವು ಇವತ್ತು ನನ್ನ ಕಬಳಿಸಿತ್ತು." ಮುಂದುವರಿಸಿದರು.

"ಹೋಗ್ಲಿ ಬಿಡು ಆದ್ದು ಆಗಿಹೊಯ್ತು. ಎಷ್ಟು ಮರುಗಿದ್ರೇನು ಫಲ...." ಸಾವಿತ್ರಮ್ಮನೆ ಸಮಾಧಾನವನ್ನು ಹೇಳಿದರು.

ಸೀತಮ್ಮ ಮೌನವಾಗಿದ್ದಳು.

ಗಣಗಣ ಎಂದು ಗೆಜ್ಜೆಯ ಸದ್ದನ್ನು ಮಾಡಿಕೊಂಡು ಭೈರಣ್ಣನ ಗಾಡಿ ಬಂತು.

"ಎದ್ದಿರಾ ಬುದ್ಧಿ....ಎದ್ದಿರಾ ಅಮ್ಮನೋರ....?" ಭೈರಣ್ಣ ಅಡಕೆಲೆಯನ್ನು ಆಗಲೇ ಜಗಿಯುತ್ತ ಕೆಂಪಗಾಗಿದ್ದ ಹಲ್ಲನ್ನು ಕಿರಿದು ನಕ್ಕ. "ಚಿಕ್ಕ ಅಮ್ಮನೋರು ಆಗ್ಲೆ ಎಷ್ಟು ಬೆಳ್ದು ಬಿಟ್ಟವ್ರೆ" ತುಂಬು ಅಭಿಮಾನದಿಂದ ನುಡಿದ.

"ಏನು ಬೆಳೆದಿದೆ....ನಿಮ್ಮ ಮಗು ಆಗಿದ್ರೆ ಇನ್ನಷ್ಟು ಬೇಳೀತಿದ್ಲು...." ಸಾವಿತ್ರಮ್ಮನವರಿಗೆ ತನ್ನ ಮೊಮ್ಮಗಳು ವಯಸ್ಸಿಗೆ ಮೀರಿ ಚೆನ್ನಾಗಿಯೇ ಬೆಳೆದಿದ್ದಾಳೆ ಎಂಬ ನಂಬಿಕೆ ಇದ್ದರೂ ಸ್ವಾಭಿಮಾನವನ್ನು ಬಿಡದೆ ನುಡಿದರು.

"ಇದೇನೇನೋ ರಾಮುರಾಯ ಹೊಸದಾಗಿ ಕೊಂಡಿದ್ದು....?" ಸಾವಿತ್ರಮ್ಮನೇ ಪ್ರಶ್ನಿಸಿದರು.

ಅಚ್ಚ ಬಿಳಿಯ ಎರಡು ಹೋರಿಗಳು ತಲೆ ಎತ್ತಿ ಯಾರೊ ಹೊಸಬರೆಂದು ಇವರೆನ್ನೆ ನೋಡುತ್ತಿದ್ದವು.

"ಹಸು ಎಷ್ಟು ದೊಡ್ಡದು" ಶಕುಂತಲ ನುಡಿದು ಹೋರಿಗಳ ಹಿಂದೆ ಬಂದಾಗ ಸೀತಮ್ಮ ಓಡಿ ಹೋಗಿ ಅವಳನ್ನು ಎತ್ತಿಕೊಂಡಳು. "ಥೂ ಮುಂಡೇದೆ ಎಲ್ಲಾದ್ರೂ ಅದು ಒದ್ದಿದ್ರೆ...." ಮುಂದಿನ ಪರಿಣಾಮ ನೆನೆದ ಅವರ ಮುಖ ವಿವರ್ಣವಾಗಿತ್ತು.

ಭೈರಣ್ಣ ಗಾಡಿಯನ್ನು ಬಿಟ್ಟ. ಸೀತಮ್ಮ ಮೊದಲು ಹತ್ತಿ ಗಾಡಿಯೊಳಗೆ ಹೋಗಿ ಕುಳಿತುಕೊಂಡಳು. ಸಾವಿತ್ರಮ್ಮ ಶಕುಂತಳನ್ನು ಹತ್ತಿಸಿ ತಾನೂ ಹತ್ತಿ ಕುಳಿತುಕೊಂಡರು. "ಹೂ. ಹೂಡೋ ಗಾಡೀನಾ...ನಾನು ಆಮೇಲೆ ಹತ್ತೇನಿ...." ರಾಯರು ನುಡಿದು ಮುಂದೆ ಹೋದರು. ಭೈರ ಗಾಡಿ ಹೊಡಿ 'ಹೆ' ಅಂದ. ತಿಂದು ಪುಷ್ಟವಾಗಿ ಬೆಳೆದಿದ್ದ ಹೋರಿಗಳು ನೆಗೆದು ಮುಂದೆ ಸಾಗಿದವು.

"ಬನ್ನಿ ಅಂದ್ರೆ...." ಸೀತಮ್ಮ ಗಂಡ ಹಿಂದೆ ಬಿದ್ದುದನ್ನು ಕಂಡು ಕೂಗಿದಳು.

"ಅಣ್ಣಾ....ಹಿಂದಾದ....ನಾವೇ ಮುಂದು..." ಗಾಡಿಯ ಕಳಗ ಹಿಡಿದು ನಿಂತು ಕೂಗಿದಳು ಶಕುಂತಲ.

"ಬಂದೆ....ಬಂದೆ...." ರಾಯರು ಕೂಗಿ ನಾಲ್ಕು ಹೆಜ್ಜೆ ಓಡಿ ನೆಗೆದು ಹಿಂದಿನಿಂದ ಹತ್ತಿಕೊಂಡರು.

"ಅಣ್ಣಾ ಓಡ್ತಾನೆ...." ಚಪ್ಪಾಳೆ ತಟ್ಟಿ ನಗುತ್ತ ನುಡಿದಳು ಶಕುಂತಲ.

ಭೈರಣ್ಣ ಊರಿನ ವಿಷಯವನ್ನೇಲ್ಲಾ ಹೇಳುತ್ತಿದ್ದ. ಮೂವರ ಕಿವಿ

ಗಳೂ ಅದನ್ನೇ ಕೇಳುತ್ತಿದ್ದರೂ ಒಮ್ಮೊಮ್ಮೆ ಪ್ರಶ್ನೆಯನ್ನು ಅಥವ ಉತ್ತರ ವನ್ನೋ ನುಡಿಯುತ್ತಿದ್ದರು.

ಶಕುಂತಲ ಸುತ್ತಲಿನ ಹಸರು ಬಯಲನ್ನೂ, ಅರಳಿ ಹೊಲದಲ್ಲಿ ನಿಂತಿದ್ದ ನಾನಾ ಬಣ್ಣದ ಅವರೆ, ತಗರಿ, ಹುಚ್ಚೆಳ್ಳು....ಸಾಸುವೆ ಗಿಡಗಳ ಹೂವುಗಳನ್ನು ತೆರದ ಕಣ್ಣಿನಿಂದ ನೋಡುತ್ತಿದ್ದಳು.

ಗಾಡಿ ಊರ ಬಾಗಿಲನ ಹತ್ತಿರ ಬರುವಷ್ಟರಲ್ಲಿ ರಾಮರಾಯ, ತಮ್ಮ ಮಗ ಗೋಪಾಲನ ಜೊತೆಯಲ್ಲಿ ಇವರ ಬರುವನ್ನೆ ಕಾಯುತ್ತ ನಿಂತಿದ್ದರು. ಎಲ್ಲರಿಗಿಂತ ಇವರನ್ನು ಮೊದಲು ಕಂಡು ಕೂಗಿದವಳು ಶಕುಂತಲ.

" ಅಮ್ಮಾ....ಅಮ್ಮ ಗೋಪಾಲನ್ನ ನೋಡಮ್ಮ...." ಗಾಡಿಯಲ್ಲಿ ಸಂತೋಷದಿಂದ ಕುಣಿದಳು. ದೂರದಲ್ಲಿ ನಿಂತಿದ್ದ ಅವನನ್ನು ಕಂಡು ಎಲ್ಲಿಲ್ಲದ ಆನಂದ ಅವಳಿಗೆ. ಏನೋ ಹೊಸ ತೃಪ್ತಿ. ಅಮಿತ ಉತ್ಸಾಹ. " ಸೀನೂಗಿಂತ ಒಳ್ಳೇನು....ಗೋಪಾಲ " ತನ್ನ ನೆರಮನೆಯ ಹುಡುಗನಿ ಗಿಂತಲೂ ಗೋಪಾಲನಲ್ಲಿ ಏನೋ ಹೊಸತನವನ್ನು ಕಂಡಿದಳು. ಶೀನುವಿಗೆ ಪಟ್ಟಣದವನಾದ ತಾನು ಹೆಚ್ಚು ಓದಿದವನೆಂಬ ಅಭಿಮಾನ. ಗೋಪಾಲ ನಿಗೆ ಪಟ್ಟಣದ ಶಕುಂತಲೆ ತನ್ನ ಸ್ನೇಹಿತೆ ಎಂಬ ಸಂತೋಷ. ಅವಳು ಹೇಳಿದ್ದೆಲ್ಲಾ ಇವನಿಗೆ ಕಂಡಷ್ಟು ಸತ್ಯ. ಎಲ್ಲೋ ನಾಲ್ಕುಬಾರಿ ಇಬ್ಬರೂ ಕೂಡಿ ಆಡಿದ್ದರೂ ನಿತ್ಯವೂ ಆಡಲು ಸಿಗುವ ಸ್ನೇಹಿತರಿಗಿಂತ ಹೆಚ್ಚಿಗೆ ಹೊಂದಿಕೊಂಡಿದ್ದರು.

ದೂರದಲ್ಲಿ ರಾಮುರಾಯರನ್ನು ಕಂಡ ವೆಂಕಟರಾಯರು ಗಾಡಿಯಿಂದ ಕೆಳಗೆ ಇಳಿದು ಗಾಡಿಗಿಂತ ಜೋರಾಗಿ ಹೆಜ್ಜೆ ಹಾಕಿ ಮುಂದೆ ಸಾಗಿದರು. ಇವರನ್ನು ಕಂಡು ರಾಮುರಾಯರು ನಗುತ್ತ ಮುಂದೆ ಬಂದರು.

" ಏನು ರಾಮರಾಯ ಚೆನ್ನಾಗಿದ್ದಿಯಾ...." ಇನ್ನೂ ಹತ್ತು ಗಜ ದೂರದಲ್ಲಿರುವಾಗಲೇ ಪ್ರಶ್ನಿಸಿದರು ರಾಯರು.

" ಏನೊ ಇಷ್ಟರ ಮಟ್ಟಿಗ ಇದ್ದೇನೆ....ಯಾಕೆ ಹೊತ್ತಾಯ್ತು.... ಬಸ್ಸು ಲೇಟಾಯ್ತಾ " ಸರಿಯಾದ ಕಾಲಕ್ಕೆ ಅವರು ಬಂದಿದ್ದರೂ ಇವರ ಬರು ವನ್ನೇ ನಿರೀಕ್ಷಿಸುತ್ತ ನಿಂತಿದ್ದ ಅವರಿಗೆ ಬಹಳ ವೇಳೆಯಾಗಿದ್ದಂತೆ ಕಂಡಿತ್ತು. ಗೋಪಾಲ ಆಗಲೇ ಓಡಿ ಹೋಗಿ ಗಾಡಿಯ ಹಿಂದು ಗಡೆ ಶಕುಂತಲೆಯೊಡನೆ ಮಾತಿಗೆ ಆರಂಭಿಸಿದ್ದ.

" ಈ ಸಾರಿ ಒಳ್ಳೆ ಭರ್ಜರಿ ಹೋರಿ ಕಟ್ಟಿಬಿಟ್ಟಿದ್ದೀಯ ರಾಮ

ರಾಯ...." ಗಾಡಿಯಿಂದಲೇ ತಮ್ಮ ಮೆಚ್ಚಿಗೆಯನ್ನು ವ್ಯಕ್ತಪಡಿಸಿದರು ಸಾವಿತ್ರಮ್ಮ.

"ಬಂದಿದ್ದೆ ಗೊತ್ತಾಗ್ಲಿಲ್ಲ. ಐದು ನಿಮಿಷ ಆಯ್ತೋ ಏನೊ ರೋಡಿ ನಿಂದ ಹೊರಟು" ತಾನು ಮಾತನಾಡದೇ ಇರುವುದು ಸರಿಯಲ್ಲವೆಂದು ಸೀತಮ್ಮನೂ ಧ್ವನಿಗೂಡಿಸಿದಳು.

"ಹಾಳು ಮುದಿ ಎತ್ತುಗಳ್ನ ಕಟ್ಟಿ ಕಟ್ಟಿ ನಷ್ಟಮಾಡಿಕೊಂಡು ಸಾಕಾ ಗಿತ್ತು. ಕೆಲ್ಸವೂ ಸರಿಯಾಗಿ ಆಗ್ತಾ ಇರ್ಲಿಲ್ಲ. ಅದಕ್ಕೆ ಈ ಸಾರಿ ಗಟ್ಟಿ ಮನಸ್ಸು ಮಾಡಿ ಒಂಭೈನೂರು ರೂಪಾಯಿ ಕೊಟ್ಟು ಕೊಂಡೇ ಬಿಟ್ಟೆ." ನಿಜವಾಗಿ ಹೋರಿಗೆ ಎಂಟುನೂರು ರೂಪಾಯಿಗಳನ್ನೆ ಕೊಟ್ಟಿದ್ದರೂ ಮಾತಿನ ರಭಸದಲ್ಲಿ ಹಾಗೆ ನುಡಿದುಬಿಟ್ಟಿದ್ದರು. ಸುಳ್ಳು ಹೇಳಬೇಕೆಂಬ ಛಲವೇನು ಇರಲಿಲ್ಲ.

"ನಮ್ಮ ಅವರೂ ಇಂಥೋದೆ ಹೋರಿಗಳನ್ನು ಕಟ್ತಾ ಇದ್ದರು...." ಒಂದು ಕ್ಷಣದಲ್ಲಿ ಹಿಂದಿನ ನೆನಪು ನುಗ್ಗಿ ಬಂದು ಕಣ್ಣಿನಲ್ಲಿ ಮಹಾ ಪೂರಕ ವಾಗಿ ಆಗಲೇ ಇಳಿಯತೊಡಗಿದರು.

"ಅಯ್ಯೊ ದೊಡ್ಡ ಧಣೇರ....! ಬಿಡಿ ಅಮ್ಮಾ ಅವ್ರೆ ಇದೆಂತವು ಇದಕ್ಕಿಂತಲೂ ಮೇಲಾದವನ್ನೇ ಕಟ್ತಾ ಇದ್ರು." ಹಿಂದಿನ ತನ್ನ ಧಣಿ ಬೆಂಕಿ ಭೀಮಣ್ಣನವರನ್ನು ನೆನೆದು ತನ್ನ ಈಗಿನ ಧಣಿ ರಾಮರಾಯರು ಎದುರಿಗಿದ್ದಾರೆ ಎಂಬುದನ್ನೂ ನೆನೆಯದೆ ನುಡಿದುಬಿಟ್ಟಿದ್ದ. ರಾಮರಾಯರ ಕಿವಿಗೆ ಈ ಮಾತು ಬೀಳದಂತೆ ಸೀತಮ್ಮ ಕೂಗಿದಳು.

"ಲೇ! ಗೋಪಾಲ ಎತ್ತಿ ಹಾಕಿಬಿಡ್ತೀಯಲ್ಲೊ....?!" ಆಗಲೇ ಶಕುಂತಲ ಗಾಡಿಯ ಹಿಂದೆ ಸರಿದು ಕೆಳಗೆ ಧುಮುಕಲು ಪ್ರಯತ್ನಿಸುತ್ತಿದ್ದಳು. ಗೋಪಾಲ ಸಹಾಯಕನಾಗಿ ನಿಂತಿದ್ದ.

"ಏನೂ ಬೀಳ್ಸಲ್ಲ ಸೀತಮ್ಮ" ಕೈ ಹಿಡಿದು ಕೆಳಗೆ ಇಳಿಸಿಯೇ ಬಿಟ್ಟ. ಇಳಿದ ರಭಸಕ್ಕೆ ಒಮ್ಮೆ ಕುಕ್ಕುರು ಬಿದ್ದು ಆಮೇಲೆ ಸರಿಯಾಗಿ ಎದ್ದುನಿಂತು ಧೂಳು ಹಾರಿದ ತನ್ನ ಜರತಾರಿ ಲಂಗವನ್ನು ಕೊಡವಿಕೊಂಡಳು. "ನೋಡು ನಂದು ಜರತಾರಿ ಲಂಗ...." ಲಂಗದ ಅಂಚನ್ನು ಹಿಡಿದು ಗೋಪಾಲಿಗೆ ತೋರಿಸುತ್ತ ನುಡಿದಳು.

"ನಂದೂ ಹೊಸ ಬನೀನು...." ಗೋಪಾಲನೂ ಉತ್ಸಾಹದಿಂದಲೆ ನುಡಿದ.

ಗಾಡಿ ಮನೆಯ ಮುಂದೆ ಹೋಗಿ ನಿಂತಿತು. ಭೈರಣ್ಣ ಹೋರಿ

ಗಳನ್ನು ಬಿಚ್ಚಿ ಪಕ್ಕಕ್ಕೆ ನಿಲ್ಲಿಸಿಕೊಂಡ. ಸೀತಮ್ಮ, ಸಾವಿತ್ರಮ್ಮ ಗಾಡಿಯಿಂದ ಕೆಳಗೆ ಇಳಿದರು. ಗಾಡಿಬಂದ ಶಬ್ದ ಕೇಳಿ ಲಕ್ಷ್ಮೀದೇವಮ್ಮ ಹೊರಗೆ ಬಂದಳು. "ಬನ್ನಿ....ಬನ್ನಿ...ಇನ್ನೂ ಇಷ್ಟೊತ್ತು ಆದ್ರೂ ಯಾಕೊ ಬರ್ಲಿಲ್ಲ ಅಂತಿದ್ದೆ." ಸ್ವಾಗತಿಸಿದಳು.

ಇದಕ್ಕೆ ಮುಂಚೆಯೇ ಬಂದಿದ್ದ ವೆಂಕಟರಾಯರು ಬಚ್ಚಲ ಮನೆಯಿಂದ ಕೈಕಾಲು ತೊಳೆದುಕೊಂಡು ಹೊರಗೆ ಬಂದರು. ರಾಮರಾಯರು ಹೆಗಲಮೇಲೆ ಹಾಕಿಕೊಂಡಿದ್ದ ಟವಲನ್ನು ಕೊಟ್ಟರು. ಸುಮ್ಮನೆ ಒಳಗೆ ಹೋಗುತ್ತಿದ್ದ ಸೀತಮ್ಮ ಗಂಡ ಕಾಲು ತೊಳೆದು ಬಂದುದನ್ನು ಕಂಡು ಅತ್ತೆಯ ಕಡೆಗೆ ನೋಡಿದಳು.

"ಮನೇನೆಲ್ಲಾ ಸಾರ್ಸಿ ರಂಗೋಲಿ ಹಾಕಿದ್ದಾರೆ. ಬಾರೇ ಕಾಲು ತೊಳ್ದು ಹೋಗೋಣಾ...." ಸಾವಿತ್ರಮ್ಮ ಬಾಗಿಲ ಬಳಿಯಲ್ಲಿ ಬಚ್ಚಲ ಮನೆಗೆ ನಡೆದರು. ಹೊರಗಿನಿಂದ ನೀರುತಂದು ತುಂಬಬೇಕಾದ್ದರಿಂದ ಬಾಗಿಲ ಬಲಗಡೆಯೆ ಬಚ್ಚಲ ಮನೆಯಿತ್ತು.

"ಆಗ್ಲೆ ಜೊತೆ ಆಗೋಗಿದ್ದಾನೆ ಗೋಪಾಲ...." ಲಕ್ಷ್ಮೀದೇವಮ್ಮ ಇಬ್ಬರನ್ನು ಒಟ್ಟಿಗೆ ನೋಡಿ ನಕ್ಕು ನುಡಿದಳು. ಓಡಿಬಂದು ಶಕುಂತಲೆಯನ್ನು ಅಪ್ಪಿಕೊಂಡು ಮುತ್ತುಕೊಟ್ಟಳು.

" ಬಿಡಿ ಚಿಕ್ಕಮ್ಮ ನಾನು ಹೋಗ್ತೇನಿ...." ಕೈಯ ಹಿಡಿತದಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸಿದಳು ಶಕುಂತಲ.

" ನಿಮ್ಮತ್ತೆ ಕಣೆ ಅವರು...." ಸಾವಿತ್ರಮ್ಮ ನುಡಿದಾಗ ಎಲ್ಲರೂ ನಕ್ಕರು. ಶಕುಂತಲ ಕಕ್ಕಾಬಿಕ್ಕಿಯಾಗಿ "ಅಲ್ಲ....ಅತ್ತೆ ಅಲ್ಲ....ಚಿಕ್ಕಮ್ಮ...." ಕೈಯ ಹಿಡಿತವನ್ನು ಬಿಡಿಸಿಕೊಂಡು ಹೊರಗೆ ಬಂದಳು.

ಪುನಃ ಎಲ್ಲರೂ ಘೊಳ್ಳೆಂದು ನಕ್ಕರು.

ಬಾಗಿಲಿನ ಎದುರಿಗೆ ಸರಿಯಾಗಿ ಒಂದು ಕುರ್ಚಿಯನ್ನು ಹಾಕಿದ್ದಾರೆ. ಅದರ ಎರಡು ಕಾಲುಗಳಿಗೂ ಎರಡು ಸಣ್ಣ ಬಾಳೆ ಕಂದುಗಳನ್ನು ಕಟ್ಟಿದ್ದಾರೆ. ಕುರ್ಚಿಯ ಮಧ್ಯದಲ್ಲಿ ಸ್ವಲ್ಪ ಅಕ್ಕಿ ಹರಡಿ ಅದರಮೇಲೆ ಒಂದು ಗಂಧ ಸವರಿದ ಪಂಚಪಾತ್ರೆಯನ್ನು ಇಟ್ಟಿದ್ದಾರೆ. ಅದರಮೇಲೆ ಅರಿಶಿನ ಸವರಿದ ಒಂದು ದೊಡ್ಡ ತೆಂಗಿನ ಕಾಯನ್ನು ಇಟ್ಟು ಸತ್ಯನಾರಾಯಣನನ್ನ ಪ್ರತಿಷ್ಠಿಸಲು ಸಿದ್ಧಪಡಿಸಿದ್ದಾರೆ. ಹಿಂದುಗಡೆ ಸತ್ಯನಾರಾಯಣನ ಪಟ ಹೂವಿನಿಂದ ಅಲಂಕೃತವಾಗಿದೆ. ಕುರ್ಚಿಯ ಮುಂದುಗಡೆ ಒಂದರೊಳಗೊಂದರಂತೆ ಸೇರಿಸಿ ಹೊಸತರದಲ್ಲಿ ನಿರ್ಮಿತವಾದ ಒಂದು ಮಾವಿನ ತೋರ

ಣವನ್ನು ಶೃಂಗರಿಸಿದ್ದಾರೆ. ಒಂದು ನೀಳವಾದ ಮಲ್ಲಿಗೆದಂಡೆ ನೆಲದ ಮೇಲೂ ಹರಡಿ ಇನ್ನಷ್ಟು ಸೊಬಗನ್ನು ಬೀರುತ್ತಿದೆ. ಕುರ್ಚಿಯ ಮುಂದುಗಡೆ ಚಿತ್ರವಿಚಿತ್ರವಾದ ರಂಗವಲ್ಲಿಯನ್ನು ಹಚ್ಚಿದ್ದಾರೆ. ಅತ್ತ ಇತ್ತ ಎರಡು ಪಕ್ಕಗಳಲ್ಲೂ ಹಸೆಯಮೇಲೆ ಎರಡು ಮಣೆಗಳನ್ನು ಹಾಕಿದ್ದಾರೆ. ಸ್ವಲ್ಪ ದೂರದಲ್ಲಿ ಗೋಡೆಯ ಬಳಿಯಲ್ಲಿ ಇನ್ನೊಂದು ಮಣೆಯನ್ನು ಹಾಕಿ ಪಕ್ಕದಲ್ಲಿ ಅರ್ಧ ಅಡಿ ಎತ್ತರದ ಒಂದು ಕಂಚಿನ ಗಂಟೆಯನ್ನು ಇಟ್ಟಿದ್ದಾರೆ. ಗಂಟೆಯ ಹಿಡಿಯ ಒಂದು ಮುಖದಲ್ಲಿ ಆಂಜನೇಯ ನಗುತ್ತ ಕೈ ಮುಗಿದು ನಿಂತಿದ್ದಾನೆ. ಸಮುದ್ರ ಹಾರಿ, ಲಂಕೆಯನ್ನು ದಹಿಸಿ ಅಪ್ರತಿಮ ವೀರನೆಂದು ಹಾಡಿ ಹೊಗಳಿಸಿಕೊಂಡ, ಭಕ್ತಶಿರೋಮಣಿ ಹನುಮಂತ ಇಂದು ಅಸಹಾಯಕನಾಗಿ, ತನ್ನನ್ನು ಹಿಡಿದು ತನ್ನ ಸೇವೆಯನ್ನು ದೇವರಿಗೆ ಅರ್ಪಿಸಬೇಕೆಂದು ಬೇಡುವ ದೈನ್ಯತೆಯಿದೆ ಮುಖದಲ್ಲಿ. ಇನ್ನೊಂದು ಕಡೆ ಗರುಡ ನಿರ್ವಿಕಾರನಾಗಿ ಕೈಮುಗಿದು ನಿಂತಿದ್ದಾನೆ.

ಈ ಗಂಟೆ ಇತಿಹಾಸ ಪ್ರಸಿದ್ಧವಾದುದೆಂದು ರಾಮಯರ ದೃಢ ನಂಬಿಕೆ ಅವರ ಉಚ್ಛ್ರಾಯಸ್ಥಿತಿಗೆ ಅಭಯ ಹಸ್ತ ನೀಡಿ ವರವಾಗಿ ಬಂದದ್ದೆಂದು ಅವರು ಧೈರ್ಯವಾಗಿ ಹಲವರಲ್ಲೂ ಹೇಳಿದ್ದುಂಟು. ಹೊಸ ಮನೆಯನ್ನು ಕಟ್ಟಿಸಲು ಪಾಯವನ್ನು ತೋಡಿಸುತ್ತಿದ್ದಾಗ ಈಗಿರುವ ಬೀದಿಯ ಬಾಗಿಲಿನ ಕೆಳಗೇ ಈ ಗಂಟೆ ಮತ್ತು ಒಂದು ಪಂಚಲೋಹದ ಕೃಷ್ಣನ ವಿಗ್ರಹ ಒಂದು ದೊಡ್ಡ ಸಂಪುಟದಲ್ಲಿ ಸಿಕ್ಕಿದ್ದವು. ರಾಮರಾಯರಿಗೆ ಅದು ಹಣದ ಕುಡಿಕೆ ಎಂದು ಬಳಿಸಾರಿ ಇದನ್ನು ಕಂಡು ಹಣ ಸಿಕ್ಕದ್ದರಿಂದ ಸ್ವಲ್ಪ ನಿರಾಶೆ ಕ್ಷಣಿಕವಾಗಿ ಆಗಿದ್ದರೂ ದೇವರ ವಿಗ್ರಹವನ್ನು ಕಂಡು ನಿಜವಾಗಿಯೂ ಆನಂದವಾಗಿತ್ತು.

ತಮ್ಮ ವಂಶದ ಉದ್ಧಾರಕ್ಕಾಗಿ ಮೂರ್ತವೆತ್ತು ಬಂದಿದ್ದಾನೆಂದು ಅವರ ತಾಯಿ ಘೋಷಿಸಿ ಹೇಳಿದರು. ಇದು ಸತ್ಯವೆಂದು ಸಾರಲೆಂಬಂತೆ ನಾಲ್ಕೇ ತಿಂಗಳಲ್ಲಿ ಗೋಪಾಲ ಹುಟ್ಟಿದ. ಗಂಡು ಮಕ್ಕಳಿಲ್ಲದೆ ಬರಿದಾಗಿದ್ದ ಬಾಳ್ವೆಗೆ ಬೆಳಕಾಗಿ ಹುಟ್ಟಿ ಬಂದಿದ್ದ ಗೋಪಾಲ.

" ದೇವರು ಹುಟ್ಟವ್ನೆ ಸಾಮಿ ನಿಮ್ಮ ಸೇಲಿ " ಊರಿನ ಜನವೆಲ್ಲ ಸಾರಿ ಹೇಳಿದರು.

ಗೋಪಾಲನ ಹುಟ್ಟಿನೊಡನೆಯೇ ಗೌರವ, ಐಶ್ವರ್ಯ ಎರಡೂ ಕೂಡಿ ಬಂದವು.

ಅಂದಿನಿಂದ ಅವರು ಹಿಡಿದ ಯಾವ ಕೆಲಸವೂ ಹುಸಿಯಾಗಲೊಲ್ಲದು.

ಅಂದಿನಿಂದ ಕೃಷ್ಣನ ವಿಗ್ರಹಕ್ಕೆ ಮತ್ತೆ ಗಂಟೆಗೆ ಎಲ್ಲಿಲ್ಲದ ಮನ್ನಣೆ. ಮಂಗಳಾರತಿಯಾಗುವಾಗ ಹಿಮ್ಮೇಳವಾಗಿ ವೇದಘೋಷ ನುಡಿಯಬೇಕಾಗಿದ್ದ ಗಂಟೆಗೂ ಅಂದಿನಿಂದ ಕ್ಷೀರಾಭಿಶೇಕ ಪ್ರಾರಂಭವಾಯಿತು. ತ್ಯಾಗದ ಮರದ ಕೆತ್ತನೆಯ ಸುಂದರ ಮಂಟಪ ಮಾರನೇ ದಿನವೇ ರಾಯರ ಮನೆಗೆ ಬಂತು. ಒಂದು ಬೆಳ್ಳಿಯ ಸಂಪುಟ ಕೃಷ್ಣನ ವಿಗ್ರಹಕ್ಕೆ ಅಂದೇ ಮಾಡಿ ಹಾಕಿದರು. ಏನು ಕೆಲಸವಿದ್ದರೂ ರಾಮರಾಯರು ದೇವರ ಪೂಜೆಯನ್ನು ಮಾಡದೆ ನೀರನ್ನೂ ಸೇವಿಸುವುದಿಲ್ಲ. ಕಾಫಿಯ ಚಟ ಅವರಿಗೆ ಹತ್ತಿದ್ದರೂ ಮೂರ್ತವೆತ್ತ ದೇವರೇ ಹುಟ್ಟಿದ್ದಾನೆಂಬ ನಂಬಿಕೆ ಬಲವಾಗಿ ಮೂಡಿದ್ದರಿಂದ ಆ ಚಟ ಸ್ವಲ್ಪ ದಿನಗಳಲ್ಲಿಯೇ ಸೋಲನ್ನು ಒಪ್ಪಿಕೊಂಡಿತು. ವಿಶೇಷ ದಿನಗಳಲ್ಲಿ ಮಾತ್ರ ಆ ಗಂಟೆ ವೇದಘೋಷ ಮಾಡುತ್ತದೆ.

ಇಂದು ವಿಶೇಷ ದಿನವಾದ್ದರಿಂದ ಹೊರಗೆ ಬಂದಿದೆ.

ಲಕ್ಷ್ಮೀದೇವಮ್ಮ ಬಲವಂತಪಡಿಸಿದರೂ ಸೀತಮ್ಮ, ರಾಮರಾಯರು ಉಪ್ಪಿಟ್ಟನು ತಿನ್ನಲು ಒಪ್ಪಲಿಲ್ಲ. ವ್ರತ ಹಿಡಿದು ಪೂಜೆ ಮಾಡದೆ ಇದ್ದರೂ ಉಪವಾಸವಿದ್ದು ಪೂಜೆಯನ್ನು ನೋಡಿ ಪ್ರಸಾದ ಸ್ವೀಕರಿಸಿ ಒಂದಷ್ಟು ಪುಣ್ಯವನ್ನು ಪಡೆಯುವುದಾಗಿ ಹೇಳಿಬಿಟ್ಟರು. ಸಾವಿತ್ರಮ್ಮನಿಗೆ ಬಲವಂತ ಪಡಿಸುವಂತೆಯೇ ಇರಲಿಲ್ಲ. "ಪೂಜೆಮಾಡೊ ಭಾಗ್ಯವಂತೂ ಇಲ್ಲ.... ಹಾಳು ಕಣ್ಣಿಂದ ನೋಡಿ ಸ್ವಲ್ಪವಾದ್ರೂ ಪಾಪನ ಕಳಕೊಳ್ಳೋಣಾ...." ಹೇಳಿ ಮಡಿ ಉಟ್ಟು ಕುಳಿತುಬಿಟ್ಟರು ಸಾವಿತ್ರಮ್ಮ. ಒಟ್ಟಿನಲ್ಲಿ ಮಾಡಿದ್ದ ಉಪ್ಪಿಟ್ಟನ್ನು ತಿಂದವರೆಂದರೆ ಶಕುಂತಲ ಮತ್ತು ಗೋಪಾಲ ಇಬ್ಬರೇ.

ಗೋಪಾಲನಿಗೆ ಹಬ್ಬದ ಸಂತೋಷಕ್ಕಿಂತಲೂ ಶಕುಂತಲ ಬಂದಳೆಂದು ಎಲ್ಲಿಲ್ಲದ ಉತ್ಸಾಹ ಬಂದಿತ್ತು. ಅವಳ ಜೊತೆಯಲ್ಲಿ ಎಷ್ಟು ಮಾತನಾಡಿದರೂ ಸಾಲದು. ತನ್ನ ಪುಸ್ತಕಗಳನ್ನು ಅವಳ ಮುಂದೆ ಹರಡಿ ಅವಳು ಓದಲಾಗದ ಪುಸ್ತಕಗಳನ್ನು ಓದಿ ತನ್ನ ಹಿರಿಮೆಯನ್ನು ಅವಳಿಗೆ ತಿಳಿಸಲು ಬಹಳ ಪ್ರಯತ್ನಿಸಿದ್ದ. ಗೋಪಾಲ ಕೇಳಿಲ್ಲದ ಕನಸಿನ ರಾಜರಾಣಿ, ಮಾಯಾ ರಾಕ್ಷಸರ ಚಮತ್ಕಾರ ಕಥೆಗಳನ್ನು ಹೇಳಿ ಅಚ್ಚರಿಪಡಿಸಿದ್ದಳು ಶಕುಂತಲ. "ಅಬ್ಬಾ ನಿಂಗೆ ಎಷ್ಟೊಂದು ಕಥೆ ಬರುತ್ತೆ....ನಿಂಗ್ಯಾರು ಹೇಳಿದ್ರು" ಎಂದು ಗೋಪಾಲ ಆಶ್ಚರ್ಯ ಪ್ರಕಟಿಸಿದಾಗ ಗೆಲುವಿನ ಉತ್ಸಾಹದಿಂದ ಅವಳು ನುಡಿದಳು. "ನಂಗೆ ಇನ್ನೂ ಬಾಳ ಬರುತ್ತೆ....ಯಾರೂ

ಹೇಳ್ಳಿಲ್ಲ ನಂಗೆ....ನಾನೇ ಓದ್ದೆ ಪುಸ್ತಕದಲ್ಲಿ." ಪಟ್ಟಣದವಳಾದ ತನಗೆ ಬಹಳ ವಿಷಯ ಗೊತ್ತೆಂಬ ಹೆಮ್ಮೆಯಿತ್ತು ಮಾತಿನಲ್ಲಿ.

"ನಾನು ತೋಟ ಮಾಡಿದ್ದೇನೆ....ಎಂತೆಂಥದೊ ಗಿಡ ಹಾಕಿದ್ದೇನೆ.... ಬೀಜಹಾಕಿದ್ದೇನೆ. ಸೊಸಿ ನೆಟ್ಟಿದ್ದನೆ....ನಾನು ನೀರು ಹಾಕಿ ಬೆಳೆಸಿದ್ದು.... ನಿಮ್ಮೂರಲ್ಲಿ ತೋಟ್ವೇಇಲ್ಲ....ಎಷ್ಟೊಂದು ಹೂವು ಬಿಟ್ಟಿದೆ ಗೊತ್ತಾ ?!.... ನಿಂಗೂ ಕಿತ್ತುಕೊಡ್ತೀನಿ....ಬಾ." ಅವಳ ಉತ್ತರವನ್ನೂ ನಿರೀಕ್ಷಿಸದೆ ರಟ್ಟೆಯನ್ನು ಹಿಡಿದು ಎಳೆದುಕೊಂಡು ತೋಟದತ್ತ ನಡೆದ. ಇದೊಂದು ವಿಷಯದಲ್ಲಿ ಅವಳು ಸೋಲುತ್ತಾಳೆಂಬ ನಂಬಿಕೆಯಿತ್ತು ಅವನಿಗೆ. ನಾಲ್ಕಾರು ಬಾರಿ ವೆಂಕಟರಾಯರ ಮನೆಯನ್ನು ನೋಡಿ ಬಂದಿದ್ದ ಅವನಿಗೆ ಮನೆಯ ಮುಂದೆಯಾಗಲಿ, ಅಥವ ಹಿಂದೆಯಾಗಲಿ ಹೂವಿನ ತೋಟ ಕಂಡು ಬಂದಿರಲಿಲ್ಲ.

ಮನೆಯ ಪಕ್ಕದ ಸಂದನ್ನು ಹಾದು ಪುನಃ ಎಡಗಡೆಗೆ ತಿರುಗಿ ಹಿತ್ತಲಿನಿಂದ ಹಾದು ಹುಲ್ಲು ಬಣವೆಯ ಹಿಂದಿದ್ದ ಮುಳ್ಳುತಟ್ಟಿಯನ್ನು ಬದಿಗೆ ಸರಿಸಿ ಗೋಪಾಲ ಓಡಿ ಸಾಗಿದ್ದ.

"ಥೂ ನಿಮ್ಮ ತೋಟ ಹಾಳಾಯ್ತು...." ಮುಳ್ಳು ಚುಚ್ಚಿಕೊಂಡ ಕಾಲನ್ನು ಮೇಲಕ್ಕೆ ಎತ್ತಿ ಅದನ್ನು ತೆಗೆಯಲು ಹೋಗಲು ಕಾಲು ತೊಡರಿ ಮುಗ್ಗರಿಸಿ ಬಿದ್ದಳು ಶಕುಂತಲೆ. ಗೋಪಾಲ ಉತ್ಸಾಹ, ಹೆಮ್ಮೆಯಲ್ಲಿ ಹುಚ್ಚನಂತಾಗಿ ತಾನೇ ಬೆಳೆಸಿದ ಶಾವಂತಿಗೆ ಗಿಡಗಳ ಬಳಿ ಸಾಗಿ ಇವಳನ್ನೇ ನಿರೀಕ್ಷಿಸುತ್ತ ನಿಂತಿದ್ದ.

ಹಿತ್ತಲಿನಲ್ಲಿ ಅಳಲು ಮೊದಲಿಟ್ಟಳು ಶಕುಂತಲ.

"ಲೇ....ಇಲ್ಲೆ ಇದ್ದೀನಿ ಬಾರೆ....ತೋಟದ ಬಾಗಿಲು ತೆಗೆದಿದ್ದೀನೆ.... ಬಾರೆ." ತನ್ನನ್ನು ಕಾಣದೆ ಅವಳು ಅಳುತ್ತಿರಬಹುದೆಂದು ನುಡಿದ ಗೋಪಾಲ.

"ಹಾಳು ತೋಟ....! ನನ್ಕಾಲು ಹೋಯ್ತು ಮುಳ್ಳು ಚುಚ್ಚಿಕೊಂಡ್ತು...." ಬೊಬ್ಬಿಟ್ಟಳು ಶಕುಂತಲ. "ನಾನು ಮನೆ ಹೋಗ್ತೀನಿ...." ತಾನು ಅಳುತ್ತಿದ್ದರೂ ಗೋಪಾಲ ಬರಲಿಲ್ಲವೆಂದು ಬೇಸರ ಬಂದಿತ್ತು. ತಾನು ಬೆಳೆಸಿದ ಗಿಡಗಳನ್ನು ಅವಳು ಬಂದು ಬೇಗ ನೋಡಲಿಲ್ಲವೆಂದು ಇವನಿಗೆ ಸಿಟ್ಟು ಬಂದಿತ್ತು.

"ಯಾಕೆ ಹೊಡ್ಕೊಳ್ತಿ ಬಾರೆ....ಮುಳ್ಳು ಏನ್ಮಾಡುತ್ತೆ...." ಚೆನ್ನಾಗಿ ಅರಳಿದ್ದ ಒಂದು ಶಾವಂತಿಗೆ ಹೂವನ್ನು ಕಿತ್ತು ಕೈಯಲ್ಲಿ ಹಿಡಿದುಕೊಂಡು

ಹೊರಗೆ ಬಂದ. ಶಕುಂತಲೆ ಕಾಲನ್ನು ತೊಡೆಯ ಮೇಲೆ ಇಟ್ಟುಕೊಂಡು ಮುಳ್ಳನ್ನು ಕೀಳುತ್ತಿದ್ದಳು.

"ಅದ್ಯಾಕೆ ಅಳ್ತೀಯಾ....ಮುಳ್ಳು ಚುಚ್ಚಿಕೊಳ್ತಾ—" ಓಡಿ ಬಂದು ತಾನು ಹಿಡಿದಿದ್ದ ಹೂವನ್ನು ಅಲ್ಲೆ ಹುಲ್ಲಮೇಲೆ ಎಸೆದು ಅವಳ ಕಾಲನ್ನು ತನ್ನ ಕಡೆಗೆ ಎಳೆದುಕೊಂಡು ಮುಳ್ಳನ್ನು ಹುಡುಕಿ ಕಿತ್ತುಹಾಕಿದ. ರಕ್ತ ಚಿಳ್ ಎಂದು ಚಿಮ್ಮಿತು. ಶಕುಂತಲ ಜೋರಾಗಿ ಚೀರಿದಳು. "ಇದೇನು ಮಾಡುತ್ತೆ ನುಮ್ಮಿರು...." ಸ್ವಲ್ಪ ಮಣ್ಣನ್ನು ಕೆರದು ಅದಕ್ಕೆ ಮೆತ್ತಿದ.

"ಅಲ್ಲೊಂದು ಹೂವು ...!" ಗೋಪಾಲ ಎಸೆದಿದ್ದ ಹೂವನ್ನು ಕಂಡು ತನ್ನ ನೋವನ್ನು ಮರೆತು ಅದನ್ನು ತೆಗೆದುಕೊಳ್ಳ ಹೋದಳು. "ಇನ್ನೂ ಬೇಕಾದಿಷ್ಟಿವೆ....ನಮ್ಮ ತೋಟದಲ್ಲಿ...." ಅವಳ ಕೈಯನ್ನು ಹಿಡಿದು ತೋಟ ದೊಳಗೆ ಎಳೆದುಕೊಂಡು ಹೋದ.

ತೋಟದ ಬಾಗಿಲನ್ನು ದಾಟಿ ಒಳಗೆ ಹೋದೊಡನೆಯೇ ದಾರಿಯ ಎಡಬಲ ಪಾರ್ಶ್ವಗಳಲ್ಲಿ ಮಲ್ಲಿಗೆ ಬಳ್ಳಿಗಳ ಸಾಲು. ಮಧ್ಯದಲ್ಲಿ ಅಲ್ಲೊಂದು ಇಲ್ಲೊಂದು ಕೆಂಪು, ಬಿಳಿಯ ಗುಲಾಬಿ ಹೂವಿನ ಗಿಡಗಳು. ಹತ್ತು ಹೆಜ್ಜೆ ಮುಂದೆ ಹೋಗಿ ಕವಲೊಡೆದ ದಾರಿಯಲ್ಲಿ ಎಡಗಡೆಗೆ ತಿರುಗಿದರೆ ಬಿಳಿಯ ಶಾವಂತಿಗೆ ಹೂವಿನ ಸಾಲು. ಅದರ ಎರಡು ಪಕ್ಕದಲ್ಲಿ ಹಚ್ಚ ಹಸುರಿನ ಪಚ್ಚೆ ಮರುಗದ ಸಣ್ಣ ಗಿಡಗಳು. ಇವೆರಡು ಸಾಲನ್ನು ಬೇರ್ಪಡಿಸುವಂತೆ ಒಂದು ಸಣ್ಣ ಮಣ್ಣಿನ ದಿಂಡು. ಅದರ ಮೇಲೆ ಮೂಲಂಗಿ ಗಿಡಗಳು ಸೊಂಪಾಗಿ ಬೆಳೆದು ತಮ್ಮ ಬಿಳಿಯ ದಿಂಡನ್ನು ಎತ್ತಿ ತೋರಿಸುತ್ತ ನಿಂತಿವೆ. ಅದರ ಪಕ್ಕದಲ್ಲಿ ಎತ್ತರವಾಗಿ ಬೆಳೆದು ಹೂ ಬಿಟ್ಟು ನಗುತ್ತ ನಿಂತಿರುವ ಚೆಂಡು ಹೂವಿನ ಸಾಲು. ದಾರಿಯ ಎರಡು ಪಕ್ಕದಲ್ಲೂ ಇದೆ ಕ್ರಮ. ಬಲಗಡೆ ತಿರುಗಿದರೆ ದಾರಿಯ ಎರಡು ಪಕ್ಕದಲ್ಲೂ ಹಳದಿಯ ಶಾವಂತಿಗೆಯ ಸಾಲು. ಅದರ ಪಕ್ಕದಲ್ಲಿ ಸುಗಂಧರಾಜ ಹೂವಿನ ಸಾಲು. ಅದರ ಪಕ್ಕ ದಲ್ಲಿ ಎಡಗಡೆಯಂತೆಯೇ ಮತ್ತೊಂದು ಮಣ್ಣಿನ ದಿಂಡು. ತಿಂಗಳ ಹುರು ಳಿಯ ಗಿಡ ಕಾಯಿಯಿಂದ ಜಗ್ಗಿಯುತ್ತ ನಿಂತಿವೆ. ಮತ್ತೆ ಸುಗಂಧರಾಜ ಪುಷ್ಪದ ಸಾಲು. ಅನಂತರ ನಾಲ್ಕು ಮಡಿ ಸೊಪ್ಪಿನ ಸಾಲು.

ಎಡಬಲ ಪಕ್ಕದಲ್ಲಿ ಇವನ್ನು ಕಂಡು ಆನಂದದ ಗುಂಗಿನಲ್ಲಿ ಕತ್ತೆತ್ತಿ ಮುಂದೆ ನೋಡಿದಾಗ ಬೃಹದಾಕಾರವಾಗಿ ನಿಂತಿರುವ ಒಂದು ಜಾಲಾರ ಪುಷ್ಪದ ಮರ ಎಲೆಗಿಂತ ಮಿಗಿಲಾಗಿ ಹೂವಿನಿಂದ ತುಂಬಿ ಮನೋಹರವಾಗಿ ಶೋಭಿಸುತ್ತಿದೆ. ಇಂಪು ಕೆಂಪು ಎಷ್ಟು ದೂರದಲ್ಲಿದ್ದರೂ ಆಕರ್ಶಿಸಿ ಅತ್ತ

ಸೆಳೆಯುತ್ತದೆ. ಇದಿದ್ದುದು ದಾರಿಯ ಬಲಗಡೆಯಾದರೆ ಎಡಗಡೆ ಕೆಂಡ ಸಂಪಿಗೆಯ ಗಿಡ. ಮುಂದುಗಡೆ ಪಾರಿಜಾತದ ಮರ. ಇವೆಲ್ಲದರ ತೀವ್ರ ವಾಸನೆ ಎಲ್ಲರನ್ನು ಸೆರೆ ಹಿಡಿಯುತ್ತದೆ.

ಸುಂದರ ಪುಷ್ಪಗಳ ಸೊಬಗನ್ನು ನೋಡಿ ತೃಪ್ತಿಪಟ್ಟು ಮೋಹಕ ವಾಸನೆಯಿಂದ ಮತ್ತರಾಗಿ ಮುಂದೆ ಹೋದರೆ ಹಚ್ಚ ಹಸುರಿನ ವೀಳೆಯ ದೆಲೆಯ ತೋಟ ಸಿಗುತ್ತದೆ. ಸುತ್ತಲೂ ಬಾಳೆಯ ಗಿಡಗಳು ದಟ್ಟವಾಗಿ ಬೆಳೆದಿವೆ. ಅಲ್ಲಲ್ಲಿ ಗಗನ ಚುಂಬಿ, ಅಡಕೆಯ, ತೆಂಗಿನ ಮರಗಳು ನಿಂತಿವೆ. ಇನ್ನು ನಾಲ್ಕು ಗಜ ಮುಂದೆ ಹೋದರೆ ನೆಲದ ಮಟ್ಟಕ್ಕೆ ಇರುವ ಒಂದು ದೊಡ್ಡ ಭಾವಿ. ಭಾವಿಯ ಎರಡು ಪಕ್ಕಗಳಲ್ಲಿ ಎರಡು ಕಪಿಲೆಗೆ ಅನುಕೂಲ ವಾಗಿ ಕಲ್ಲನ್ನು ನಿಲ್ಲಿಸಿ ರಾಟೆಯನ್ನು ಹಾಕಿದ್ದಾರೆ.

ಶಕುಂತಲ ವಿಶಾಲವಾದ ತೋಟದ ಮನೋಹರ ದೃಶ್ಯವನ್ನು ನೋಡುತ್ತ ಉನ್ಮತ್ತಳಂತಾಗಿದ್ದಳು. ಎಷ್ಟು ಹೂವನ್ನು ಕಿತ್ತರೂ ಅವಳಿಗೆ ತೃಪ್ತಿಯಿಲ್ಲ. ಹಚ್ಚ ಹಸುರಿನ ಹುಲ್ಲಿನ ಮೇಲೆ ಎಷ್ಟು ವಿಧದಲ್ಲಿ ಕುಳಿತು ಉರಳಿದರೂ ಅವಳಿಗೆ ಸಮಾಧಾನವಿಲ್ಲ. ಎಂದೂ ಕಾಣದ ಈ ಹೊಸ ನಿಸರ್ಗ ನೋಟ ಅವಳಿಗೆ ಹುಚ್ಚು ಹಿಡಿಸಹತ್ತಿತ್ತು. ಗೋಪಾಲ ಪ್ರತಿ ಯೊಂದು ಗಿಡದ ಬಳಿಗೂ ತಾನೇ ಹೋಗಿ ಒಂದೊಂದು ಹೂವನ್ನೂ ಕಿತ್ತು ಅವಳ ಮಡಲಿಗೆ ತುಂಬಿದ. ಇದನ್ನೆಲ್ಲಾ ಬೆಳೆಸಿದವನು ನಾನೇ ಎಂದು ಹೇಳುವುದನ್ನು ಮರೆಯಲಿಲ್ಲ. "ನಿಮ್ಮೂರಲ್ಲಿ ಇದ್ಯಾ ಇಂಥೋದು...?" ಅವಳು ಸೋಲುವಳೆಂದು ಪೂರ್ಣ ನಂಬಿಕೆಯಿತ್ತು ಗೋಪಾಲನಲ್ಲಿ.

"ನಮ್ಮೂರಲ್ಲಿ ...ನಮ್ಮನೇಲಿ ತೋಟಯಿಲ್ಲ ...ಆದ್ರೆ ನಮ್ಮಣ್ಣ ಸಾಯಂ ಕಾಲ ತರ್ತಾರೆ....ಇಲ್ದಿದ್ರೆ ಹೂವಿನ ಚಿಕ್ಕಮ್ಮ ತಂದು ಕೊಡ್ತಾಳೆ....ಇದ್ಯಾಕೆ ಇಲ್ಲಿ ಇಷ್ಟೊಂದು ಹೂವಿದೆ....ಯಾರೂ ಮುಡ್ಯಲ್ವೆ....?" ಇಲ್ಲವೆಂದರೆ ಎಲ್ಲ ವನ್ನೂ ಕಿತ್ತು ತನ್ನ ತಲೆ ಹೊರಲಾರದಷ್ಟನ್ನು ಹೊರಬೇಕೆಂಬ ಹುಚ್ಚು ಬಯಕೆ.

"ನಮ್ಮಮ್ಮ ಅಕ್ಕಾ ಮುಡೀತಾರೆ....ಪಟಕ್ಕೂ ಹಾಕ್ತೇವಿ ಸಾಯಂ ಕಾಲ..." ಗೋಪಾಲ ಇನ್ನೂ ಏನೊ ಹೇಳಬೇಕೆಂದಿದ್ದ ಅಷ್ಟರಲ್ಲಿ ಕಾಲುವೆ ಯಲ್ಲಿ ನೀರು ತುಂಬಿ ಬಂತು. ರಾಮರಾಯರ ಆಳು ಗಿಡಗಳಿಗೆ ನೀರನ್ನು ಕಟ್ಟಲು ಕಪಿಲೆಯನ್ನು ಹೊಡೆಯುತ್ತಿದ್ದ. ಈರ ತೋಟದ ಮಾಲಿ ಕೈಯಲ್ಲಿ ಗುದ್ದಲಿ ಹಿಡಿದು ಗಿಡಗಳಿಗೆ ನೀರು ಬಿಡಲು ಬಂದ.

"ನಾನೇ ನೀರು ಕಟ್ತೇನಿ....ನೀನು ಹೋಗು...." ಶಕುಂತಲೆಯು

ಮುಂದೆ, ಹಿಂದೆ ತಾನು ಹೇಳಿದುದನ್ನು ಪ್ರತ್ಯಕ್ಷ ಪ್ರಮಾಣಿಸಿ ತೋರಿಸಲು ಇದೇ ತಕ್ಕ ಸಂದರ್ಭವಾಗಿತ್ತು.

“ ನಿಮ್ಗ್ಯಾಕೆ ಮಣ್ಣಾಗುತ್ತೆ ಸ್ವಾಮಿ....” ನುಡಿದು ಈರ ಶಾವಂತಿಗೆ ಗಿಡಗಳ ಸಾಲಿಗೆ ನೀರನ್ನು ತಿರುವಿದ. “ ಹೋಗೋ....ನೀನು....ನಾನು ಕಟ್ತೀನಿ.” ಹೋಗುತ್ತಿದ್ದ ನೀರನ್ನು ಪುನಃ ತಾನೇ ಕಟ್ಟಿ ಅವನ ಕೈಯಿಂದ ಗುದ್ದಲಿಯನ್ನು ಕಿತ್ತುಕೊಂಡು ಪುನಃ ತಾನೇ ನೀರನ್ನು ಬಿಟ್ಟ.

ಶಕುಂತಲೆಗೆ ಪ್ರತಿಯೊಂದು ಕಾರ್ಯ, ಸನ್ನಿವೇಶ ಎಲ್ಲವೂ ಹೊಸದು. ಅಷ್ಟೇ ಮೋಹಕವೂ ಹೌದು.

ಹರಿದು ಬರುತ್ತಿದ್ದ ನೀರಿನಲ್ಲಿ ಕಾಲನ್ನು ಇಳೀಬಿಟ್ಟು ಕಿತ್ತು ತಂದಿದ್ದ ಹೂವನ್ನು ಅದರಲ್ಲಿ ಇಳೀಬಿಟ್ಟು ಅವು ಸುತ್ತು ಹೊಡೆದು ನಿಧಾನವಾಗಿ ಮುಂದೆ ಸಾಗುವುದನ್ನು ನೋಡುತ್ತ ಒಂದು ಕ್ಷಣ ನಿಂತುಕೊಂಡಳು. ಕಪಿಲೆಯ ನೀರು ನುಗ್ಗಿ ಬಂದಾಗ ತಾನು ಹಾಕಿದ ಹೂವು ತೇಲಿ ಮುಂದೆ ಸಾಗುತ್ತಿದ್ದವು. ಇನ್ನೊಂದು ಕ್ಷಣದಲ್ಲಿ ಕಾಲುವೆ ಬರಿದಾಗಿ ಹೂ ನೆಲದ ಮೇಲೆ ಕುಸಿದು ಬೀಳುವುದು. ಕಾಲುವೆಯಲ್ಲಿ ನೀರು ಬಂದಾಗ ಪುನಃ ಇದೇ ಕ್ರಮ.

ಗೋಪಾಲನಿಗೆ ಸ್ಫೂರ್ತಿ ಬಂದಂತಿತ್ತು. ನೀರು ಸಾಕಷ್ಟು ಒಂದು ಗಿಡಕ್ಕೆ ಹಾಯಲಿ ಬಿಡಲಿ ಎಲ್ಲಾ ಗಿಡಗಳಿಗೂ ನೀರು ಕಟ್ಟಿ ಶಕುಂತಲೆಗೆ ತೋರಿಸಬೇಕೆಂದು ತೀರ್ಮಾನಿಸಿದ್ದುದರಿಂದ ಒಂದು ಕ್ಷಣದಲ್ಲಿ ಅಡ್ಡಕಟ್ಟೆಯನ್ನು ಒಡೆದು ಪಕ್ಕಕ್ಕೆ ಹಾಕಿ ನೀರನ್ನು ಕೆಳಗೆ ಬಿಟ್ಟು ಇನ್ನೊಂದಕ್ಕೆ ತಿರುಗಿಸುತ್ತಿದ್ದ. ಶಕುಂತಲೆ ಸ್ವಲ್ಪ ಹೊತ್ತು ಅವನ ಕಾರ್ಯವನ್ನೆಲ್ಲಾ ಸೂಕ್ಷ್ಮವಾಗಿ ವೀಕ್ಷಿಸಿದಳು.

“ ನಾನೂ ನೀರು ಕಟ್ತೀನಿ ...” ಮಡಲಲ್ಲಿ ತುಂಬಿದ್ದ ಹೂವನ್ನು ಮರೆತು ಎರಡು ಕೈಗಳನ್ನೂ ನೀರಿನಲ್ಲಿ ಬಿಟ್ಟು ಮಣ್ಣನು ಬಗೆದು ಅಡ್ಡ ಕಟ್ಟ ಹೋದಳು. ಎಲ್ಲಾ ಹೂವುಗಳೂ ನೀರಿನಲ್ಲಿ ಬಿದ್ದು ಹೋದವು. ಎದುರಿನಿಂದ ಕಪಿಲೆಯ ನೀರು ನುಗ್ಗಿ ಬಂತು.

“ ಹೋಯ್ತು....ಹೋಯ್ತು....ಹೂವೆಲ್ಲಾ ಹೋಯ್ತು....” ಕೂಗಿ ಬರುತ್ತಿದ್ದ ನೀರನ್ನು ಅಡ್ಡ ಕಟ್ಟಿ ಹೂವನ್ನು ತಡೆಯಲು ಹೋದಳು. ಜರತಾರಿ ಲಂಗ ಕೆಳೆಗೆ ಇಳೀ ಬಿದ್ದು ಮೊಳಕಾಲವರೆಗೂ ನೆನದು ಹೋಯಿತು. “ ಥೂ ! ಹಾಳು ತೋಟ....” ಕೈಗೆ ಸಿಕ್ಕಿದ ಹೂವನ್ನೆಲ್ಲಾ ಹಿಸಕಿ ಎಸೆದು ಬಿಟ್ಟಳು. ಸಿಟ್ಟಿನೊಡನೆ ಹೂವನ್ನು ಕಳೆದುಕೊಂಡ ದುಃಖ ಸೇರಿತ್ತು.

ಕಾಲುವೆಯಿಂದ ಮೇಲೆ ನೆಗೆದು ಹಸಿರ ಹುಲ್ಲು ಮೇಲೆ ಕುಳಿತು ಅಳತೊಡಗಿದಳು. ಶಕುಂತಲ ನೀರಿಗಿಳಿದುದರಿಂದ ಗೋಪಾಲ ಹೊಸ ಹುಮ್ಮಸ್ಸಿನಿಂದ ನೀರನ್ನು ಕಟ್ಟುತ್ತಿದ್ದ. ಇವಳು ಅಳ ಹತ್ತಿದನ್ನು ಕಂಡು ಗುದ್ದಲಿ ಕೈಯಲ್ಲಿ ಹಿಡಿದೇ ಓಡಿಬಂದ. ಅವನ ಕೈ, ಮೈಗೆಲ್ಲಾ ಮಣ್ಣು ಸಿಡಿದಿತ್ತು. ಹೊಸದಾಗಿ ಹಾಕಿಕೊಂಡಿದ ನಿಕ್ಕರು, ಬನೀನೂ ಕೂಡಾ ತೋಯ್ದು ಹೋಗಿತ್ತು. ಅದರ ಮೇಲೆ ಅವನ ಪರಿವೇ ಇರಲಿಲ್ಲ.

"ಇದ್ಯಾಕೆ ಅಳ್ತಿ....ಹೆಣ್ಣು ಮುಕ್ಕ." ಅವಳನ್ನು ಹೀಯಾಳಿಸಿದ.

ಈರ ಗಾಬರಿಯಿಂದ ಕಂಪಿಸುತ್ತ ದೂರದಲ್ಲಿ ನಿಂತಿದ್ದ.

ಶಕುಂತಲೆ ತನ್ನ ಒದ್ದೆ ಲಂಗವನ್ನು ಕೈಯಲ್ಲಿ ಹಿಡಿದು ಅಳುತ್ತಿದ್ದಳು.

"ಹೋದ್ರೆ ಹೋಯ್ತು ಬಾರೆ....ಬೇರೆ ಹಾಕ್ಕೊಂಡ್ರೆ ಆಯ್ತು. ನಿನ ಲಂಗ ಒದ್ದೆ ಆದ್ರೆ ನನ್ನ ಬನೀನೂ ನಿಕ್ಕರೂ ಮಣ್ಣಾಯ್ತು. ನಾನೂ ಅಳ್ತೀನಾ ನಿನ್ಹಾಗೆ?...ಬಾ ನಮ್ಮೊಲ ತೋರಿಸ್ತೇನಿ..." ಕೈ ಹಿಡಿದು ಎಳೆದ. ತನ್ನದೆನ್ನುವ ಸಮಸ್ತವನ್ನು ಅಂದೇ ಆಕ್ಷಣದಲ್ಲಿ ತೋರಿಸಬೇಕೆಂಬ ಹುಚ್ಚು ಹಂಬಲ.

"ಹೋಗೊ ನಾನು ಬರೋಲ್ಲ....ನನ್ಲಂಗ ಮಣ್ಣಾಗುತ್ತೆ" ಹರಿಯುತ್ತಿದ್ದ ಕಣ್ಣೀರನ್ನು ಒರೆಸಿಕೊಳ್ಳಹೋದಾಗ ಹಾಲುಗೆನ್ನೆಗೆ ಮಣ್ಣು ಹತ್ತಿಕೊಂಡಿತು. ಓರಣವಾಗಿ ಹೆರಳನ್ನು ಹಾಕಿ ಮುಖವನ್ನು ಸೋಪು ಹಾಕಿ ತೊಳೆದು ಅದರ ಮೇಲೆ ಸ್ನೋ ಪೌಡರನ್ನು ಹಚ್ಚಿ ಕಡ್ಡಿಯಲ್ಲಿ ಸಣ್ಣಗೆ ಕುಂಕುಮ ಇಟ್ಟು ಸಿಂಗರಿಸಿ ಕಳುಹಿಸಿದ್ದಳು ಸೀತಮ್ಮ.

ಸುಂದರ ಬಿಳಿಯ ಮುಖದ ಮೇಲೆ ಕೆಂಪು ಮಣ್ಣು! ಗೋಪಾಲ ಗಹಗಹಿಸಿದ.

"ಥೂ ನೀನೊಬ್ಬ!" ಪುಟ್ಟ ಮುಖದಲ್ಲಿ ಕಣ್ಣು ಕೋಪ ಕಾರಿದವು. ಕೈ ಮಣ್ಣು ಎಂಬುದನ್ನು ಅರಿಯದೆ ಲಂಗದಿಂದ ಮುಖವನ್ನು ವರಿಸಿಕೊಂಡಳು. ನೆನದಿದ್ದ ಲಂಗ ಮಣ್ಣಾಯಿತು. ಗೋಪಾಲ ಅವಳ ಅವಸ್ಥೆಯನ್ನು ಕಂಡು ಇನ್ನು ಜೋರಾಗಿ ನಕ್ಕ. ಶಕುಂತಲೆಯ ಕೋಪ ಕಟ್ಟೆ ಒಡೆದು ಹರಿಯಿತು. ಓಡಿ ಬಂದು ತನ್ನ ಕೈಯನ್ನು ಎತ್ತಿ ಅವನನ್ನು ಹೊಡೆದಳು. ಒಂದೊಂದು ಏಟೂ ಅವನ ಬಟ್ಟೆಯ ಮೇಲೆ ಮುದ್ರೆ ಮೂಡಿಸಿತು. ಆದರೆ ಇನ್ನೂ ಜೋರಾಗಿ ನಕ್ಕ ಗೋಪಾಲ.

ಶಕುಂತಲೆ ಮುನಿದು ಬಿರಬಿರನೆ ಮುಂದೆ ಹೋದಳು. ಗೋಪಾಲ ನಗುತ್ತಲೇ ಹಿಂದೆ ಸರಿದ, ಈರನಿಗೂ ನಗು ತಡೆಯಲಾಗಲಿಲ್ಲ. ಅವನೂ ನಕ್ಕುಬಿಟ್ಟ.

ಮುನಿದ ಶಕುಂತಲ ಒಂದೇ ಕ್ಷಣದಲ್ಲಿ ತೋಟವನ್ನು ದಾಟಿ ಹಿತ್ತಿಲಿನಿಂದ ಹೊರಗೆ ಬಂದು ಸುಮ್ಮನೆ ನಿಂತಳು. ಮುಂದಿನ ದಾರಿ ಎರಡಾಗಿ ಹೊಡೆದಿದೆ. ಯಾವ ದಾರಿ ಹಿಡಿದು ಹೋದರೆ ಮನೆ ಸಿಕ್ಕುತ್ತದೆ ಎಂಬುದು ಅವಳಿಗೆ ತಿಳಿಯದು. ಒಂದು ಸಣ್ಣ ಸಂದನ್ನು ಹಾದು ಅವರು ಇಲ್ಲಿಗೆ ಬಂದಿದ್ದರು ಅಷ್ಟು ಮಾತ್ರ ಅವಳಿಗೆ ಜ್ಞಾಪಕವಿದೆ. ಕವಲೊಡೆದ ಜಾಗದಲ್ಲಿ ನಿಂತು ಅತ್ತ ಇತ್ತ ಎರಡು ಕಡೆಯೂ ನೋಡಿದಳು. ಹಿಂದೆ ಬಂದ ಗೋಪಾಲ ಗಹಗಹಿಸಿದ. ಶಕುಂತಲ ಮುಖವನ್ನು ಸೊಟ್ಟಗೆ ಮಾಡಿ ತುಟಿಯ ಮೇಲೆ ತುಟಿಯನ್ನು ತಂದು ಸಿಟ್ಟಿನಿಂದ ಅವನತ್ತ ನೋಡಿ ಅಣಕಿಸಿ ಬಲದ ದಾರಿ ಹಿಡಿದು ಮುಂದೆ ಹೋದಳು.

ಗೋಪಾಲ ಕವಲೊಡೆದ ಜಾಗದಲ್ಲಿ ನಿಂತು ನಗುತ್ತಲೇ ಇದ್ದ.

ಹತ್ತು ಹೆಜ್ಜೆ ಮುಂದೆ ಹೋದ ಶಕುಂತಲಳಿಗೆ ಏಕೋ ಅನುಮಾನವಾಯಿತು. ಅವಳು ಬಂದಾಗಿನ ನೆನಪು ಬಂದು ಇದು ಸರಿಯಾದ ದಾರಿಯಲ್ಲವೆಂದು ನಾರಿ ಹೇಳಿತು. ಆದರೆ ಗೋಪಾಲ ಹಿಂದೆ ಕ್ರೂರವಾಗಿ ನಗುತ್ತ ನಿಂತಿದ್ದ. ತಾನು ಹೋದ ದಾರಿ ತಪ್ಪೆಂದು ಅವನ ಮುಂದೆ ಸೋಲನ್ನು ಒಪ್ಪಲು ಅವಳು ಸಿದ್ಧಳಿರಲಿಲ್ಲ. ಮುಂದೆ ಇದೇ ದಾರಿಯಲ್ಲಿ ಹೋದರೆ ಎಲ್ಲಿಗೆ ಹೋಗುತ್ತದೆ ಎಂಬುದರ ತಿಳಿವೂ ಇಲ್ಲ. ಒಮ್ಮೆ ಹಿಂದೆ ತಿರುಗಿ ದುರದುರನೆ ಗೋಪಾಲನನ್ನು ದಿಟ್ಟಿಸಿ ಸುಮ್ಮನೆ ಮುಂದೆ ಸಾಗಿದಳು.

ಗೋಪಾಲ ನೋಡುತ್ತಲೇ ನಿಂತಿದ್ದ.

"ಅದಲ್ವೆ... ದಾರಿ" ಕೈಬೀಸಿ ಕೂಗಿ ಹೇಳಿದ. ಶಕುಂತಲೆ ಹಿಂದೆ ತಿರುಗಿ ನೋಡಲಿಲ್ಲ. "ಅಣ್ಣಾ ಬಂದ್ರು" ಶಕುಂತಲೆ ನಿಜವಾಗಿಯೂ ಹಿಂತಿರುಗುತ್ತಾಳೆಂದು ತೀರ್ಮಾನಿಸಿ ನುಡಿದಿದ್ದ. ಜೋರಾಗಿ ಹೋಗುತ್ತಿದ್ದ ಶಕುಂತಳ ನಡಿಗೆ ಸ್ವಲ್ಪ ನಿಧಾನವಾಯ್ತು. ಪೂರ್ಣವಾಗಿ ನಿಂತು ನೋಡಲು ಅವಳ ಸ್ವಾಭಿಮಾನ ಕೆರಳಿತ್ತು. ತಂದೆ ಎನ್ನುವ ಅಭಿಮಾನ ಅವಳನ್ನು ಓರೆಗಣ್ಣಿನಲ್ಲಿ ನೋಡಲು ಬಲವಂತಪಡಿಸಿತು.

ತಂದೆ ಕಾಣಲಿಲ್ಲ. ಪುನಃ ಕಂಡವನು ಗೆಲುವಿನ ಉನ್ಮಾದದಲ್ಲಿ ಗಹಗಹಿಸುತ್ತಿದ್ದ ಗೋಪಾಲನೆ.

ಹಿಂದೆ ಮುಂದೆ ನೋಡದೆ ಸುಮ್ಮನೆ ಮುಂದೆ ಓಡಿ ಬಟ್ಟ ಬಯಲಿಗೆ ಬಂದು ನಿಂತಳು. ಕಣ್ಣು ಕಾಣುವಷ್ಟು ಎತ್ತ ನೋಡಿದರೂ ಹಚ್ಚ ಹಸರು. ಓಣಿಯಿಂದ ಬಂದದಾರಿ ಒಂದು ನಿರ್ದಿಷ್ಟ ದಿಕ್ಕಿಗೆ ಹರಿದಿರಲಿಲ್ಲ. ಕಾಲ ಕೆಳಗಿನ ಹಸಿರು ಹುಲ್ಲು ದಾರಿಯನ್ನು ಮರೆಸಿತ್ತು. ಈಗ ಪುನಃ ಅವಳಿಗೆ

ಎತ್ತ ಹೋಗಬೇಕೆಂಬುದು ತಿಳಿಯದು. ಕಣ್ಣನ್ನು ಅರಳಿಸಿ ಸಿಟ್ಟಿನಿಂದ ಏದುತ್ತ ಸುತ್ತಲೂ ನೋಡಿದಳು. ಹಾಗೇ ತಾನು ಬಂದ ಕಡೆಗೂ ದೃಷ್ಟಿಯನ್ನು ಬೀರಿದಳು. ಉತ್ಸಾಹದಿಂದ ನಿದಾನವಾಗಿ ದಾರಿಯಲ್ಲಿ ಇತ್ತಲೇ ಬರುತ್ತಿದ್ದ ಗೋಪಾಲ. ಅವನು ವಿನಾಕಾರಣ ನಗುತ್ತಿದ್ದುದು ಇವಳ ಎದೆಯಲ್ಲಿ ಇರಿಯುತ್ತಿತ್ತು.

"ಹೋಗು....ಹೋಗು ...ಇನ್ನೂ ಮುಂದೆ ಹೋಗು...." ಗೋಪಾಲನ ಧ್ವನಿಯಲ್ಲಿ ಗೆಲುವಿನ ಕೆಚ್ಚಿತ್ತು.

ಶಕುಂತಲ ಬಿಕ್ಕಿ ಬಿಕ್ಕಿ ಅತ್ತುಬಿಟ್ಟಳು.

"ಸುಮ್ನಿರೆ ಆಳಬೇಡ ನಮ್ಮಣ್ಣ ಕಂಡ್ರೆ ನನ್ನ ಬಯ್ತಾರೆ ಅಮ್ಮನ ಕೈಲಿ ನಿಂಗೆ ತುಂಬಾ ತಿಂಡಿ ಕೊಡಿಸ್ತೀನಿ." ಗೋಪಾಲನ ನಗು ಅವಳ ಕಣ್ಣಲ್ಲಿ ನೀರನ್ನು ಕಂಡು ಎತ್ತಲೋ ಓಡಿ ಹೋಗಿತ್ತು.

"ಹೋಗೊ....ನಂಗೇನು ಬೇಡ...." ಶಕುಂತಲ ಮುಖ ಸಿಂಡರಿಸಿಕೊಂಡೆ ನುಡಿದಳು. "ನೀನು ಕೆಟ್ಟೋನು ..." ತನ್ನ ಎರಡು ಬೆರಳನ್ನು ಸೇರಿಸಿ ಉಂಗುರದಂತೆ ಮಾಡಿ ತನ್ನ ತುಟಿಯ ಬಳಿಗೆ ತಂದು "ನಿನ್ನ ಜೊತೆ ತೂ ಬಿಟ್ಟೆ" ಅವನ ಗೆಳೆತನವನ್ನು ತ್ಯಜಿಸಲು ನಿರ್ಣಯಿಸಲು ನಿರ್ಧರಿಸಿ ನುಡಿದಳು.

"ಲೇ ಶಕುಂತಲ . ನನ್ನ ಜೊತೆ ಬಿಡಬೇಡ್ವೆ... ನನ್ನ ಇಂಗ್ಲೀಷು ಪುಸ್ತಕ ಕೊಡ್ತೀನಿ ನಿಂಗೆ....ಅಮ್ಮ ಚಕ್ಕುಲಿ, ಕೊಡಬಳೆ, ರವೆಉಂಡೆ ಅದೇನೇನೊ ಮಾಡಿದ್ದಾಳೆ. ಎಲ್ಲಾ ಕೊಡ್ತೀನಿ ತುಂಬಾ ಹೂವು ಕಿತ್ತು ಕೊಡ್ತಿನಿ." ಗೋಪಾಲನ ಮಾತಿನಲ್ಲಿ ನಗು ಕಂದಿಹೋಗಿ ಅಸಹಾಯತೆ ಮಿಡಿಯುತ್ತಿತ್ತು.

"ಹಾಗಾದ್ರೆ ತುಂಬ ಹೂವು ಕಿತ್ತುಕೊಡ್ತೀಯಾ" ಶಕುಂತಲಳ ಕೋಪವೂ ಎತ್ತಲೊ ಹೋಯಿತು. ಮುಗುಳು ಮಲ್ಲಿಗೆಯೊಂದು ಮುಖದಲ್ಲಿ ಅರಳಿತು.

"ನಡಿ ಈಗ್ಲೇ ಕಿತ್ತು ಕೊಡ್ತಿನಿ...." ಅವಳ ಕೈಯನ್ನು ಹಿಡಿದು ಪುನಃ ತೋಟದ ಕಡೆಗೆ ಹೊರಟ. ಸೂರ್ಯ ಆಗಲೇ ನೆತ್ತಿಯ ಮೇಲಿನಿಂದ ಸರಿದು ಪಶ್ಚಿಮ ದಿಗಂತವೆಡೆಗೆ ಸಾಗಿದ್ದ. ಪ್ರಖರ ಬಿಸಿಲು ಝಳಝಳಿಸುತ್ತಿತ್ತು. ಊಟದ ಹೊತ್ತು ಮೀರಿ ಹೋಗಿದ್ದರೂ ಊಟದ ಚಿಂತೆ ಯಾರಿಗೂ ಇದ್ದಿರಲಿಲ್ಲ.

ಗೋಪಾಲ ಒಂದು ಹೊರೆ ಹೂವನ್ನು ಕುಯ್ದು ಅವಳ ಲಂಗದಲ್ಲಿ

ತುಂಬಿದ. ಶಕುಂತಲ ನಕ್ಕಳು. ಇಬ್ಬರೂ ಕೈ ಹಿಡಿದು ಹೊರಗೆ ಬಂದರು.

ಇಬ್ಬರೂ ಮನೆಗೆ ಹೊರಡಬೇಕೆಂದು ಹೊರಟವರು ಮನೆಯನ್ನು ಸೇರ ಬೇಕಾದರೆ ಇನ್ನೂ ಒಂದು ಗಂಟೆ ಕಳೆಯಿತು. ಹತ್ತು ಗಜ ಹಿತ್ತಿಲನ್ನು ಬಿಟ್ಟು ಮುಂದೆ ಬಂದವರು ಪುನಃ ಹುಣಸೆಯ ಮರದಡಿ ಕುಳಿತರು. ಶಕುಂತಲ ಒಂದು ಸಣ್ಣ ಕಲ್ಲನ್ನು ನಿಲ್ಲಿಸಿದಳು. ಅಲ್ಲೆ ಬಿದ್ದಿದ್ದ ಸಣ್ಣ ಕಲ್ಲು ಗಳನ್ನು ಅದರ ಸುತ್ತ ಇಟ್ಟಳು. ತಾಪು ತಂದಿದ್ದ ಹೂವನ್ನು ಅದಕ್ಕೆ ಪೂಜೆ ಮಾಡಿದಳು. "ಇದು ದೇವರು ಕಣೋ ಗೋಪಾಲ ...ನಿಮ್ಮನೇಲಿ ಇಟ್ಟಿಲ್ವಾ ಅದು ...ಸತ್ಯನಾರಾಯಣ ದೇವ್ರು ..." ನೆಲದ ಮೇಲೆ ಬಿದ್ದ ಹೂವನ್ನು ಪುನಃ ತೆಗೆದು ಪೂಜಿಸಿದಳು.

ರಾಮರಾಯರು ಮನೆಯ ಬಾಗಿಲಲ್ಲಿ ನಿಂತು ಕೂಗಾಡಿದಾಗಲೆ ಇವರು ಮನೆಯತ್ತ ಹೊರಟಿದ್ದು.

ಮನೆಗೆ ಇವರು ಬರುವಷ್ಟರಲ್ಲಿ ರಾಮರಾಯರು ಪೂಜೆಯನ್ನು ಮುಗಿಸಿ ಎಲೆಯನ್ನು ಹಾಕುತ್ತಿದ್ದರು. "ಎಲ್ಲಿ ಹೋಗಿದ್ಯೆ ಇಷ್ಟು ಹೊತ್ತು?" ಇವಳ ಯೋಚನೆಯಲ್ಲಿಯೇ ಇದ್ದ ಸಾವಿತ್ರಮ್ಮ ಅಡಿಗೆ ಮನೆ ಬಾಗಿಲಲ್ಲಿ ನಿಂತು ಪ್ರಶ್ನಿ ಸಿದರು.

"ಗೋಪಾಲಂಗೆ ಅವಳು ಸಿಕ್ಕಿರೋದು ಊಟಾನೂ ಬೇಡ ತಿಂಡೀನೂ ಬೇಡ ..." ಲಕ್ಷ್ಮೀದೇವಮ್ಮ ಉಪ್ಪನ್ನು ಬಡಿಸುತ್ತ ನುಡಿದಳು.

"ಲೇ ಶಾಕುಂತಲ ..ನೀನು ನನ್ಹತ್ರ ಕೂತ್ಕೋತಿಯ ..." ಗೋಪಾಲ ಅವಳನ್ನು ಪ್ರಶ್ನಿಸಿ ಕೈ ಹಿಡಿದು ಎಳೆದು ಒಂದು ಎಲೆಯ ಮುಂದೆ ತಾನು ಕುಳಿತು ಇನ್ನೊಂದರ ಮುಂದೆ ಅವಳನ್ನು ಕೂಡಿಸಿದ.

ರಾಮರಾಯರು, ವೆಂಕಟರಾಯರು ಒಬ್ಬರ ಮುಖವನ್ನೊಬ್ಬರು ನೋಡಿ ಒಳಗೇ ನಕ್ಕರು.

ವೆಂಕಟರಾಯರಿಗೆ ಕೈತೊಳೆದು ವಿರಾಮವಾಗಿ ಒಂದು ಗಳಿಗೆ ಮಲಗಿ ಕೊಂಡರೆ ಸಾಕೆನಿಸಿತ್ತು. ಬೇಡಬೇಡವೆಂದರೂ, ಲಾಡು, ಚಿರೋಟಿ, ಕರ ಗಡಬು, ಒಬ್ಬಟ್ಟು, ಆಂಬೊಡೆ ಎರಡೆರಡೆ ಎಂದು ಬಲವಂತಮಾಡಿ ಹಾಕಿ ತಿನ್ನಿಸಿದ್ದ ರಾಮರಾಯ. ಕೈಯ ಮೇಲೆ ಸ್ವಲ್ಪ ನೀರನ್ನು ಹಾಕಿಕೊಂಡು ಹಾಯಾಗಿ ಗೋಡೆ ಒರಗಿ ಕುಳಿತುಕೊಂಡರು ರಾಯರು ... ಕಣ್ಣು ಎಳೆಯು ತ್ತಿತ್ತು.

"ಇದ್ಯಾಕಪ್ಪ....ಊಟಮಾಡಿ ಸುಸ್ತಾಗಿ ಕುಳ್ತುಬಿಟ್ಟೆ. ಏನು ನಮ್ಮನೆ ಊಟ ಸರಿಬೀಳಲಿಲ್ಲ ಅಂತ ಕಾಣುತ್ತೆ....! ನಿಂಗ್ಯಾಕೊ ಈಗ

ಸಂಕೋಚ ಬಂದುಬಿಟ್ಟಿದೆಯಪ್ಪ....ಸರಿಯಾಗಿ ಊಟಾನೆ ಮಾಡಿಲ್ಲ.... ಹೋಗ್ಲಿ ಬಾರಪ್ಪ ನಿಮ್ಮನೆ ಬಾಗ್ಲು ತೆಗೆಸಿದ್ದೇನಿ....ಹಾಯಾಗಿ ಮಲಗಿ ಕೊಳ್ವಿಂತೆ. ಜಮಖಾನೆ ಹಾಕಿಸಿದ್ದೇನೆ. ಬಾ ತಾಂಬೂಲ ಹಾಕಿಕೊಳ್ಳ್ಳೋಣಾ ...." ಕೈ ಹಿಡಿದು ವೆಂಕಟರಾಯರನ್ನು ಎಳೆದುಕೊಂಡು ಅವರಮನೆಯನ್ನು ಪ್ರವೇಶಿಸುವ ಹೊತ್ತಿಗೆ ಉಳಿದ ಬ್ರಾಹ್ಮಣರು ಆಗಲೇ ಜಮಖಾನೆಯ ಮೇಲೆ ಕುಳಿತು ರಾಮರಾಯರ ಬರುವನ್ನೆ ಎದುರು ನೋಡುತ್ತಿದ್ದರು. ಜೋಯಿ ಸರು ಅಡಕೆಲೆ ತಟ್ಟೆಯನ್ನು ಅಣಿಮಾಡಿ ವರಪ್ರಸಾದಕ್ಕಾಗಿ ಇಟ್ಟರು. ರಾಯರು ಗೋಡೆ ಒರಗಿ ಕುಳಿತುಬಿಟ್ಟಿದ್ದರು. ರಾಮರಾಯ ಹುಸಿನಕ್ಕು ಸೊಂಟದಿಂದ ಚಿಲ್ಲರೆ ನಾಣ್ಯವನ್ನು ಹೊರತೆಗೆದು ಎರಡೆರಡಾಣೆಯನ್ನು ಪ್ರತಿ ಯೊಂದು ಎಲೆಗೂ ಇಟ್ಟ. ತಾಂಬೂಲ ಕೊಡುವುದಕ್ಕೆ ಮುಂಚಿತವಾಗಿಯೇ ಸ್ವಲ್ಪ ಅಡಿಕೆಯನ್ನು ಬಾಯಿಗೆ ಹಾಕಿಕೊಳ್ಳುತ್ತ "ಹೂಂ! ಏಳಿ ರಾಯ್ರೆ.... ಗಂಧ ಕೊಟ್ಟು ಪ್ರಸಾದ ಕೊಟ್ಟು ಅಡಕೆಲೆಕೊಡಿ" ಆಜ್ಞಾಪಿಸಿದರು ಜೋಯಿ ಸರು. ರಾಮರಾಯ ಎಲ್ಲರಿಗೂ ಗಂಧ ಕೊಟ್ಟು, ದೇವರ ಪ್ರಸಾದ ಹಂಚಿದ. ಅಡಕೆಲೆಯನ್ನು ಕೊಟ್ಟ. ವೆಂಕಟರಾಯರಿಗೆ ಕಣ್ಣು ಎಳೆಯುತ್ತಿದ್ದರೂ ರಾಮರಾಯ ಎದುರಿಗೆ ಕುಳಿತಿದ್ದುದರಿಂದ ನಾಲ್ಕು ಅಡಿಕೆಯನ್ನು ಬಾಯಿಗೆ ಹಾಕಿಕೊಂಡು ಗೋಡೆ ವರಗಿ ಸುಣ್ಣ ಹಚ್ಚಿದ ಎಲೆಗೆ ಸುಣ್ಣವನ್ನು ಹಚ್ಚುತ್ತ ಕುಳಿತಿದ್ದರು.

"ಅಣ್ಣಾ ....ಅಣ್ಣಾ ....ನಂಗೆ ಅಡಕೆಲೆ...." ಕೂಗುತ್ತ ಹೊರಗಿನಿಂದ ಬಂದ ಶಕುಂತಲ ತಂದೆಯ ಕೈಯಲ್ಲಿದ್ದ ಎಲೆಯನ್ನು ಕಿತ್ತುಕೊಂಡು ಎಡಗೈ ಯಲ್ಲಿ ಒಂದು ಹಿಡಿ ಅಡಿಕೆಯನ್ನು ತೆಗೆದುಕೊಂಡು ಬಾಯಿಗೆ ಒಟ್ಟಿಗೆ ತುಂಬಿಕೊಂಡಳು.

"ಲೇ ಶಕುಂತಲ ನೀನು ಅಡಕೆಲೆ ಹಾಕಿಕೊಳ್ಳಬಾರ್ದು... ವಿದ್ಯೆ ಬರೊಲ್ಲ..." ವೆಂಕಟರಾಯರು ಹೇಳುವುದರಲ್ಲಿ ಇನ್ನಷ್ಟು ಎಲೆಗಳನ್ನು ತೆಗೆದುಕೊಂಡು ಹೊರಗೆ ಓಡಲು ಅಣಿಯಾದಳು. ಅಷ್ಟು ಹೊತ್ತಿಗೆ ಗೋಪಾಲ ಒಂದು ಹರಿದ ಪುಸ್ತಕ ಕೈಯಲ್ಲಿ ಹಿಡಿದು ಒಳಕ್ಕೆ ಬಂದ.

"ನೋಡಣ್ಣ ಶಕುಂತಲ ನನ್ನ ಪುಸ್ತಕ ಹರ್ದು ಹಾಕಿದ್ದು...." ಗೋಪಾಲ ತಂದೆಗೆ ದೂರನ್ನಿತ್ತ.

"ಏನಿಲ್ಲ...ನಾನೇನು ಹರೀಲಿಲ್ಲ." ಶಕುಂತಲಳ ಕಣ್ಣು ಇದ್ದಕ್ಕಿ ದ್ದಂತೆಯೇ ಮಳೆಗರೆಯತೊಡಗಿತು.

"ನೀನು ಹರೀಲಿಲ್ಲ ಅವನೇ ಹರಿದುಹಾಕಿಕೊಂಡ ಅಲ್ವೇನೆ....?"

ವೆಂಕಟರಾಯರು ಶಕುಂತಲಳನ್ನು ತಮ್ಮ ಮುಂದೆ ಎಳೆದುಕೊಂಡರು.

"ನಾನೇನೂ ಅವನ ಪುಸ್ತಕ ಹರೀಲಿಲ್ಲ. ಅವನೇ ನನ್ನ ಹೊಡ್ದ ಪುಸ್ತಕದಲ್ಲಿ; ಹರ್ದ್ದು ಹೋಯ್ತು." ಬಿಕ್ಕಿ ಬಿಕ್ಕಿ ಅತ್ತಳು.

"ಹೋಗ್ಲಿ ಹೋಗಪ್ಪ. ಗೋಪಾಲ ನೀನು ಒಳ್ಳೇನು. ನಿಂಗೆ ಬೇರೆ ಪುಸ್ತಕ ತರ್ಸಿ ಕೊಡ್ತೇನೆ.... ನೀನು ಹೋಗಪ್ಪ.... ಇವಳೊಬ್ಬಳು ತುಂಟು ಹುಡ್ಗಿ." ಶಕುಂತಲಳ ಕಿವಿಯನ್ನು ಹಿಂಡಿ ಗೋಪಾಲನ ತಲೆಯನ್ನು ಸವರಿದರು ರಾಯರು.

"ಮಕ್ಕಳು ಹಾಗೆಲ್ಲಾ ಹೊಡೆದಾಡಬಾರ್ದು. ಸುಮ್ನೆ ಆಟಆಡಿ ಕೊಳ್ಳಬೇಕು. ನೀನೊಬ್ಬ ಹೇಸರಕತ್ತೆ. ಪಾಪ ಹೊಸದಾಗಿ ಇವತ್ತು ಬಂದಿದ್ದಾಳೆ, ಆಗ್ಲೆ ಜಗಳಾ ಅವಳ ಹತ್ರ. ಅವಳು ಇನ್ನೂ ಮಗು.... ನೀನು ಶುದ್ಧ ದಾಂಡಿಗ" ಗೋಪಾಲನ ಕಿವಿಯನ್ನು ಹಿಡಿದ ರಾಮರಾಯ.

ಗೋಪಾಲ ಅಳಲಿಲ್ಲ. ಮೂಕ ದೃಷ್ಟಿಯನ್ನು ಶಕುಂತಲಳತ್ತ ಹರಿಸಿದ.

"ಹೋಗೋ.... ಹೊರಗೆ...." ಪುನಃ ಗರ್ಜಿಸಿದ ರಾಮರಾಯ. ಗೋಪಾಲ ಹೆದರಿ ಒಂದು ಹೆಜ್ಜೆ ಹಿಂದಕ್ಕೆ ಇಟ್ಟ. ಶಕುಂತಲಳ ಕಣ್ಣಿನ ನೀರು ಯಾವಾಗಲೊ ಲಂಗಕ್ಕೆ ಸೇರಿಹೋಗಿತ್ತು. ಗೋಪಾಲನನ್ನ ನೋಡಿದಳು. "ಬಾರೆ ಹೊಡೆಯೋಲ್ಲ." ಬಹು ಮೆಲ್ಲಗೆ ನುಡಿದು ಕಣ್ಣಸನ್ನೆ ಮಾಡಿದ. ಶಕುಂತಲ ಅವನನ್ನು ಬೆರಳೆತ್ತಿ ಮೂದಲಿಸಿ ಹೊರಗೆ ಓಡಿದಳು.

ಗೋಪಾಲ ಓಡಿಹೋಗಿ ಶಕುಂತಲಳ ಕೈಯನ್ನು ಹಿಡಿದುಕೊಂಡ.

ಒಳಗಿದ್ದವರೆಲ್ಲ ಗೊಳ್ಳೆಂದು ನಕ್ಕುಬಿಟ್ಟರು.

"ಚೆನ್ನಾಗಿದೆ ಜೋಡಿ" ಜೋಯಿಸರು ಬಾಯಿಗೆ ಸುಣ್ಣದ ಸಣ್ಣ ಉಂಡೆಯನ್ನು ಹಾಕಿಕೊಳ್ಳುತ್ತ ನುಡಿದರು. ರಾಮರಾಯರು ಬಾಗಿಲಿನತ್ತ ನೋಡಿದಾಗ ಗೋಪಾಲ, ಶಕುಂತಲ ಹೊರಗಿನ ಬೀದಿಯ ಬಾಗಿಲಿನ ಕೊನೆಯ ಮೆಟ್ಟಲನ್ನು ಇಳಿಯುತ್ತಿದ್ದರು.

"ಹಿಂದಿನಿಂದ ಬೆಳೆದುಬಂದ ಸಂಬಂಧ. ಮುಂದೂ ಬೆಳ್ದ ಹಾಗಾಗುತ್ತೆ. ವೆಂಕಟರಾಯರೆ ಮನೇನೂ ಮುಂದಕ್ಕೆ ಬಂದ ಹಾಗಾಗುತ್ತೆ. ಇವರಂತೂ ಹಳ್ಳಿ ಬಿಟ್ಟು ಪಟ್ಟಣ ಸೇರಿದ್ರು.... ಹಿರೀಕರು ಸಂಪಾದಿಸೊ ಆಸ್ತೀನೂ ಸರಿಯಾದೋರು ನೋಡಿಕೊಂಡ ಹಾಗಾಗುತ್ತೆ. ಒಟ್ಟಿನಲ್ಲಿ ಎಲ್ಲಾ ವಿಧದಲ್ಲೂ ಜೋಡಿ ಸರಿಯಾಗಿದೆ. ಮುಖ್ಯವಾಗಿ ದೈವಯೋಗ ಇದ್ರೆ.... ಆಗೇ ಆಗುತ್ತೆ.... ಇವತ್ತಲ್ಲ ನಾಳೆ...." ನೆರೆಯೂರಿನ ಸೀತಾ

ರಾಮಯ್ಯನವರು ವಯಸ್ಸಿನಲ್ಲಿ ತಾನು ಬಹಳ ಜನರಿಗಿಂತ ದೊಡ್ಡವರೆಂಬ ಪ್ರೌಢಿಮೆಯಿಂದ ನುಡಿದರು.

"ದೈವ ಬಲವೇನು ಬಂತು.! ಮಾಡಿದ್ದಕ್ಕೆಲ್ಲಾ ಇದ್ದೇ ಇದೆ. ಮನುಷ್ಯ ಮುಖ್ಯವಾಗಿ ಮನಸ್ಸು ಮಾಡಬೇಕು ಅಷ್ಟೆ. ವೆಂಕಟರಾಯರು 'ಹೂಂ' ಅಂದ್ರೆ ಶುಭಸ್ಯ ಶೀಘ್ರಂ. ನಡೆಸೇಬಿಡೋಣಾ ಮಾತನ್ನು. ನಮ್ಮಪ್ಪನ ಮದ್ವೆ ಆಗೊವಾಗ ನಮ್ಮಮ್ಮನಿಗೆ ಆರುವರ್ಷವಂತೆ. ನಮ್ಮಪ್ಪನಿಗೆ ಹದಿಮೂರು ವರ್ಷವಂತೆ. ಗೋಪಾಲನಿಗೆ ಹದಿನಾಲ್ಕು ವರ್ಷ ಅಂತ ಕಾಣುತ್ತೆ. ಶಕುಂತಲಾಗೂ ಏಳು–ಎಂಟು ಇರಬೇಕು. ವಯಸ್ಸು ಏನೂ ಚಿಕ್ಕದಲ್ಲ. ಜಾತಕಾನಂತೂ ನೋಡ್ಬೇಕಾಗಿಯೇ ಇಲ್ಲ. ಮಾತಿಗೆ ಪ್ರಾರಂಭಿಸಿರೊ ಗಳಿಗೆ ಬಹಳ ಪ್ರಶಸ್ಥವಾದ್ದು." ಜೋಯಿಸರು ಎಲ್ಲವನ್ನು ತೀರ್ಮಾನಿಸಿಯೇ ನುಡಿದರು.

"ನಮ್ಮ ತಾತ ನಮ್ಮ ಅಜ್ಜಿಗೆ ತೊಟ್ಟಿಲಲ್ಲೆ ತಾಳಿಕಟ್ಟಿದನಂತೆ" ರಾಮರಾಯ ನುಡಿದಾಗ ಯಾರಿಗೂ ನಗು ತಡೆಯಲಾಗಲಿಲ್ಲ.

"ಮುಖ್ಯವಾಗಿ ಸಾಹುಕಾರ ವೆಂಕಟರಾಯರು ಮನಸ್ಸು ಮಾಡಬೇಕು." ಭಕ್ಷದ ಭೀಮಣ್ಣ ಇಂತಹ ಸಮಯದಲ್ಲಿ ಮಾತನಾಡದೆ ಇರಬಾರದೆಂದು ನುಡಿದರು.

"ಏನು ಹೇಳ್ತಿ ವೆಂಕಟರಾಯ ...?" ಯಾರೋ ನೇರವಾಗಿಯೇ ಪ್ರಶ್ನಿಸಿದರು.

"ದೈವಯೋಗ ಇದ್ದ ಹಾಗೇ ಆಗುತ್ತೆ. ಹೀಗೇ ದೇವರ ಇಚ್ಛೆ ಇದ್ರೆ ಹಾಗೇ ಆಗ್ಲಿ. ಅವಳ ಇಚ್ಛೆಗೆ ವಿರುದ್ಧವಾಗಿ ನಾನು ಎಂದೂ ಅವಳ ಲಗ್ನ ಮಾಡೋಲ್ಲ. ಎಂದು ಅವಳು ಆಗ್ತೀನಿ ಅಂತಾಳೊ ಅಂದು ಮಾಡ್ತೀನಿ. ಮುಖ್ಯವಾಗಿ ಅವಳು ಸುಖವಾಗಿರಬೇಕು. ಇರೋಳು ಒಬ್ಬಳು. ಅವಳ ಸುಖಾನೇ ನನ್ನ ಸುಖ." ವೆಂಕಟರಾಯರು ಇಷ್ಟೇ ನುಡಿದರೂ ಎಲ್ಲರ ಮುಖದಲ್ಲೂ ಮದುವೆಯೇ ಆಗಿಹೋದಾಗಿನ ಸಂತೋಷವಿತ್ತು.

"ಅಭಿಮಾನ ಮುಖ್ಯ." ರಾಮರಾಯರು ನುಡಿದು ಚಿಗರು ವಿಳ್ಳೆಯದೆಲೆಯನ್ನು ತೆಗೆದುಕೊಂಡು ತೆಳ್ಳಗೆ ಸುಣ್ಣ ಹಚ್ಚಿ ವೆಂಕಟರಾಯರಿಗೆ ಕೊಟ್ಟರು.

"ಅಷ್ಟಲ್ದೆ! ಅಭಿಮಾನ ಇಲ್ದೆ ಹೋಗಿದ್ರೆ ಅದ್ಯಾಕೆ ನೀನು ಹೇಳಿ ಕಳ್ಸಿದೆ ಅಂತ ಆರೇಳು ಮೈಲಿ ಬರ್ಬೇಕಾಗಿತ್ತು." ವೆಂಕಟರಾಯರು ಹುಸಿಯಾಗಿ ನಗುತ್ತ ರಾಮರಾಯರು ತರಿಸಿ ಇಟ್ಟಿದ್ದ ದಿಂಬಿಗೆ ತಲೆಯನ್ನು ಕೊಟ್ಟರು.

ಬೆಳಗ್ಗಿಯಿಂದ ದಣಿದ ಶರೀರವನ್ನು ನಿದ್ರೆ ಒಂದು ಘಳಿಗೆಯಲ್ಲಿ ಆವರಿಸಿತು.

ರಾಮರಾಯರ ಮನೆಯಲ್ಲೂ ಹೆಂಗಸರ ಮಧ್ಯೆ ಇವೇ ವಿಷಯ ನಡೆದಿತ್ತು. "ದೈವಯೋಗ ಇದ್ರೆ ಹಾಗೇ ಆಗ್ಲಿ...." ಸಾವಿತ್ರಮ್ಮನ ಮನಸ್ಸಿನಲ್ಲೂ ಹಾಗೇ ಆಗಬೇಕೆಂದು ಇಚ್ಛೆ ಇದ್ದರೂ ವ್ಯಾವಹಾರಿಕವಾಗಿ ನುಡಿದರು.

"ಇರೋಳು ಒಬ್ಬಳು ಮಗಳು. ಚೆನ್ನಾದ ಮನೆ ಸೇರಿ ಸುಖವಾಗಿದ್ರೆ ಸರಿ...." ಸೀತಮ್ಮನೂ ನುಡಿದಳು.

* * * *

"ನೀನು ನನ್ನ ಹೆಂಡ್ತಿ....ಮನೇಲಿ ಅಮ್ಮ–ಅಪ್ಪ ಮಾತ್ನಾಡಾ ಇದ್ದರು...." ಹೊಲದ ಬದುವಿನ ಮೇಲೆ ಕುಳಿತು ನುಡಿದ ಗೋಪಾಲ. "ಹೋಗೋ" ಹತ್ತಿರ ಕುಳಿತು ಹೊಲದ ಪೈರನ್ನು ಸೀಳುತ್ತಿದ್ದ ಶಕುಂತಲ ಎದ್ದು ನಿಂತು ಗೋಣನ್ನು ತಿರುವಿದಳು. ಸ್ವಲ್ಪ ದೂರ ಸರಿದು ಎತ್ತಲೋ ನೋಡ ಹತ್ತಿದಳು.

"ನಿನ್ನೇ ನಾನು ಮದ್ವೆ ಆಗೋದು...." ಗೋಪಾಲನ ನುಡಿಯಲ್ಲಿ ನಿರ್ಧಾರವಿತ್ತು.

"ನಾನು ಮದ್ವೇನೇ ಆಗೊಲ್ಲ.." ಹೇಳಿ ಹೊಲದ ಪೈರನ್ನು ತುಳಿದುಕೊಂಡು ಓಡಿದಳು. ಅಲ್ಲಿ ನಿಂತು ಹಲ್ಲು ಕಿರಿದು ನಕ್ಕಳು.

"ಆಗ್ದೆ ಇದ್ರೆ ನಾನು ಬಿಡೋಲ್ಲ...." ಹಿಂದೆ ಗೋಪಾಲ ಓಡಿದ.

"ನಾನು ಯಾರನ್ನು ಮದ್ವೆ ಆಗೋಲ್ಲ...ಗಂಡ ಕೆಟ್ಟೋನು..." ಓಡುತ್ತಿದ್ದ ಶಕುಂತಲ ನಿಂತ ಧೈರ್ಯವಾಗಿ ಹೇಳಿದಳು.

[ತಂದೆ ಅಮ್ಮನಿಗೆ ಗಂಡ. ಪಕ್ಕದ ಮನೆ ನಿರ್ಮಲೆಯ ಗಂಡ ಚೆನ್ನಕೇಶವ ಹೆಂಡತಿಯನ್ನು ಎಡಬಿಡಲಾರ. ರಾಮರಾಯರೂ ಲಕ್ಷ್ಮೀದೇವಮ್ಮನ ಗಂಡ....ಇವರೆಲ್ಲಾ ಒಳ್ಳೆಯವರೆ. ಇನ್ನು ಯಾರಾರನ್ನೋ ನೋಡಿದ್ದಳು. ಯಾವ ಗಂಡನೂ ಕೆಟ್ಟವನಾಗಿರಲಿಲ್ಲ. ಅಂದು ಶೀನು ಗಂಡದಾಗಿ "ನೀನು ಬೇಡ ಹೋಗೆ ನಾಗರಮಾ ಇರ್ಲಿ...." ಎಂದು ಇವಳನ್ನು ಮದುವೆಯ ಆಟದಲ್ಲಿ ತಳ್ಳಿ ಅವಳನ್ನು ಕೂಡಿಸಿಕೊಂಡು ಮದುವೆಯಾಗಿದ್ದ. ರಮಾ ಚೆನ್ನಾಗಿರಲಿಲ್ಲ, ಶುದ್ದ ಕಪ್ಪು.. ಮೂಗು ಸ್ವಲ್ಪ ಉದ್ದ, ಕಿವಿ ಮೋಟು, ಹಲ್ಲೂ ಅಗಲ...ಇಷ್ಟಾದರೂ ಅವಳು ಹೆಂಡತಿಯಾಗಿದ್ದಳು ಶೀನೂಗೆ. ದಿನವೂ ಹೆಂಡತಿಯಾಗುತ್ತಿದ್ದ ಇವಳು ಅಂದು ದೂರವಾಗಿದ್ದಳು. ಅದಕ್ಕೆ ಗಂಡ ಕೆಟ್ಟವನು.]

"ನಾನು ಒಳ್ಳೇಯವನಲ್ವಾ...." ಮುಖವನ್ನು ಚಿಕ್ಕದು ಮಾಡಿ ಗೋಪಾಲ ಪ್ರಶ್ನಿಸಿದಾಗ ಅವಳು ಕಿಲಕಿಲನೆ ನಕ್ಕಳು.

"ಥೂ ನಿಂಗೆ ನಾಚ್ಕೆ ಇಲ್ಲ.. ಮದ್ವೆ ವಿಷಯ ಯಾರಾದ್ರು ಮಾತ್ನಾಡ್ತಾರಾ ...?" ಹೇಳಿ ಮನೆಯ ಕಡೆಗೆ ಓಡಿದಳು ಶಕುಂತಲ. ಗೋಪಾಲನೂ ಕೇಕೆ ಹಾಕುತ್ತ ಹಿಂಬಾಲಿಸಿದ. "ಬೆಳಗ್ಗೆ ನಾವು ಹೊರ್ಟು ಹೋಗ್ತೇವಿ...." ಓಡುತ್ತಲೇ ಹಿಂದೆ ತಿರುಗಿ ನುಡಿದಳು ಶಕುಂತಲ. ಗೋಪಾಲ ನೀರವನಾದ. ಇಷ್ಟು ಬೇಗ ಹೊರಟು ಹೋಗ್ತಾಳೆಂಬ ದುಃಖದಿಂದ ಮುಖ ಮಲಿನವಾಯಿತು.

ಮಾರನೆ ದಿನ ಬೆಳಗ್ಗೆ ವೆಂಕಟರಾಯರ ಮನೆಯವರು ಊರಿಗೆ ಹೊರಟುಬಿಟ್ಟರು.

"ಈ ಸಾರೀನೂ ಎರಡು ದಿನ ನಿಲ್ಲಿಲ್ಲ ಬಂದದ್ದು .. ಹೊರಟಿದ್ದು ಅಷ್ಟೆ ಆಯ್ತು...." ಲಕ್ಷ್ಮಿದೇವಮ್ಮನಿಗೆ ಇವರು ಇಷ್ಟು ಬೇಗ ಹೋಗುವುದು ಸಮಾಧಾನವಿಲ್ಲ.

"ಹಾಳು ಕಛೇರಿಯೊಂದಿದೆಯೆಲ್ಲಾ...." ವೆಂಕಟರಾಯರು ಅಸಹಾಯಕತೆಯನ್ನು ವ್ಯಕ್ತಪಡಿಸಿದರು.

"ಹೋಗಿ ಬರ್ತೀಯಾ ಶಕುಂತಲ ...ದಸರಾ ಹಬ್ಬಕ್ಕೆ ಕಂಡಿತ ಬರ್ತಿತಾನೆ ...ಬನ್ನಿ ಮಾವ ...ಅಜ್ಜಿ ....ಅತ್ತೆ...." ಎಲ್ಲರಿಗೂ ಆಹ್ವಾನವಿತ್ತ. ಅವರು 'ಹೂಂ' ಅಂದರು. ಸ್ವಲ್ಪ ಕಂದಿದ್ದ ಮುಖ ಅರಳಿತು.

೬

ಶಕುಂತಲ ಹಾಸಿಗೆಯಿಂದ ಎದ್ದು ಎಂದಿನಂತೆ ಹಿತ್ತಲ ಕಡೆಗೆ ಹೋಗಿ ತುಳಸಿಗೆ ಕೈಮುಗಿದಳು. ಪಕ್ಕದಲ್ಲಿದ್ದ ಸಂಪಿಗೆ ಮರವನ್ನು ನೋಡಿದಳು. ಎಷ್ಟು ಎತ್ತರವಾಗಿ ಬೆಳೆದಿದೆ ಅನ್ನಿಸಿತು ಅವಳಿಗೆ. ಅವಳೇ ಕೈಯಾರ ಸಸಿಯನ್ನು ನೆಟ್ಟು ನೀರನ್ನು ಹಾಕಿ ಬೆಳೆಸಿದ್ದು. ದಿನವೂ ಅದನ್ನು ನೋಡಿ ಸಂಜೆ ಹೂವನ್ನು ಮುಡಿಯುವಾಗ ಯಾವಾಗಲೂ ಅದರ ಬೆಳವಣಿಗೆ ಕಂಡು ಅವಳಿಗೆ ಆಶ್ಚರ್ಯವಾಗಿರಲಿಲ್ಲ. ಅತ್ತ ಮನಸ್ಸೂ ಸಂದಿರಲಿಲ್ಲ. ಇಂದು ಗಿಡವನ್ನು ನೋಡಿದೊಡನೆ ಪಕ್ಕದಮನೆಯ ರಮಾದೇವಮ್ಮ ಅವಳ ತಾಯಿಯ ಮುಂದೆ ಹೇಳಿದ್ದ ಮಾತು ಜ್ಞಾಪಕಕ್ಕೆ ಬಂದು. "ಹುಡಗೀರೇನಮ್ಮ....ಗಿಡ ಬೆಳ್ದಾಗೆ ಬೆಳೀತಾರೆ. ನೋಡಿ ನಿಮ್ಮ ಶಕುಂತಲ ಇನ್ನೂ ನಿನ್ನೆ ಮೊನ್ನೆ ಹುಡ್ಗಿ ಆಗಲೇ ಹ್ಯಾಗೆ ಬೆಳೆದು ನಿಂತಿದ್ದಾಳೆ. ಮದ್ವೆಗೆ

ಸಿದ್ಧವಾಗಿ ..." ಪ್ರಕೃತಿಯ ವೈಚಿತ್ರ್ಯ ಕಂಡು ಅವಳಿಗೆ ಆಶ್ಚರ್ಯವಾಯಿತು.

ಹೌದು ! ನಿಜ ! ತಾನೇ ಕೈಯಾರ ಸಾಕಿದ ಗಿಡ ಇಂದು ಮರವಾಗಿ ಹೂವಿನಿಂದ ತುಂಬಿದೆ. ಸ್ವಲ್ಪ ಹೊತ್ತು ಬುಡದಿಂದ ತುದಿಯ ವರೆಗೂ ನೋಡಿದಳು. ತಾನು ಗಿಡವನ್ನು ನೆಟ್ಟಾಗ ಒಂದು ಬೆರಳುಗಾತ್ರದ ಸಣ್ಣ ಕಡ್ಡಿ....ಎಲ್ಲೋ ಹತ್ತಾರು ಎಲೆ. ಇಂದು ಸುಮಾರು ಒಂದು ಲಕ್ಷಕ್ಕೆ ಮೀಗಿ ಲಾಗಿ ಎಲೆಗಳಿರಬಹುದು. ಬುಡ ತೋಳಿನಿಂದ ಬಳಸುವಂತಿದೆ. ಇದನ್ನು ಯೋಚಿಸುತ್ತಿದ್ದ ಶಕುಂತಲ ಮತ್ತಾವುದೋ ಭಾವನೆ ಮನದಲ್ಲಿ ಮೂಡಿದು ದರಿಂದ ಮೈ ಉಬ್ಬಿ ಕಂಪಿಸಿದಳು. ರಭಸವಾಗಿ ತನ್ನ ಕೊಠಡಿಗೆ ಹೋಗಿ ನಿಲವುಗನ್ನಡಿಯ ಮುಂದೆ ನಿಂತಳು. ಮೇಲಿನಿಂದ ಕೆಳಗಿನವರೆಗೂ ತನ್ನ ಪ್ರತಿಬಿಂಬವನ್ನು ನೋಡಿದಳು. ಪ್ರತಿಬಿಂಬ ಮೊಳಕಾಲವರೆಗೆ ಮಾತ್ರ ಕಾಣಿಸುತ್ತಿತ್ತು. ಇದೇನು ಕನ್ನಡಿ ಚಿಕ್ಕದಾಗಿದೆಯೋ! ಅನ್ನಿಸಿತು. ದಿನವೂ ನೋಡುತ್ತಿರುವ ಕನ್ನಡಿ ದಿನವೂ ಶೃಂಗಾರವಾಗಲು ಸಹಾಯ ಮಾಡುವ ತನ್ನ ನೆಚ್ಚಿನ ಸಂಗಾತಿ ತನ್ನೊಡನೆಯೇ ಹಗಲೂ ರಾತ್ರಿ ಇರುವ ವಸ್ತು. ಅದರಲ್ಲಿ ಯಾವ ವಿಧವಾದ ಬದಲಾವಣೆಯೂ ಆಗಲು ಸಾಧ್ಯ ವಿಲ್ಲ. ಹೋದರೆ ಹೊಡೆದುಹೋಗಬೇಕು. ಇಲ್ಲದಿದ್ದರೆ ಜಡವಸ್ತು ತಾನಾಗಿ ತನ್ನ ಆಕಾರ, ಗಾತ್ರಗಳಲ್ಲಿ ಯಾವ ಬದಲಾವಣೆಯನ್ನು ತಾನಾಗಿಯೇ ಹೊಂದಲು ಅಶಕ್ತವಾದದ್ದು. ಇದನ್ನು ಅವಳೂ ಕಂಡಿದ್ದಾಳೆ. ಬರೆಯುವ ಸೀಸದಕಡ್ಡಿ, ಓದುವ ಪುಸ್ತಕ, ತಾನಿದ್ದ ರೂಮು, ಗೋಡೆಗೆ ತಗುಲಿ ಹಾಕಿದ್ದ ಫೋಟೊ ಒಂದೂ ಆಕಾರವನ್ನು ಬದಲಾಯಿಸಿರಲಿಲ್ಲ. ಚಿಕ್ಕ ಮಗುವಾಗಿದ್ದಾಗಿನಿಂದಲೂ ಅದನ್ನು ಅದೇ ಆಕಾರದಲ್ಲಿ ನೋಡುತ್ತ ಬಂದಿ ದ್ದಾಳೆ. ಆದರೆ ಈ ನಿಯಮಕ್ಕೆ ವ್ಯತಿರಿಕ್ತವಾಗಿ ನಡೆದಂತೆ ಅನೇಕಬಾರಿ ಆಕೆಗೆ ಕಂಡಿತ್ತು. ಬರೆಯುವ ಮೇಜು, ಮಲಗುವ ಮಂಚ ಮೊದಲಿಗಿಂತ ಎತ್ತರ ಕುಗ್ಗಿದ್ದವು. ಒಂದು ಕಾಲದಲ್ಲಿ ಎಗರಿ ಹತ್ತಿ ಕುಳಿತುಕೊಳ್ಳು ತ್ತಿದ್ದಳು. ಇಂದು ಸರಾಗವಾಗಿ ಅದರ ಮೇಲೆ ಕುಳಿತುಕೊಳ್ಳುತ್ತಾಳೆ.

'ತನ್ನಲ್ಲಿಯೇ ಬದಲಾವಣೆಯಾಗಿದೆಯೇ?' ಶಂಕೆ ಬಂದಾಗ ಕಂಪಿ ಸಿದಳು ಅವೇವೇಳೆಗೆ ನಿನ್ನೆ ದಿನ ರಮಾದೇವಮ್ಮ ಹೇಳಿದ್ದ ಮಾತೂ ಜ್ಞಾಪಕಕ್ಕೆ ಬಂತು. ಯಾವಾಗಲೂ ತನ್ನ ಬೆಳವಣಿಗೆಯ ವಿಷಯವಾಗಿ ಅವಳು ಯೋಚಿಸದೆ ಇದ್ದರೂ ತಾನು ಬೆಳೆದೇ ಇರಬೇಕೆಂಬ ಅನುಮಾನ ಮೊನ್ನೆ ನವರಾತ್ರಿಯೇ ಬಂದಿತ್ತು. ಎರಡು ವರ್ಷಗಳ ಕೆಳಗೆ ನವ ರಾತ್ರಿಗೆ ಮೈಸೂರಿಗೆ ಹೋಗಬೇಕೆಂದು ಹೊಲೆಸಿದ್ದ ಸಿಲ್ಕಿನ ಲಂಗ ಮೊಳ

ಕಾಲಮೇಲೆ ನಿಂತು ಅವಳನ್ನು ಕೆಣಕಿತ್ತು. ಅಂದು ಅವಸರವಾಗಿ ಹೊರಗೆ ಹೊರಟಿದ್ದ ಇವಳಿಗೆ ಸಿಟ್ಟೇನೊ ಬಹಳವಾಗಿ ಬಂದಿತ್ತು. "ಹಾಳು ಲಂಗ ಶ್ರಿಂಕ್ ಆಗಿ ಹೋಯ್ತು. ಒಳ್ಳೆ ಸಿಲ್ಕು ಅಂತ ಕೊಟ್ಟ ಆ ಶೆಟ್ಟಿ. ಅಣ್ಣನ ನೆಚ್ಚಿನ ಅಂಗಡಿಯೋರೆಲ್ಲಾ ಇಷ್ಟೆ. ಬೇರೆ ಅಂಗಡಿಯಲ್ಲಿ ತಗ್ಗೊಣಾ ಅಂದ್ರೆ ಕೇಳಲಿಲ್ಲ." ತಾನೇ ರೇಗಾಡಿದ್ದಳು

"ಅಡಕೆ ಮರ ಬೆಳದಾಗೆ ದಿನದಿನಕ್ಕೂ ನೀನು ಬೆಳೀತೀರು ಪಾಪ ಅಂಗಡಿಯವನ್ನಅನ್ನು" ಅಜ್ಜಿ ಗದರಿಸಿದ್ದರು.

ಕನ್ನಡಿ ಮುಂದೆ ಕತ್ತೆತ್ತಿ ಪ್ರತಿಬಿಂಬವನ್ನು ಸಾಂಗವಾಗಿ ನೋಡಿದಳು. ತನ್ನಲ್ಲಿ ಬದಲಾವಣೆಯಾಗಿದೆ ಎಂಬುದು ಈಗ ಅವಳಿಗೆ ಧೃಡಪಟ್ಟಿತು. ತಾನೇ ಕೈಯಾರ ಹಾಕಿದ ಗಿಡ ಮರವಾಗಿರಬೇಕಾದರೆ ತನ್ನಲ್ಲೂ ಬದಲಾವಣೆ ಯಾಗಿದೆ ಎಂಬುದನ್ನು ಅಳೆಯುವ ರೀತಿಯಲ್ಲಿ ನಿಂತು ತನ್ನನ್ನೆ ತಾನು ನೋಡಿಕೊಂಡಳು. ಕನ್ನಡಿಯಲ್ಲಿ ಪ್ರತಿಬಿಂಬವನ್ನು ದಿಟ್ಟಿಸಿದಳು. ಹಿಂದಿನ ತನ್ನ ಪುಟ್ಟ ತಲೆ ಸ್ವಲ್ಪ ದಪ್ಪನಾಗಿರುವಂತೆ ಕಂಡಿತು. ಹೌದು. ಮೊದಲು ಕನ್ನಡಿಯಲ್ಲಿ ಅವಳ ತಲೆ ಸಣ್ಣಗೆ ಕಾಣುತ್ತಿತ್ತು. ತನ್ನ ಸಂಪೂರ್ಣ ದೇಹ ವೆಲ್ಲಾ ಅದರಲ್ಲೆ ಅಡಕವಾಗಿ ಕಾಣುತ್ತಿತ್ತು. ಈಗ ಕಾಣುತ್ತಿಲ್ಲ. ಮುಖ ದುಂಡಗೆ ಮುದ್ದಾಗಿ ಬೆಳ್ಳಗೆ ಹೊಳೆಯುತ್ತಿದೆ. ಕಾಮನಬಿಲ್ಲಿನಂತೆ ನಯ ವಾಗಿ ಬಗ್ಗಿದ ಹುಬ್ಬಿನ ಕೆಳಗಡೆ ಮೀನಿನಂತೆ ಚಂಚಲವಾಗಿ ನಗುತ್ತಿವೆ ಕಣ್ಣುಗಳು. ದುಂಡು ಮುಖಕ್ಕೆ ಚೆನ್ನಾಗಿ ಒಪ್ಪುವ ಆ ಸಣ್ಣ ಮೂಗು ಅವಳ ಮುಖಕ್ಕೆ ಇಟ್ಟ ಮೂಗತಿಯಾಗಿ ಕಂಡಿತು. ಸಣ್ಣ ಬಾಯಲ್ಲಿನ ತೆಳವು ತುಟಿಗಳು ಆನಂದದಿಂದ ಅಲುಗಾಡಿದಾಗ ಗಂಭೀರ ಸರೋವರದಲ್ಲಿನ ತೆಳು ತೆರೆಯೊಂದು ಒಮ್ಮೆ ಹಾದುಹೋದ ಹಾಗೆ ಕಾಣುತ್ತಿತ್ತು; ವಜ್ರದ ಬೆಂಡೋಲೆ ತುಂಬಿದ್ದ ಕೆನ್ನೆಯನ್ನು ಬೆಳಗಿತ್ತು. ಹಾಗೆ ಇನ್ನು ನೋಡಿದಳು. ತಾನೇ ಎಂದೂ ಕಾಣದ ಯಾವುದೊ ಅಪ್ರತಿಮ ಸೌಂದರ್ಯ ಇಂದು ತೆರೆ ಯಿಂದ ಹೊರಗೆ ಬಂದ ಹಾಗೆ ಕಾಣಿಸಿತು. ಚೆಲುವು ಮುಖ ಕನ್ನಡಿಯಲ್ಲಿ ಹೊಳೆಯುತ್ತಿತ್ತು. ತನ್ನ ಸೌಂದರ್ಯ ಕಂಡು ತಾನೇ ಹಿಗ್ಗಿದಳು. ಹಾಗೆ, ಹೀಗೆ ಅತ್ತ ಇತ್ತ ವಾಲಿ, ಬಗ್ಗಿ ತನ್ನ ತನ್ನ ಮೈಯ ಸೌಂದರ್ಯವನ್ನು ನೋಡಿ ಕೊಂಡಳು. ಹೌದು ಪೂರ್ಣ ಬದಲಾವಣೆಯಾಗಿದೆ. ನೀಳವಾಗಿ ಬೆಳ ದಿದ್ದ ಕೂದಲು ಸೊಂಟದ ಮಟ್ಟದಲ್ಲಿ ಕುಚ್ಚಿನಿಂದ ಬಂಧಿತವಾಗಿ ಅವಳನ್ನು ಸ್ವೇಚ್ಛೆಯಾಗಿ ಬಳಸುತ್ತ ವಿಚ್ಛಂದವಾಗಿ ವಿಹರಿಸುತ್ತಿದೆ. ಕೈ ತೋಳುಗಳೂ ಸ್ವಲ್ಪ ಊದಿವೆ. ಕತ್ತು, ಎದೆ ಎಲ್ಲಕ್ಕೂ ನಿಜವಾಗಿಯೂ ವಸಂತ ಬಂದಿದೆ.

ತಾನು ಇಷ್ಟು ಸುಂದರಳೆಂಬ ಹೆಮ್ಮೆ ಎಂದೂ ಅವಳಿಗೆ ಬಂದಿರಲಿಲ್ಲ. ಹಲವರು ಏನೊ "ಶಕುಂತಲಾ ...ನೀನು ಬಹಳ ಸುಂದರಿ ಕಣೆ" ಎಂದು ನುಡಿದಿದ್ದರು. ಆದರೆ ಎಂದೂ ಅದನ್ನು ಮೆಲಕು ಹಾಕಿರಲಿಲ್ಲ.

ಹೊಸ ಭಾವದ ಉನ್ಮಾದದಲ್ಲಿ ಸಂತೋಷದಿಂದ ಉನ್ಮತ್ತಳಂತಾಗಿ ಮಂಚದ ಮೇಲೆ ಉರಳಿದಳು. ಮನಸ್ಸು ಸ್ಥಿಮಿತಕ್ಕೆ ಬರಲಿಲ್ಲ. ಪುನಃ ಕನ್ನಡಿಯ ಮುಂದೆ ಬಂದು ನಿಂತಳು. ರಾತ್ರಿ ಸ್ನೇಹಿತೆ ಗಿರಜೆಯ ತಂಗಿಯ ಹುಟ್ಟಿದ ಹಬ್ಬಕ್ಕೆ ಅರಿಶಿನ ಕುಂಕುಮಕ್ಕೆ ಹೋಗಿ ಬಂದ ಶಕುಂತಲೆ ಉಟ್ಟ ಹೊಸ ಸೀರೆಯನ್ನು ಬಿಚ್ಚದೆ ಹಾಗೆಯೇ ಮಲಗಿದಳು. ರಾತ್ರಿ ತಾನು ಉಟ್ಟಿದ್ದ ನೀಲಿಯ ಜಾರ್ಜೆಟ್ಟು ಸೀರೆ ಅವಳ ಆಕೃತಿಯನ್ನು ಸಂಪೂರ್ಣವಾಗಿ ಸುತ್ತಿ ನಿಂತಿತ್ತು. ಸೀರೆಯೇ ತನ್ನ ದೇಹಕ್ಕೆ ಹೆಚ್ಚು ಒಪ್ಪೆಂದು ತೀರ್ಮಾನಿಸಿದಳು. ಸೀರೆಯ ಸೆರಗು....ಅಂಚು ತನ್ನ ನೀಳ ನಿಲುವು ಎಲ್ಲವೂ ಬಹು ಚೆನ್ನ. ತನ್ನ ದೇಹಕ್ಕೆ ನೇಯ್ದ ಸೀರೆ ಅದು! ಅದಕ್ಕೆ ಅಷ್ಟು ಬಿಗಿಯಾಗಿ ಅಪ್ಪಿಕೊಂಡಿದೆ. ಅಂದುಕೊಂಡಾಗ ತುಟಿ ತೆರೆದು ಲಘು ನಗುವೊಂದು ಹಾಯ್ದು ಹೋಯಿತು. ತುಟಿಗಳು ಅರಳಿದಾಗ ಕಣ್ಣು ಮಿಂಚಿತ್ತು.

ರಾತ್ರಿ ನಿದ್ದೆಯಿಂದ ಅಸ್ತವ್ಯಸ್ತವಾಗಿದ್ದ ಮುಂಗುರಳನ್ನು ದಂತದ ಬಾಚಣಗೆಯಿಂದ ಹಿಂದೆ ಸರಿಸಿದಳು. ಪ್ರಫುಲ್ಲವಾಗಿ ಅರಳಿದ್ದ ತನ್ನ ಮುಖಕ್ಕೆ ನಿಜಬಣ್ಣ ಸಾಲದೆಂದು ಸ್ವಲ್ಪ ಪೌಡರನ್ನು ಹಚ್ಚಿದಳು. ಸೀರೆಯ ಸೆರಗನ್ನು ಸರಿಪಡಿಸಿಕೊಂಡಳು. ಏಕೊ ಸಮಾಧಾನವಾಗಲಿಲ್ಲ. ತನ್ನ ಮೊದಲಿನ ಮುಖವೇ ಹೆಚ್ಚು ಮೆಚ್ಚಿಗೆಯಾಗಿ ಕಂಡಿರಬೇಕು. ಅದಕ್ಕೆ ಬೆರಳಿನಿಂದ ಪುನಃ ಕೂದಲನ್ನು ಹಣೆಯ ಮೇಲೆ ಸರಿದಾಡುವಂತೆ ಮಾಡಿಕೊಂಡಳು. ಇದೇ ಹೆಚ್ಚು ಚೆನ್ನೆಂದು ಕಾಣಿಸಿತು. ಮುಖಕ್ಕೆ ಹಚ್ಚಿದ್ದ ಪೌಡರನ್ನು ವರಸಿಹಾಕುತ್ತಿದ್ದಳೋ ಏನೋ ಅಷ್ಟರಲ್ಲಿ ಹೊರಗಿನಿಂದ ಅವರ ತಾಯಿ ಕೂಗಿದಳು.

"ಎದ್ದೋಳು ಏನು ಮಾಡ್ತಾ ಇದ್ದೀಯೇ....ಕಾಫಿ ಆರಿಹೊಯ್ತು ಬರ್ತೀಯೊ ಇಲ್ವೊ?"

"ಬಾರೆ ಶಕುಂತಲ" ತಂದೆಯೂ ಧ್ವನಿಗೂಡಿಸಿದರು.

ಶಕುಂತಲ ಅಡಿಗೆ ಮನೆಗೆ ಓಡಿಹೋದಳು.

"ಇದೇನೆ ಶಕುಂತಲ. ಇವತ್ತು ಏಳೋ ಹೊತ್ಗೆ ನಗ್ತಾ ನಗ್ತಾ ಇದ್ದೀಯಲ್ಲ" ತಂದೆ ಮಗಳ ಕೈಯನ್ನು ಹಿಡಿದು ಹತ್ತಿರ ಕೂಡಿಸಿಕೊಂಡರು.

"ಏನೆ ಬೆಳಗಾಗ ಎದ್ದೋಳೆ ಬೂದಿ ಬಳ್ದು ಕೊಂಡು ಬಿಟ್ಟೆ....ಕಲ್ತೆ ನೀನೂ ಪರವಾಗಿಲ್ಲ. ಲಲಿತ ನಿಂಗೂ ಹೇಳಿ ಕೊಟ್ಲು ಅಂತ ಕಾಣುತ್ತೆ." ಅಜ್ಜಿ ಸಾವಿತ್ರಮ್ಮ ಮೂದಲಿಸಿದರೂ ಅಭಿಮಾನ ತುಳುಕುತ್ತಿತ್ತು.

"ಮದ್ವೆ ಆಗೋ ವಯಸ್ಸು. ಯಾವಾಗ ಗಂಡ ತನ್ನ ನೋಡೋಕೆ ಬರ್ತಾನೊ ಏನೊ ...ಅದಕ್ಕೆ ಯಾವಾಗ಼್ಲೂ ಶೃಂಗಾರ ಆಗಿರೋಣ ಅಂತ ಅಲ್ವೇನೆ ?" ತಂದೆ ನಗೆಯಾಡಿದರು.

"ಹೋಗಿ ಅಣ್ಣ....ನಿಮ್ಗೆ ಯಾವಾಗ್ಲೂ ಇದೇ ಯೋಚ್ನೆ" ಕಾಫಿ ಬಿಸಿಯಾಗಿದ್ದರೂ ಒಂದೇ ಗುಟುಕಿಗೆ ಕುಡಿಯಲು ಪ್ರಯತ್ನಿಸಿದಳು. ತಂದೆಯ ಮಾತಿನಲ್ಲಿ ಇಂದು ಆಕೆಗೆ ಬೇಸರ ಬಂದಿರಲಿಲ್ಲ.

"ನಿಧಾನವಾಗಿ ಕುಡ್ಯೆ ಗಂಟಲು ಸುಟ್ಟು ಹೋದೀತು ನಿನ್ನ ನಾಚ್ಕೆ ತೋರಿಸೋದ್ರಲ್ಲಿ ?" ಸಾವಿತ್ರಮ್ಮ ನುಡಿದು ಪ್ಟೈ ತೊಳೆಯಲು ಬಚ್ಚಲ ಮನೆಯ ಕಡೆಗೆ ಸಾಗಿದರು.

"ಹಾಗಾದ್ರೆ ಮದ್ವೆ ಬೇಕಿಲ್ಲ ಅನ್ನು ನಿಂಗೆ..." ಬೇಕೆಂದೆ ಅವಳನ್ನು ಕೆಣಕಿದರು ತಂದೆ. "ನಂಗೆ ಬೇಕಿಲ್ಲ ಅಂತ ಒಂದು ದಿನ ಅಲ್ವೇನಣ್ಣ ಹೇಳೋದು ..." ಎದ್ದು ಹೊರಗೆ ಹೋದಳು. "ಗೋಪಾಲನ್ನ ?" ತಾಯಿ ಪ್ರಶ್ನಿಸಿದರು. ಶಕುಂತಲ ತನ್ನ ಕೊಠಡಿಗೆ ಹೋಗಿ ಮಂಚದ ಮೇಲೆ ಉರುಳಿ ಸ್ವಲ್ಪ ಹೊತ್ತು ಹುಸಿಯಾಗಿ ನಗುತ್ತಲೇ ಇದ್ದಳು.

ಮದುವೆ ಬೇಡವೆ ತನಗೆ ...!? ತನ್ನ ಸುಂದರ ರೂಪನ್ನು ಮೆಚ್ಚುವ ಗಂಡ ಬೇಡವೆ ?

"ಮದ್ವೆ... ! ಥೂ ...ನಾನು ಮದ್ವೆ ಆಗೂಲ್ಲ...." ಹೇಳುತ್ತಿದ್ದ ಪ್ರಭಾ ಮದುವೆಯಾಗಿದ್ದಳು. "ಸಂಸಾರ ಸುಖಾ....ಬಹಳ ಚೆನ್ನ....ಶಕುಂತಲ...." ಅವಳೇ ಮೊನ್ನೆ ನುಡಿದಿದ್ದಳು. ಸಂಸಾರ ಸುಖ....??!

ಮದುವೆ....?!

ಇವುಗಳ ಸಂಬಂಧ ಅರ್ಥವಾಗಲಿಲ್ಲ.

ಅಂದು ಶಕುಂತಲ ಪ್ರಭಾಳ ಮನೆಗೆ ಹೋಗಿದ್ದಾಗ ಪ್ರಭಾಳ ಗಂಡ ಹೆಂಡತಿಯ ಕೆನ್ನೆಗೆ ತನ್ನ ತುಟಿಯನ್ನು ಅಂಟಿಸಿದ್ದ.

ಅಂದು ಪ್ರಭಾಳ ಮುಖ ಊರಗಲವಾಗಿತ್ತು. ತನ್ನನ್ನು ಕಂಡು ಒಂದು ಹಿಡಿಯಾಗಿದ್ದಳು. ಕಾರಣ....?

ಸುಖ ...?!

ಇದೇನೆ....??

ಶಕುಂತಲ ತಲೆದಿಂಬಿನಲ್ಲಿ ಮುಖವನ್ನು ಹುದಗಿಸಿ ಕಿಲಕಿಲನೆ ನಕ್ಕು ಬಿಟ್ಟಳು. ಉತ್ತರ ಹೊಳೆದಿತ್ತೊ ಏನೊ?

* * * *

ಗೋಡೆಯ ಮೇಲಿನ ಗಡಿಯಾರ ಹತ್ತೂವರೆ ಗಂಟೆಯನ್ನು ತೋರಿಸುತ್ತಿದ್ದರೂ ಶಕುಂತಲ ಇನ್ನೂ ತನ್ನ ಶೃಂಗಾರದಲ್ಲೆ ತನ್ಮಯಳಾಗಿದ್ದಳು, ಪಕ್ಕದಮನೆ ಲಲಿತೆ ಬಂದು ಕರೆದು ಇವಳು ಇನ್ನೂ ಸಿದ್ಧವಾಗಿಲ್ಲವೆಂದು ತಿಳಿದು ಹೊರಟು ಹೋಗಿದ್ದಳು. ಅಂತೂ ಕೊನೆಗೆ ಇವಳು ತನ್ನ ಅಲಂಕಾರವನ್ನು ಮುಗಿಸಿ ಜೋರು ಜೋರಾಗಿ ಹೆಜ್ಜೆ ಹಾಕಿ ತನ್ನ ಕ್ಲಾಸನ್ನು ತಲುಪುವ ಹೊತ್ತಿಗೆ ಮೇಡಂ ಆಗಲೇ ಕ್ಲಾಸಿಗೆ ಬಂದು ಹಾಜರಿಯನ್ನು ಮುಗಿಸಿದ್ದರು. ಅನುಮಾನಿಸಿ, ಅನುಮಾನಿಸಿ ಹೋಗಿ ಬಾಗಿಲಲ್ಲಿ ನಿಂತಳು. ಒಳಗಿದ್ದ ಹುಡುಗಿಯರೆಲ್ಲಾ ಶೃಂಗಾರಮಾಡಿಕೊಂಡು ನಿಂತಿದ್ದ ಇವಳನ್ನು ನೋಡಿ ಘೊಳ್ಳೆಂದು ನಕ್ಕರು. ಎಂದು ಇವಳು ಶಾಲೆಗೆ ಹೊತ್ತಾಗಿ ಬಂದುದಿಲ್ಲ. ಮೇಡಂ ರೇಗಬಹುದೆಂದು ಭಯದಿಂದ ನಡುಗುತ್ತಿದ್ದಳು. ಹಣೆಯ ಮೇಲೆ, ಮೂಗಿನ ಮೇಲೆ ಬೆವರಿನ ಮುತ್ತಿನ ಮಣಿಗಳು ಮಿಣಗುತ್ತಿದ್ದವು. ಮೇಡಂ ಒಂದು ನಿಮಿಷ ಇವಳನ್ನು ದಿಟ್ಟಿಸಿ ನೋಡಿ ಒಳಗೆ ಬರಲು ಅನುಮತಿ ಕೊಟ್ಟರು. ತನ್ನ ಜಾಗದಲ್ಲಿ ಹೋಗಿ ಕುಳಿತು ಪಾಠವನ್ನು ಕೇಳುವ ಸ್ಥಿತಿಗೆ ಬರಬೇಕಾದರೆ ಮತ್ತೆ ಹತ್ತು ನಿಮಿಷ ಹಿಡಿಯಿತು. ರಸಾಯನ ಶಾಸ್ತ್ರದಲ್ಲಿ ಕ್ಲೋರಿನ್‌ನ ಗುಣಗಳನ್ನು ವಿವರಿಸಿ ಪ್ರಯೋಗದ ಮೂಲಕ ತೋರಿಸುತ್ತಿದ್ದರು. ಶಕುಂತಲೆಗೆ ಎಂದೂ ವಿಜ್ಞಾನದಲ್ಲಿ ಆಸಕ್ತಿ ಇರಲಿಲ್ಲ. ಇಂದಂತೂ ಯಾವುದರಲ್ಲೂ ಅವಳ ಮನಸ್ಸು ನಿಲ್ಲದು. ಮನಸ್ಸನ್ನು ಸ್ಥಿಮಿತಕ್ಕೆ ತರಲು ಬಹಳ ಪ್ರಯತ್ನಿಸಿದಳು. ಹೊಸ ಭಾವನೆಗಳ ಉಬ್ಬರ ಅತಿಯಾಗಿತ್ತು. ಅಂತೂ ಬೆವರನ್ನು ಒರಸಿಕೊಳ್ಳುವುದರಲ್ಲೆ ಆ ಕ್ಲಾಸಿನ ಬೆಲ್ಲು ಹೊಡೆಯಿತು. ಶಕುಂತಲೆಯೂ ಇದನ್ನೇ ಕಾಯುತ್ತಿದ್ದಳು. ಮುಂದಿನ ಎರಡು ಪೀರಿಯಡ್‌ಗಳೂ ತರಗತಿಯಿರಲಿಲ್ಲ. ಅಂದರೆ ಕೆಮಿಸ್ಟ್ರಿ ಪ್ರಾಕ್ಟಿಕಲ್ ಅದು ಎಂದೂ ನಡೆದುದಿಲ್ಲ. ಪರೀಕ್ಷೆ ಹತ್ತಿರ ಬಂದಾಗ ಕೆಲವು ಉಪಾಧ್ಯಾಯಿನಿಯರು ಅದನ್ನು ತಮ್ಮ ಪಾಠಕ್ಕೆ ಉಪಯೋಗಿಸಿಕೊಳ್ಳುತ್ತಾರೆ. ಉಳಿದ ವೇಳೆ ವಿರಾಮ.

“ಸಧ್ಯಕ್ಕೆ ಮುಗೀತು. ಈ ಹಾಳು ಸೈನ್ಸ್ ಯಾರಿಗೆ ಬೇಕಾಗಿದೆ.... ನಮ್ಮನ್ನ ಸುಮ್ನೆ ಗೋಳು ಹುಯ್ಕೊಳ್ತಾರೆ” ಎದ್ದು ನಿಂತು ಜೋರಾಗಿ ನುಡಿದಳು.

" ಏನು ಆರ್ಥೊಡಾಕ್ಸ್‌ರವರು ಹೇಳ್ತಾ ಇದ್ದರಲ್ಲ...." ಗ್ರೇಸ್ ಲೀಲಾವತಿ ಡೆಸ್ಕಿನ ಮರೆಯಿಂದ ಹೊರಗೆ ಬಂದು ಕಾಳಗದಲ್ಲಿ ಸಿಪಾಯಿ ನಿಲ್ಲುವ ಠೀವಿಯಲ್ಲಿ ನಿಂತಳು. " ಏನಂತೆ ಶಕುಂತಲ ಸೈನ್ಸ್ ಹಾಳೆ?" ಪ್ರಶ್ನಿಸಿದಳು.

" ಅವಳಿಗೆ ಸೈನ್ಸ್ ಹಾಳು. ವಿದ್ಯೆ ತಿರುಳಿಲ್ಲದ್ದು. ಹೇಳಿಕೊಡೋರ ತಲೇಲಿ ತುಂಬಿರೋದು ಜೇಡಿಮಣ್ಣು. ಓದ್ತಾ ಇರೋರಿಗೆ ಬುದ್ಧಿಯಿಲ್ಲ.... ಅಲ್ವೇನೆ ಶಕುಂತಲ" ಕ್ಲಾಸಿನ ಮಾನೀಟರ್ ವನಜಾಕ್ಷಿ ಮುಂದೆ ಬಂದು ಕೆಣಕಿದಳು.

" ಸೈನ್ಸ್ ಹಾಳು ಕೆಲ್ಸಕ್ಕೆ ಬಾರದ್ದು ಅಂತ ನಾನು ಹೇಳಿಲ್ಲ." ಶಕುಂತಲ ನುಡಿದಳು.

" ಇವತ್ತು ತನಗೆ ಸೋಲು ಗ್ಯಾರಂಟಿ ಅಂತ ಹೊರಳಿಕೊಳ್ತಾ ಇದ್ದಾಳೆ ..." ಲಲಿತ ನಗೆಯಾಡಿದಳು.

"ನಾನು ಹೇಳಿದ್ದು ನಿಮ್ಗೆ ಹೇಳಿಕೊಡೊ ವಿಜ್ಞಾನ ಕೆಲ್ಸಕ್ಕೆ ಬಾರದ್ದು. ನಮ್ಮಲ್ಲಿ ನೂರಕ್ಕೆ ೯೯.೯ ಜನ ಮೇಡಂ ಕ್ಯೂರಿ ಆಗೊಲ್ಲ. ಈ ಹಾಳು ಸೈನ್ಸ್‌ನ್ನ ನಿತ್ಯಜೀವನದಲ್ಲಿ ಒಮ್ಮೆಯೂ ಉಪಯೋಗಿಸಲ್ಲ. ನಮ್ಮ ಸಂಸ್ಕೃತಿ ನಮ್ಮ ಮನೋಭಾವಕ್ಕೆ ಹೊಂದಿಕೊಳ್ಳುವ ವಿದ್ಯ ಬೇಕು. ಈ ವಿದ್ಯೆಯಿಂದ ಭೌತಿಕ ಬೆಳವಣಿಗೆಯೂ ಇಲ್ಲ. ನೈತಿಕ ಉತ್ಥಾನವೂ ಸಾಧಿಸದು. ಸುಮ್ಮನೆ ಪರೀಕ್ಷೆಗೋಸ್ಕರ ಉರುಹೊಡೆಯೋದು ವಿದ್ಯೆಯಲ್ಲ. ವಿದ್ಯೆಯ ಪರಿಣಾಮ ಜೀವನದಲ್ಲಿ ಸಂಪೂರ್ಣವಾಗಿ ಆಗಬೇಕು. ವಿದ್ಯ ಕಲಿತಮೇಲೆ ಮನಸ್ಸಿಗೆ ತೃಪ್ತಿಯನ್ನು ಕೊಡಬೇಕು. ಐಹಿಕ ಸುಖಶಾಂತಿಯನ್ನು ಕೂಡಬೇಕು. ಅದು ವಿದ್ಯೆ ಇದು ವಿದ್ಯೆಯಲ್ಲ .. " ಶಕುಂತಲೆಗೆ ಭಾವಾವೇಶ ಬಂದಂತಿತ್ತು.

" ಹೂಂ ನಡೀಲಿ ಮುಂದೆ ಭಾಷಣ ಚೆನ್ನಾಗಿದೆ " ಯಾರೊ ನುಡಿದರು.

" ಕಲಿತ ವಿದ್ಯೆ ಆಜೀವಪರ್ಯಂತ ಕಿರುದೀವಿಗೆಯಾಗಿ ತಾವು ಆರಿಸಿಕೊಂಡ ಜೀವನ ಮಾರ್ಗದಲ್ಲಿ ಬೆಳಗುತ್ತಿರಬೇಕು. ನಮಗೆ ಹೇಳಿಕೊಡುವ ಈ ಆಮ್ಲಜನಕ, ಜಲಜನಕ, ಕ್ಲೋರಿನ್ ಗುಣಗಳನ್ನು ಅರಿತು ನಾವು ಅಡಿಗೆ ಮಾಡುವಾಗ ಉಪಯೋಗಿಸುವುದಿಲ್ಲ. ಬೀಜಗಣಿತದ ಅತಿಕಷ್ಟ ಲೆಕ್ಕವೂ ನಮ್ಮ ಹೆಣ್ಣು ಜೀವನದಲ್ಲಿ ಒಮ್ಮೆಯೂ ಉಪಯೋಗಕ್ಕೆ ಬರುವುದಿಲ್ಲ. ಅಂಗಡಿಯಿಂದ ಸಾಮಾನನ್ನು ತರಿಸುವಾಗಲಾಗಲಿ, ಹಾಲು ಮೊಸರಿನವರಿಗೆ ದುಡ್ಡನ್ನು ಕೊಡುವಾಗಲಾಗಲಿ ಎಂದೂ ಇದನ್ನು ಉಪಯೋಗಿಸಿ

ಲೆಖ್ಖಾಚಾರ ಮಾಡುವುದಿಲ್ಲ ..." ಸ್ವಲ್ಪ ನಿಲ್ಲಿಸಿದಳು ಶಕುಂತಲ.

" ಹಾಗಾದ್ರೆ ಇನ್ನು ಯಾವ ವಿದ್ಯೆ ಬೇಕು ಸುಧಾರಕರಿಗೆ .. ?" ವ್ಯಂಗ ವಾಗಿ ನಕ್ಕು ಪ್ರಶ್ನಿಸಿದಳು ವನಜ.

" ನಮಗೆ ಬೇಕಾದ್ದು ಸಾಂಸ್ಕೃತಿಕ ವಿದ್ಯೆ. ಲಲಿತಕಲೆ ಚಿತ್ರಕಲೆ, ಗೃಹವಿಜ್ಞಾನ. ಸಂಗೀತ, ವ್ಯವಹಾರಜ್ಞಾನ, ಶಿಶುಪಾಲನೆ...." ಎಲ್ಲರೂ ಜೋರಾಗಿ ನಕ್ಕರು. " ಶಕುಂತಲಳಿಗೆ ಮುಖ್ಯವಾಗಿ ಮಗು ಸಾಕೋ ವಿದ್ಯೆ ಬೇಕು....ಶಿಶುಪಾಲನೆ....!" ಗಹಗಹಿಸಿದಳು ಗ್ರೇಸ್ ಲೀಲಾವತಿ.

" ಗಂಡನನ್ನು ಸಾಕಾಣುವಿಕೆ....? ಇದು ಹೇಳಿ ಕೊಡೋದು ಬೇಡ್ವೇನೆ?" ಕ್ಲಾಸಿಗೆ ಹಿರಿಯವಳಾದ ಚಂಚಲಕುಮಾರಿ ಪ್ರಶ್ನಿಸಿ ಕೇಕೆ ಹಾಕಿ ನಕ್ಕಳು.

" ಅದನ್ನು ಕಲ್ಸಬೇಕು ನಿನ್ನಂತವರಿಗೆ ..." ನೇರವಾಗಿಯೇ ನುಡಿದು ಬಿಟ್ಟಳು.

ಅವಳು ರೇಗಾಡಿದಳು.

ಉಳಿದವರು ಜೋರಾಗಿ ನಕ್ಕರು.

ಕೆಲವರು ಸಮಾಧಾನ ಮಾಡಿದರು.

" ಹೂಂ....ಹೇಳಿ ಶಕುಂತಲ....ನಿನ್ನ ಮಾತು ನನ್ಗೆ ಒಪ್ಗೆಯಾಯ್ತು ...." ಶಾರದ ನಡಿದಳು.

" ನಾವು ನಾವಾಗಿಯೇ ಉಳಿಯಲು ನಮ್ಮದೇ ಆದ ವಿದ್ಯೆ ಬೇಕು. ಹೆಣ್ಣು ಬಾಳಿಗೆ ಹೊಂದುವ ಉಪಯೋಗಕಾರಿ ವಿದ್ಯೆ ಬೇಕು. ಸ್ತ್ರೀ ಸಾಧ್ವಿ ಯಾಗಿ ಬಾಳಿ ಉಳಿಯಲು ಪ್ರಚೋದಿಸುವ ವಿದ್ಯೆ ಬೇಕು."

" ವಿಜ್ಞಾನ ಗಂಡಸರಿಗೆ ಬೇಕಾದಲ್ಲಿ ನಮಗೂ ಬೇಕು. ನಾವು ಹೆಂಗಸರು ಯಾವ ವಿಧದಲ್ಲೂ ಗಂಡಸರಿಗೆ ಕಡಿಮೆಯಿಲ್ಲ. ನಾವು ಅವರಿಗಿಂತ ಕಡಿಮೆ ಎಂದು ತಿಳಿದಿರುವ ಈ ಹಳೆಯ ಭಾವನೆಯೇ ನಮ್ಮನ್ನು ಪಾತಾಳಕ್ಕೆ ತುಳಿಯುತ್ತಿರುವುದು. ಸ್ತ್ರೀ ಎಂದರೆ ಸಮಾಜದಲ್ಲಿ ಸ್ವಲ್ಪವೂ ಗೌರವವಿಲ್ಲ. ಅಭಿಮಾನವಿಲ್ಲ. ಇನ್ನು ಇದೇ ರೀತಿ ಬಿಟ್ಟರೆ ಪೂರ್ಣ ತುಳಿದುಬಿಡ್ತಾರೆ" ಕ್ಲಾಸು ಡಿಬೇಟಿನಲ್ಲಿ ಇದೇ ವಿಷಯದಲ್ಲಿ ಮಾತನಾಡಿ ಬಹುಮಾನ ತೆಗೆದುಕೊಂಡಿದ್ದ ಮೀನಾಕ್ಷಿ ನುಡಿದಳು.

" ಆದ್ದರಿಂದ ಗಂಡಸರು ಕಲಿಯುವ ಯಾವ ವಿದ್ಯೆಯನ್ನು ನಾವು ಕಲಿಯದೆ ಬಿಡಬಾರದು. ಎಲ್ಲವನ್ನು ಕಲಿತ ನಾವು ಅವರಿಗಿಂತ ಹೆಚ್ಚಿಂದು ಸಾಧಿಸಬೇಕೆ ಹೊರತು ಹಿಂದುಳಿಯಬಾರದು. ಸಂಸ್ಕೃತಿ, ಸಮಾಜ.... ಬರಿಯ ಅರ್ಥವಿಲ್ಲದ ಪದ." ಪುನಃ ಮುಂದುವರಿಸಿದಳು.

" ಹೆಂಗಸು ಗಂಡಿಸಿನಿಂದ ಸರ್ವವಿಧದಲ್ಲೂ ಭಿನ್ನವಾದವಳು ಮೀನಾಕ್ಷಿ. ದೇಹ, ಮನಸ್ಸು, ಶಕ್ತಿ, ಯುಕ್ತಿ, ಎಲ್ಲದರಲ್ಲೂ ಸಂಪೂರ್ಣವಾಗಿ ವಿರುದ್ಧ ಳಾದವಳು. ಆದ್ದರಿಂದ ಸಮಾಜದಲ್ಲಿ ನಾವು ನಮ್ಮ ಸ್ಥಾನವನ್ನು ಅರಿತು ನಡೆಯಬೇಕು. ಇಂದಿನ ಕೃತಕ ಆಡಂಬರ ಜೀವನವನ್ನು ಪೂರ್ಣ ನಮ್ಮದೇ ಆಗಿದ್ದ ನಿರಾಡಂಬರ ವ್ಯಾವಹಾರಿಕ ಸಮಾಜದೊಡನೆ ಹೋಲಿಸಿ ನೋಡಿ ಅನುಕರಣೆ ಮಾಡದೆ ನಮ್ಮ ದಾರಿಯನ್ನು ನಾವು ರೂಪಿಸಿಕೊಳ್ಳಬೇಕು. ನಮ್ಮ ಈ ಹುಚ್ಚು ಸ್ವಾತಂತ್ರ ಸಮತಾಪ್ರವೃತ್ತಿ ನಮ್ಮನ್ನು ತುಳಿಯುತ್ತಿರುವ ಕಾಣದ ಶಕ್ತಿ. ಗಂಡಸರ ಗಂಡುಶಕ್ತಿಯಲ್ಲ." ಶಕುಂತಲ ನುಡಿದಳು.

" ಹೆಂಗಸು ಗಂಡಸಿಗೆ ದಾಸಿಯಾಗಿ ಬಾಳಬೇಕೆ"? "ಅವಳಿಗೆ ನಿಜ ವ್ಯಕ್ತಿತ್ವವಿಲ್ಲವೆ ?" "ಸ್ವಾತಂತ್ರ ಪ್ರವೃತ್ತಿ ಹುಚ್ಚೆ ?" "ಸಮಾನತೆ ಬೇಡವೆ ?" ನಾಲ್ಕಾರು ಪ್ರಶ್ನೆಗಳು ಒಟ್ಟಿಗೇ ಬಂದವು.

" ಹಿಂದಿನ ಕಾಲದಲ್ಲಿ ಹೆಂಗಸಿಗೆ ಎಷ್ಟು ಪೂಜನೀಯ ಭಾವನೆ ಯಿತ್ತು. ಅವಳ ಸ್ಥಾನ ಸಮಾಜದಲ್ಲಿ ಎಷ್ಟು ಮಹತ್ತರವಾಗಿತ್ತು. ತಂದೆ ತಾಯಿಗೆ ನಲ್ಮೆಯ ಮಗಳಾಗಿ, ಅಣ್ಣನಿಗೆ ಪ್ರೀತಿಯ ತಂಗಿಯಾಗಿ, ಗಂಡ ನಿಗೆ ಮೆಚ್ಚಿನ ಸಾಧ್ವಿಯಾಗಿ, ಮಕ್ಕಳಿಗೆ ಪೂಜನೀಯ ತಾಯಾಗುವ ಒಂದು ವಿಶಿಷ್ಟ ಶಕ್ತಿಯನ್ನು ಹೆಣ್ಣು ಪಡೆದುಬಂದಿದ್ದಾಳೆ. ಇದನ್ನು ನಾವು ದುರುಪ ಯೋಗ ಪಡಿಸಿಕೊಳ್ಳಬಾರದು. ಇಂದಿನ ಯಂತ್ರ ಯುಗದಲ್ಲೂ ನಮ್ಮ ಸಹೋದರರು ಪೂಜಿಸುತ್ತಿರುವುದು ಹೆಚ್ಚಾಗಿ ಹೆಣ್ಣು ದೇವತೆಗಳನ್ನೆ. ದೇವತೆ ಎಂದರೆ ಮಾತನಾಡಲಾರದ ಕಲ್ಲು ಬೊಂಬೆಯಲ್ಲ ನಾನು ಹೇಳುತ್ತ ಇರುವುದು. ಎಲ್ಲರಂತೆ ಬಾಳಿ ಅಳಿದ, ಆದರ್ಶವ್ಯಕ್ತಿಗಳನ್ನು–ಲಕ್ಷ್ಮಿ, ಸರ ಸ್ವತಿ, ಸೀತೆ, ದಮಯಂತಿ, ಸತಿಸಾವಿತ್ರಿ, ದ್ರೌಪದಿ, ಊರ್ಮಿಳೆ, ಅಹಲ್ಯೆ, ಶಾರದಾದೇವಿ, ಲಕ್ಷ್ಮಿಬಾಯಿ, ಮಹಾದೇವಿಯಕ್ಕ, ಎಷ್ಟುಬೇಕು....ವನ ಜಾಕ್ಷಿ. ನೂರು ಸಾವಿರ ಜನ ಸಿಕ್ಕುತ್ತಾರೆ. ಆದರ್ಶ ಮಹಿಳೆಯರಲ್ಲಿ ಅಡಗಿದ್ದ ಭಾವನೆಗಳನ್ನು ಅರಿತು ಅನುಸರಿಸಿದ ಹೊರತು ನಮಗೆ ಏಳಿಗೆ ಯಿಲ್ಲ. ನಾವು ನಮ್ಮ ಕಾಲುಮೇಲೆ ನಿಲ್ಲಬೇಕಾದರೆ ನಮ್ಮ ಕಾಲ ಕೆಳಗಿನ ರಸವನ್ನೆ ಸೇವಿಸಬೇಕೇ ಹೊರತು ಎಲ್ಲಿಯೊ ಮೂಲೆಯಲ್ಲಿ ಬಿದ್ದಿರುವ ರಾತಿ ಕೆಮಿಕಲ್ ಗೊಬ್ಬರ ನೆನೆದರೆ ಏನು ಸಾರ್ಥಕ" ಶಕುಂತಲ ನುಡಿದಾಗ ಉಳಿದ ಹುಡಗಿಯರೆಲ್ಲಾ ನಿಶ್ಶಬ್ದರಾಗಿದ್ದರು.

" ಪ್ರಗತಿಯ ಪಥದಲ್ಲಿ ನಡೆಯುವುದು ತಪ್ಪೆ" ಸ್ವಲ್ಪಹೊತ್ತು ನೆಲೆ ಸಿದ್ದ ಮೌನವನ್ನು ಮುರಿದಳು ನಿರ್ಮಲ.

“ಗಂಡಸು ನಿರ್ಮಿಸಿದ ಶಾಸ್ತ್ರದ ಸಮಾಜದ ನಿಬಂಧನೆಗಳು ನಮಗೆ ಬೇಡ” ಮೀನಾಕ್ಷಿ ನುಡಿದಳು.

“ನಮ್ಮ ಹಿಂದಿನ ಸಮಾಜ ಸುಧಾರಕರು ನಮ್ಮಷ್ಟು ವಿಚಾರ ಹೀನ ರಾಗಿರಲಿಲ್ಲ. ಅವರಿಗೆ ಯಾರ ಅನುಕರಣೆಯು ಸೋಗೂ ಹತ್ತಿರಲಿಲ್ಲ. ಅದಕ್ಕೆ ಅವರು ಅಷ್ಟು ಸುದೃಢವಾದ ಪಾಯವನ್ನು ಹಾಕಲು ಶಕ್ತರಾದರು. ಅವರು ಮಾಡಿರುವುದು ಸರ್ವವಿಧದಲ್ಲೂ ನ್ಯಾಯ. ಗಂಡಸು ನಿಯಮ ಬರೆದು ಅನ್ಯಾಯ ಮಾಡಿಲ್ಲ. ಹೆಂಗಸು ಸ್ವಾವಲಂಭಿಯಾಗಿ ಯಾವ ವಿಧ ದಲ್ಲೂ ಇರಲು ಶಕ್ಯವಿಲ್ಲ. ಶಾರೀರಿಕವಾಗಿ, ಮಾನಸಿಕವಾಗಿ ಆಕೆ ನಿರ್ಬಲೆ. ಬಳ್ಳಿಯಂತೆ ಕೋಮಲ ಸ್ವಭಾವದವಳು. ದಯೆ, ಮಮತೆ, ಭಕ್ತಿ, ಪ್ರೀತಿ, ಸ್ನೇಹ, ಅಭಿಮಾನ, ಸೇವಾತತ್ಪರತೆ ಇವು ಅವಳ ಸ್ವಂತ ವಸ್ತುಗಳು. ಇವು ಗಳ ಸಮ್ಮಿಳನದಲ್ಲೆ ನಮ್ಮ ದೇಶದ ಮಹಿಳೆಯಾಗಿರುವುದು. ಇವುಗಳಿ ಗಾಗಿಯೇ ನಾವು ಬಾಳಬೇಕು.”

“ಸಾಕು ... ಸಾಕು ನಿನ್ನ ಒಣವೇದಾಂತ. ನೀನು ಈ ಕಾಲದಲ್ಲಿ ಹುಟ್ಟಬಾರದಿತ್ತು.” ಲಲಿತ ಹೀಯಾಳಿಸಿದಳು.

“ಇನ್ನೂ ದುಷ್ಯಂತನ ಕಾಲದ ಕಾವು ಆರಿಲ್ಲ ಅಂತ ಕಾಣುತ್ತೆ” ಗ್ರೇಸ್ ಲೀಲಾವತಿ ನುಡಿದಳು.

“ನೀನೊಂದು ಹಳೆಯ ಕಾಲದವಳು, ಹೊಸ ನಾಗರಿಕತೆಯ ಗಂಧವೇ ಗೊತ್ತಿಲ್ಲ. ಅದರ ರುಚಿ ತಗುಲಿದ್ದರೆ ನೀನು ಹೀಗೆ ಹೇಳ್ತಾನೆ ಇರಲಿಲ್ಲ.” ನಾಗರಿಕತೆಯ ಹೊಸ ಸುಖವನ್ನು ಕಂಡಿದ್ದಳು ಅಂತ ಕಾಣುತ್ತೆ, ಇಷ್ಟು ಹೊತ್ತು ಸುಮ್ಮನಿದ್ದ ಮೆಹರುನ್ನೀಸಾ ನುಡಿದಳು.

“ನೀನು ಕಲಿಯುಗದಲ್ಲಿ ಹುಟ್ಟಿ ಬಲು ತಪ್ಪು ಮಾಡಿದೆ ಶಕುಂತಲಾ ದ್ವಾಪರ ಯುಗದಲ್ಲೊ ತ್ರೈತಾಯುಗದಲ್ಲೊ ಹುಟ್ಟಬೇಕಾಗಿತ್ತು” ಲಲಿತ ನುಡಿದಳು.

“ಹೌದು. ಲಲಿತೆ ನೀನು ಹೇಳುವುದು ಸತ್ಯ. ನನಗೂ ಹಾಗೇ ಅನ್ನಿಸುತ್ತೆ. ನಮ್ಮ ಸಮಾಜದ ನೀತಿ ಧರ್ಮಗಳನ್ನು ನಾವು ಅರಿಯಲಾರದೆ ಈ ವಿಷಪೂರಿತ ವಾತಾವರಣದಿಂದ ಕಲುಷಿತವಾದ ಈ ಕಾಲದಲ್ಲಿ ನಾನು ಹುಟ್ಟಬಾರದಿತ್ತು. ನಮ್ಮ ಸಂಸ್ಕೃತಿ, ಅತಿಪೂಜ್ಯ. ಮಹತ್ತರ ಆದರ್ಶ, ನ್ಯಾಯ, ಧರ್ಮದ ಅಡಿಗಲ್ಲಮೇಲೆ ನಿರ್ಮಿತವಾದ ನಮ್ಮ ಸಮಾಜ ಇಂದು ನಮಗೆ ಕೆಲಸಕ್ಕೆ ಬಾರದ್ದು ! ಸ್ವೇಚ್ಛಾಚಾರದ, ಅನೀತಿಯ ಪಾಶ್ಚಮಾತ್ಯ

ಸಂಸ್ಕೃತಿ ನಮಗೆ ಇಂದು ಆದರ್ಶ....! ನಗೂಬರುತ್ತದೆ ಲಲಿತೆ. ನಾವ್ಯಾಕೆ ಇಷ್ಟು ವಿಚಾರ ಹೀನರಾದವೆಂದು."

"ನಮಗೆ ಸ್ವಾತಂತ್ರ್ಯ ಬೇಕು. ಗಂಡಸಿನ ದಬ್ಬಾಳಿಕೆ ಬೇಕಿಲ್ಲ." ಯಾರೋ ಕೂಗಿದರು.

"ಸ್ವಾತಂತ್ರ್ಯದ ಹಿನ್ನೆಲೆಯಲ್ಲಿ ಸ್ವೇಚ್ಛಾಚಾರದ ದುರ್ಗಂಧ ಅಡಗಿಲ್ಲವೆ? ಅಲ್ಲಿನ ವಿವಾಹವಿಚ್ಛೇದನ ನಿಮಗೂ ಬೇಕೆ....?".

"ಹೌದು. ಬೇಕು. ಸ್ವಾತಂತ್ರ್ಯ ಬೇಕು."

"ಡೈವೋರ್ಸ್ ಅಲ್ಲಿನ ಅಶೃಂಖಲಾಬಂಧ ಸ್ವಚ್ಛಂದ ಮನೋವೃತ್ತಿಯ ಪ್ರತೀಕವಲ್ಲವೆ? ಒಬ್ಬಳೇ ಹೆಂಗಸು ನಾಲ್ಕು ಜನ ಗಂಡಸರಿಗೆ ಹೆಂಡತಿಯಾಗಿ ಬಾಳುವುದು ಸಂಸ್ಕೃತಿಯೇ? ನವನಾಗರಿಕತೆಯೆ?"

"ಮನುಷ್ಯನಿಗೂ ಪ್ರಾಣಿಗೂ ವ್ಯತ್ಯಾಸವೇ ಇಲ್ಲ...." ಪ್ರಭಾ ನುಡಿದಳು. "ಬೇಕಾದ ಹೆಂಗಸಿನ ಸೊಂಟ ಬಳಸಿ ಮುಖದಲ್ಲಿ ಮುಖ ಇಟ್ಟು ಕುಣಿಯುವುದು....ನಾಗರಿಕತೆಯಲ್ಲ." ಅವಳೇ ಮುಂದುವರಿಸಿದಳು.

"ಈ ಹೊಸ ನಾಗರಿಕತೆಯಲ್ಲಿ ಲವಲೇಶವಾದರೂ ರೀತಿ, ನೀತಿ, ಧರ್ಮ, ನಯ, ನಾವಿಣ್ಯತೆ ಯಾವುದಾದರೂ ಕಾಣಿಸುತ್ತದೆಯೇ?" ಶಕುಂತಲ ಪ್ರಶ್ನಿಸಿ ಸುತ್ತಲೂ ನೋಡಿದಳು. ಉಳಿದವರು ಒಬ್ಬರ ಮುಖವನ್ನೊಬ್ಬರು ನೋಡುತ್ತಿದ್ದರು. ಶಕುಂತಲ ಇನ್ನೂ ಏನನ್ನೋ ಹೇಳಲು ಬಾಯಿಬಿಟ್ಟಳು. ಅಷ್ಟರಲ್ಲಿ ಪೀರಿಯಡ್‌ನ ಗಂಟೆ ಬಾರಿಸಿದುದರಿಂದ ಸುಮ್ಮನಾಗಲೇಬೇಕಾಯಿತು.

ಮೇಡಂ ಬಂದರು. ಬೀಜಗಣಿತದ ಯಾವುದೊ ಒಂದು ಲೆಕ್ಕವನ್ನು ಹಾಕಿದರು. ಶಕುಂತಲೆಯೂ ಅದನ್ನು ತನ್ನ ಪುಸ್ತಕದಲ್ಲಿ ಬರೆದುಕೊಂಡಳು. ಆದರೆ ಮನಸ್ಸಿನಲ್ಲಿ ನುಗ್ಗಿಬರುತ್ತಿದ್ದ ವಿಚಾರಧಾರೆ ಮಾತ್ರ ಕಡಿಮೆಯಾಗಿರಲಿಲ್ಲ.

ನಮ್ಮ ಸಮಾಜದಲ್ಲಿ ಸ್ತ್ರೀಗೆ ಪೂರ್ಣ ಸ್ವಾತಂತ್ರ್ಯ ಇಲ್ಲದೆ ಹೋದರೂ ಸಮಾಜ ಧರ್ಮ, ನೀತಿ, ಕಷ್ಟಗಳ ಅಡಿಗಲ್ಲ ಮೇಲೆ ನಿಂತಿದೆ. ಮದುವೆ ಎಂಬುದು ನಮ್ಮಲ್ಲಿ ಕೇವಲ ಎರಡು ಬೇರೆ ಬೇರೆ ಶರೀರಗಳ ಕೂಡುವಿಕೆಯಲ್ಲ. ಎರಡು ಹೃದಯಗಳ ಪವಿತ್ರ ಸಂಘಟನ. ಅಲ್ಲಿ ಕ್ಷಣಿಕ ಸೇರ್ಪಡೆ. ಬೇಕಾದಾಗ ಕೊಡುವುದು ಬೇಡವಾದಾಗ ಬಿಡುವುದು. ಇದು ವ್ಯಕ್ತಿ ಸ್ವಾತಂತ್ರ್ಯ... ?! ಇದನ್ನು ನೆನೆದೊಡನೆ ಶಕುಂತಲೆಯ ಮುಖವೆಲ್ಲಾ ಬೆವರಿ ಹೋಯಿತು. ಇದು ವ್ಯಕ್ತಿಸ್ವಾತಂತ್ರ ಅಲ್ಲ. ದುರಾಚಾರ....ಸ್ವೇಚ್ಛಾ

ಚಾರ....ಆನಂದ ಪ್ರವೃತಿ....ಎಂದು ಕೂಗಬೇಕೆನ್ನಿಸಿತು. ಉಕ್ಕಿಬಂದ ಆವೇಶವನ್ನು ವ್ಯಕ್ತಪಡಿಸಲಾರದೆ ತೆರದಿದ್ದ ಪುಸ್ತಕವನ್ನು ರಪ್ ಎಂದು ಮುಚ್ಚಿಬಿಟ್ಟಳು.

ನೇರವಾಗಿ ಮನೆಗೆ ಬಂದ ಶಕುಂತಲ ಬಟ್ಟೆಯನ್ನು ಬದಲಾಯಿಸದೆ ಹಾಗೆ ಮಂಚದ ಮೇಲೆ ಉರಳಿದಳು. ನಿನ್ನೆ ಓದಿ ಅರ್ಧಕ್ಕೆ ನಿಲ್ಲಿಸಿದ್ದ 'ಮರಳಿ ಮಣ್ಣಿಗೆ' ತಲೆದಿಂಬಿನಲ್ಲಿ ಬಿದ್ದಿತ್ತು. ಅದನ್ನು ಕೈಗೆತ್ತಿಕೊಂಡಳು. ಓದಲು ತೊಡಗಿದಳು. ಒಂದು ಕ್ಷಣ ಮನಸ್ಸು ಸ್ಥಿಮಿತಕ್ಕೆ ಬಾರದೆ ಇದ್ದರೂ ಗೌರಿಯ ಸಾಹಸವನ್ನು ಕಂಡು ಅದರಲ್ಲಿ ಲೀನವಾದಳು. ಬಹುದೂರ ಹೋಗಿ ತಾನೇ ಉಪ್ಪಿನ ಕಾಯಿಗೆ ಮಾವಿನ ಕಾಯನ್ನು ಕಿತ್ತು ತರುವ ಪ್ರಕರಣಕ್ಕೆ ಬಂದಿದ್ದಳು. ಇನ್ನೂ ಮುಂದೆ ಓದುತ್ತ ಸಂಪೂರ್ಣವಾಗಿ ತನ್ನನ್ನೇ ತಾನು ಮರೆತಳು. ಹೊರಗಡೆಯಿಂದ ತಾಯಿ ಕೂಗಿದರು. "ಲೇ ಶಕುಂತಲ ಇವೇನೆ ಸ್ಕೂಲಿನಿಂದ ಬಂದೋಳು ಪುನಃ ಪುಸ್ತಕ ಹಿಡ್ದು ಕೂತುಬಿಟ್ಟೆ. ಪಾತ್ರೆ ಒಂದು ಹೊರೆ ಬಿದ್ದಿದೆ. ಆಗಲೇ ಅವರು ಬರೋ ಹೊತ್ತಾಯ್ತು. ಕಾಫಿಗೆ ಒಂದಾದ್ರೂ ಪಾತ್ರೆಯಿಲ್ಲ....ಸ್ವಲ್ಪ ತೊಳೀಬಾರೆ" ಶಕುಂತಲೆಗೂ ಕೇಳಿಸಿತು.

"ಬರ್ತೀನಿ ತಾಳಮ್ಮ..." ನುಡಿದು ಪುನಃ ಅದರಲ್ಲೇ ಲೀನವಾದಳು.

ಮನೆಗೆ ಬಂದ ರಾಯರು ರುಮಾಲನ್ನು ತೆಗೆದಿಟ್ಟು ಕೈಕಾಲನ್ನು ತೊಳೆದು ವರಸಿಕೊಳ್ಳುತ್ತ ಶಕುಂತಲಳ ರೂಮಿಗೆ ಬಂದರು. ಶಕುಂತಲ ಮಂಚದ ಮೇಲೆ ಅರ್ಧ ಮಲಗಿ ಓದುತ್ತಲೇ ಇದ್ದಳು. ತಂದೆ ಬಂದುದೂ ತಿಳಿದಿರಲಿಲ್ಲ. "ಇದೇನೆ ಇಷ್ಟೊಂದು ಓದ್ತಾ ಇದ್ದಿ ಇವತ್ತು" ಹತ್ತಿರ ಬಂದು ಅವಳ ಜಡೆಯನ್ನು ಹಿಡಿದು ಮೇಲಕ್ಕೆ ಎತ್ತಿದರು.

ಶಕುಂತಲ ಸರಿಯಾಗಿ ಎದ್ದು ಕುಳಿತಳು.

"ನೀವು ಬಂದಿದ್ದೇ ನಂಗೆ ಗೊತ್ತಾಗ್ಲಿಲ್ಲ. ಕಾದಂಬರಿ ಬಹಳ ಸ್ವಾರಸ್ಯವಾಗಿದೆ ಅಣ್ಣಾ....ಓದ್ತಾ ಇದ್ರೆ ಏನೂ ಬೇಕಾಗಲ್ಲ. ನೀನು ರಾತ್ರೀನೆಲ್ಲಾ ಓದ್ತಾ ಇದ್ರೆ ನಿನಗೆಲ್ಲೋ ಹುಚ್ಚು ಹಿಡೀತಾ ಇದೆ ಅಂತಿದ್ದೆ. ಈಗ ನನಗೂ ಹಿಡಿದಿದೆ." ಕಿಲಕಿಲನೆ ನಕ್ಕಳು.

"ಅಮ್ಮಾ ಆಗ್ಲೆ ನನ್ನ ಕೂಗಿದ್ಲು ಪಾತ್ರೆ ತೊಳೆಯೋಕ್ಕೆ ಅಂತ.... ಏನು ಅವಳೇ ಗಲಬಿಸಿಬಿಟ್ಲೋ ಏನೊ....?" ಎದ್ದು ಹೊರಗೆ ಹೋದಳು.

"ಕಲ್ಲು ಬೊಂಬೆ ಅಂತೋವ್ರು ಹತ್ತು ಜನ ಇರೋದಕ್ಕಿಂತ ಇಂತೋಳು

ಒಬ್ಬಳು ಇದ್ರೆ ಸಾಕು....ಏನು ಗುಣ....! ಅಪರಂಜಿ....!!" ತನ್ನಲ್ಲಿ ತಾನೇ ಹೇಳಿಕೊಂಡರು ರಾಯರು.

ಶಕುಂತಲೆ ಪಾತ್ರೆ ತೊಳೆಯಲು ಅಡಿಗೆ ಮನೆಗೆ ಹೋಗುವಷ್ಟರಲ್ಲಿ ತಾಯಿಯೇ ಪಾತ್ರೆಯನ್ನು ತೊಳೆದುಕೊಂಡು ಬಂದಿದ್ದು ಕಾಫಿಯನ್ನೂ ಸೋಸಿ ಸಕ್ಕರೆಯನ್ನು ಹಾಕುತ್ತಿದ್ದಳು.

"ಇವೇನಮ್ಮ ನೀನೇ ತೊಳ್ದುಬಿಟ್ಟೆ" ಪ್ರಶ್ನಿಸಿದಳು.

"ಇನ್ನೇನು ಮಾಡ್ಲಿ ಹೇಳು. ಎರಡು ಸಾರಿ ಕೂಗ್ದೆ ನೀನು ಬರ್ಲೇ ಇಲ್ಲ. ಹೋಗ್ಲಿ ಏನೊ ಓದ್ತಾ ಇದ್ದಾಳೊ ಏನೊ ಅಂತ ನಾನೇ ತೊಳ್ದು ಕೊಂಡು ಬಂದೆ. ಹೋಗ್ಲಿ ಕಾಫಿ ಕುಡಿದು ಆ ಬಟ್ಟೇನೆಲ್ಲಾ ಒಗ್ದು ಹಾಕಿ ಬಿಡು. ಇದ್ಯಾಕೊ ಈಗೀಗ ನೀನು ಮೈಗಳ್ಳಿಯಾಕ್ತಾ ಇದ್ದೀಯ. ನಿನ್ನೆ ಬಿಚ್ಚಿ ಹಾಕಿದ ಸೀರೆ, ಕುಪ್ಪಸಾನ ಇನ್ನೂ ಒಗೆದಿಲ್ಲ....! ಹೆಂಗ್ಸು ಹೀಗೆ ಪಾಲುಮಾರ್ಕೆ ಮಾಡಬಾರ್ದು." ತಾಯಿ ಹೇಳುತ್ತಿರುವಷ್ಟರಲ್ಲಿ ರಾಯರು ಒಳಕ್ಕೆ ಬಂದರು.

"ಈಗ ಎಲ್ಲಾ ಒಗ್ದು ಹಾಕಿಬಿಡ್ತೀನಿ ಅಮ್ಮಾ. ಬೆಳಗ್ಗೇನೇ ಒಗೀ ಬೇಕಾಗಿತ್ತು." ಅಂದಳು. ತಂದೆಯ ಕಡೆಗೆ ತಿರುಗಿ "ಅಣ್ಣಾ ಇವತ್ತು ರಾತ್ರೆ 'ಮರಳಿ–ಮಣ್ಣಿಗೆ' ಮುಗ್ಸಿಬಿಡ್ತೇನೆ. ನಾಳೆ ದಿನ ಚೆನ್ನಾಗಿರುವ ಬೇರೆ ಒಂದು ಪುಸ್ತಕ ತಂದು ಕೊಡ್ತೀಯಾ... ಕಾಫಿಯನ್ನು ಕುಡಿದು ಬಟ್ಟಲನ್ನು ಕೆಳಗಿಟ್ಟಳು.

"ಹೂಂ ! ಚೆನ್ನಾಗಿ ಹಿಡೀತು ನಿಂಗೆ ಪುಸ್ತಕದ ಹುಚ್ಚು" ರಾಯರು ನುಡಿದಾಗ ತುಂಬ ಮೆಚ್ಚುಗೆಯಿತ್ತು ನುಡಿಯಲ್ಲಿ.

"ನೀವು ಹೇಳಿ ಕೊಡೋದೆಲ್ಲಾ ಇಂಥಾ ವಿದ್ಯೇನೆ? ಹೆಣ್ಣುಮಕ್ಳು ಯಾವಾಗ್ಲೂ ಚಟ್‌ಪಟ್ ಅಂತ ಕೆಲ್ಸ ಮಾಡ್ತಾ ಇರ್ಬೇಕು. ಪುಸ್ತಕ ಓದೋ ದಂತೆ ಪುಸ್ತಕ ಓದೋದು....! ಅದೆಲ್ಲಾ ನಿಮ್ಗೆ ಗಂಡಸರಿಗೆ. " ಸೀತಮ್ಮ ನುಡಿದು ಕಾಫಿಯ ಪಾತ್ರೆಯನ್ನು ತೊಳೆಯಲು ಮೇಲಕ್ಕೆ ಎದ್ದಳು.

"ನೀನು ಕೂತ್ಕೊಳಮ್ಮ ನಾನೇ ತೊಳಕೊಂಡು ಬರ್ತೀನಿ" ತಾಯಿಯ ಕೈಯಿಂದ ಪಾತ್ರೆಯನ್ನು ಕಿತ್ತುಕೊಂಡು ಹೊರಗೆ ಹೊಗುತ್ತ "ಇಳಿದು ಬಾತಂಗಿ...." ಕವಿ ಬೇಂದ್ರೆಯವರ ಕವನವನ್ನು ಗೊಣಗುತ್ತ ಹೋದಳು. ವೆಂಕಟರಾಯರು ಅಭಿಮಾನದಿಂದ ಹೆಂಡತಿ ಕಡೆಗೆ ನೋಡಿ ಕಣ್ಣಿನಲ್ಲೆ ನಕ್ಕರು. "ಬೇಂದ್ರೆ, ಪುಟ್ಟಪ್ಪ, ಅಡಿಗ, ಚನ್ನವೀರಕಣವಿ, ಶ್ರೀನಿವಾಸ, ವೀಸಿ ಇವರಪದ್ಯಾನೆಲ್ಲಾ ಗಟ್ಟಮಾಡಿಕೊಂಡಿದ್ದಾಳೆ ನಿನ್ನ ಮಗಳು. ಏನು

ಸಾಮಾನ್ಯ ಅಂತ ತಿಳ್ಕೋಬೇಡ ಅವಳ್ನ....ಪ್ರಚಂಡ ತಲೆ...." ಪೂರ್ಣ ಸಲ್ಗೆಯಿಂದ ನುಡಿದರು.

"ನೀವೇ ಹೊಗಳಬೇಕು ನಿಮ್ಮ ಮಗಳನ್ನ" ಸೀತಮ್ಮನಿಗೂ, ಮಗಳ ಮೇಲೆ ಅಭಿಮಾನವಿದ್ದರೂ ಬೇಕೆಂದೇ ನುಡಿದಳು.

"ನಮ್ಮ ಶಕುಂತಲ ಒಂದು ರತ್ನ....ಅದನ್ನು ಪಡೆಯೋನು ಏಳು ಏಳು ಜನ್ಮದಲ್ಲಿ ಪುಣ್ಯ ಮಾಡಿರಬೇಕು." ಬೊಚ್ಚು ಬಾಯನ್ನು ಅಗಲಿಸಿ ತುಂಬು ಪ್ರೇಮದಿಂದ ನುಡಿದರು ಸಾವಿತ್ರಮ್ಮ. ಶಕುಂತಲ ಹಿತ್ತಲ ಕಡೆ ಹೊರಟು ಹೋಗಿದ್ದಳು.

ವೆಂಕಟರಾಯರು, ಸೀತಮ್ಮ ಒಬ್ಬರ ಮುಖವನ್ನೊಬ್ಬರು ನೋಡಿ ನಕ್ಕರು.

ರಾಯರ ಸ್ನೇಹಿತ ಹೊರಗಡೆ ಕೂಗಿದುದರಿಂದ ತಿರುಗಾಡಿಕೊಂಡು ಬರಲು ಹೊರಟು ಹೋದರು. ಸೀತಮ್ಮ ಒಲೆಯನ್ನು ಸಾರಿಸಿ ರಾತ್ರಿಯ ಅಡಿಗೆಗೆ ಅಣಿ ಮಾಡತೊಡಗಿದಳು. ಸಾವಿತ್ರಮ್ಮ ಏಕೊ ಮೈ ಕತ್ತರಿಸುತ್ತಿದೆ ಎಂದು ಮಲಗಿಬಿಟ್ಟಿದ್ದರು.

ಶಕುಂತಲ ಪಾತ್ರೆ ತೊಳೆದುಕೊಂಡು ಬಂದಳು. ತನ್ನ ರೂಮಿಗೆ ಹೋಗಿ ಒಂದು ಹೊರೆ ಬಟ್ಟೆಯನ್ನು ಒಗೆಯಲು ಹೊರಕ್ಕೆ ತಂದಳು.

"ಶಕುಂತಲ....ಹಾಗೆ ಸ್ವಲ್ಪ ಬರ್‍ತೀಯೇನಮ್ಮ ಕಾಲೆಲ್ಲಾ ಕತ್ತರಿಸ್ತಾ ಇದೆ. ಸ್ವಲ್ಪ ತುಳೀತೀಯೇನೆ?" ಅಜ್ಜಿ ಕೂಗಿದರು.

"ಅದಕ್ಕೇನಜ್ಜಿ...." ಬಟ್ಟೆಯನ್ನು ಅಲ್ಲೇ ಎಸೆದು ಹತ್ತಿರ ಬಂದು ಕಾಲು ಹಿಸಕಲು ಹೋದಳು.

"ಬೇಡ....ಬೇಡ ಶಕುಂತಲ ಅದು ಸರಿಹೋಗಲ್ಲ....ನಿಂತು ಗೋಡೆ ಹಿಡಿದು ನನ್ನ ಕಾಲಮೇಲೆ ನಿಂತಿಕೊ. ಚೆನ್ನಾಗಿ ಭಾರಬಿಡು....ಆಗ ಸ್ವಲ್ಪ ಹಾಯನಿಸುತ್ತೆ." ಅಜ್ಜಿ ನುಡಿದರು.

ಶಕುಂತಲ ಅನುಮಾನಿಸಿ ಅನುಮಾನಿಸಿ ಕಾಲಿನಿಂದ ಕೈಯನ್ನು ತೆಗೆದು ಅಜ್ಜಿಯ ಕಾಲಿನಮೇಲೆ ನಿಂತು ಸ್ವಲ್ಪ ಹೊತ್ತು ಮೊಳಕಾಲವರೆಗೂ ತುಳಿದಳು. ಅಜ್ಜಿಗೆ ಸ್ವಲ್ಪ ಹಾಯೆನಿಸಿತ್ತು. "ಸಾಕು ಮಗು ಇನ್ನು ನಿನ್ನ ಕೆಲ್ಸಕ್ಕೆ ಹೋಗು. ನೀನು ನನ್ನ ಚಿನ್ನಾ....ನಿನ್ನ ಮದ್ವೆಯೊಂದು ನಾನು ನೋಡಿ ಕಣ್ಣುಮುಚ್ಚಿಕೊಂಡ್ರೆ ಸಾಕು. ಅಂತೂ ನಿನ್ನ ಮದ್ವೆ ನೋಡ್ಬೇಕು ಕಣೆ....ನಂಗೆ ಬಾಳ ಆಸೆ ಇದೆ....ಅದ್ಯಾವ ಪುಣ್ಯಾತ್ಮ ನಿನ್ನ ಕೈ ಹಿಡಿಯೊ ಭಾಗ್ಯ ಪಡೆದಿದ್ದಾನೊ?" ಅಜ್ಜಿ ನುಡಿದರು. "ಅವರಿದ್ದಿದ್ರೆ

....ನಿನ್ನ ನೋಡಿ ಎಷ್ಟು ಸಂತೋಷಪಡ್ತಾ ಇದ್ದರೊ...." ಹಿಂದಿನ ನೆನಪು ಬಂದು ಕಣ್ಣಲ್ಲಿ ನೀರಾಗಿ ಹರಿಯಿತು. ಅಳಲು ಹೆಚ್ಚಾಗಿ ಬಿಕ್ಕಳಿಸಿದರು. ಶಕುಂತಲ ಮೂಕಳಾಗಿ ಸುಮ್ಮನೆ ಅತ್ತಲೆ ನೋಡುತ್ತಿದ್ದಳು. ಅತ್ತೆ ಅಳುವ ಶಬ್ದ ಕೇಳಿ ಅಡುಗೆ ಮನೆಯಿಂದ ಸೀತಮ್ಮ ಓಡಿ ಬಂದಳು. "ಯಾಕಮ್ಮ ಅಳ್ತಿಯಾ....ಏನಾದ್ರೂ ಅಂದಳೇನಮ್ಮ ಇವಳು...." ಶಕುಂತಲೆಯ ಜಡೆ ಯನ್ನು ಹಿಡಿದು ಎಳೆದಳು. ಸಾವಿತ್ರಮ್ಮ ಕಣ್ಣೀರನ್ನು ವರಸಿಕೊಂಡರು.

"ಏ ಸುಮ್ಮನಿರೆ ಸೀತಾ....ಹಾಗೆ ಜಡೆ ಎಳೆದರೆ ನೋವಾಗಲ್ವೇನೆ...." ಅವಳೇನು ಅನ್ನಲಿಲ್ಲ. ನಂಗೇ ಅವರ ಜ್ಞಾಪ್ಕ ಬಂತು. ಕಣ್ಣಲ್ಲಿ ನೀರು ಬಂತು ಅಷ್ಟೆ. ಇನ್ನು ನೀನು ಹೋಗು ಶಕುಂತಲ. ಸಾಯಂಕಾಲ ಆಗ್ಲೆ ಆಗಿಹೋಯ್ತು. ಬೇಕಾದ್ರೆ ಎಲ್ಲಾದ್ರೂ ನಿನ್ನ ಸ್ನೇಹಿತರ ಮನೆಗೆ ಹೋಗಿ ಬಾ....ಬೆಳಗ್ಗೆ ಬಟ್ಟೆ ಒಗದ್ರೆ ಆಯ್ತು. ಒಗದ್ದು ಇದ್ಯೊ ಇಲ್ವೊ ನಾಳೆ ಉಟ್ಕೊಳ್ಳೋಕೆ. ಇಲ್ದೆ ಇದ್ರೆ ರೇಷ್ಮೆ ಸೀರೇನೆ ಉಟ್ಕೊಂಡು ಹೋದ್ರೆ ಆಯ್ತು....ಅಜ್ಜಿ ನುಡಿದರು.

"ಇಲ್ಲಜ್ಜಿ ಎಲ್ಲೂ ಹೋಗಲ್ಲ....ಹೊರಗೆ ಏನು ಮಾಡೋದು ಲಲಿತಳ ಜೊತೇಲೊ, ಪ್ರಭಾಳ ಜೊತೇಲೊ ಕಾಡ ಹರಟೆ ಹೊಡೆಯೋದು ಅಷ್ಟೇ.... ತಾನೆ. ಈಗ್ಲೆ ಸೀರೆಗಳನ್ನು ಒಗ್ದು ಹಾಕಿಬಿಡ್ತೇನೆ. ಬೆಳಗ್ಗೆ ನಾನು ಕಥೆ ಪುಸ್ತಕ ಓದ್ಬೇಕು...." ಬಟ್ಟೆಗಳನ್ನು ಬಗಲಿಗೆ ಇರಕಿಕೊಂಡು ಹಿತ್ತಲಿಗೆ ಹೋದಳು.

ಅಜ್ಜಿ ಮುಗುಳು ನಕ್ಕರು. ತಾಯಿ ತಮ್ಮ ಕೆಲಸ ನೆನೆದು ಅಡಿಗೆ ಮನೆಗೆ ಹೋದಳು.

೭

ಶಕುಂತಲ ಬಟ್ಟೆಯನ್ನೆಲಾ ಒಗೆದು ಹಾಕಿದಳು. ಒಂದೊಂದಾಗಿ ಕೊಡವಿ ತಂತಿಯ ಮೇಲೆ ಒಣಗಿ ಹಾಕುತ್ತಿದ್ದಳು.

"ಇದೇನೆ ಶಕುಂತಲ ಒಂದು ವರ್ಷದಲ್ಲಿ ಇಷ್ಟೊಂದು ಬದಲಾಗಿ ಹೋಗಿದ್ದಿ. ದಪ್ಪನಾಗಿ ಬೆಲೂನ್ ಊದಿದಾಗೆ ಊದಿ ಟ್ರಂಆಗಿ ಹೋಗಿದ್ದೀ ಯಲ್ಲ. ನೀನು ದಿನ ದಿನ ಊದೊದ್ರಲ್ಲಿ ನನ್ನ ಸಣ್ಣ ಮನುಷ್ಯನ್ನ ಮರ್ತು ಬಿಟ್ಟೆಯೇನೊ?" ಬೆಂಗಳೂರಿಗೆ ಹೋಗುವ ದಿನ ಮನೆಗೆ ಬಂದು ಹಿತ್ತಲಿನ ಬಾಗಿಲಲ್ಲಿ ನಿಂತು ನುಡಿದಿದ್ದ ಶೀನು. ಅಂದೂ ಹೀಗೆಯೇ ಬಟ್ಟೆಯನ್ನು ಒಣಗಿ ಹಾಕುತ್ತಿದ್ದಳು. ಹುಟ್ಟಿದಾಗಿನಿಂದ ಜೊತೆಯಲ್ಲಿ ಆಡಿ ಬೆಳೆದಿದ್ದರೂ

ಅಂದೇಕೊ ಅವನೊಡನೆ ಮಾತನಾಡಲು ಎಲ್ಲಿಲ್ಲದ ನಾಚಿಕೆ ಅಡ್ಡಿಪಡಿಸಿತ್ತು.

ಅಂದು ಶೀನಿ ಅಡುಗೆ ಮನೆಯಲ್ಲಿ ಬಹಳ ಹೊತ್ತು ಕುಳಿತಿದ್ದ. ಏನೇನೊ ಅವನ ಕಾಲೇಜಿನ ವಿಷಯ, ಬೆಂಗಳೂರಿನ ವಿಷಯ ಹೇಳುತ್ತಲೇ ಇದ್ದ. ತಾಯಿಗೆ ಅದು ಅರ್ಥವಾಗುತ್ತಿತ್ತೊ ಇಲ್ಲವೊ ಅಂತೂ ಹೂ ಅನ್ನುತ್ತಿದ್ದಳು. ಕಾವಲಿಮೇಲೆ ಮಧ್ಯೆ ಮಧ್ಯೆ ಚೊರ್ ಅಂತ ದೋಸೆಯ ಹಿಟ್ಟನ್ನು ಸುರಿಯುತ್ತಿದ್ದಳು. ಇವಳು ಮಾತ್ರ ಬಹಳ ಆಸಕ್ತಿಯಿಂದ ಎಲ್ಲವನ್ನೂ ಆಲಿಸುತ್ತಿದ್ದಳು. ಮಧ್ಯದಲ್ಲಿ ಅವಳು ಏನನ್ನೂ ನುಡಿದಿರಲಿಲ್ಲ. ದೋಸೆ ತಿಂದು ಕಾಫಿ ಕುಡಿದು ಹೋಗುವಾಗ 'ಹೋಗಿ ಬರ್ತೀನಿ ಸೀತಮ್ಮ....ಹೋಗಿ ಬರ್ತೀನಿ ಶಕುಂತಲ ಜ್ಞಾಪಕ ಇರ್ಲಿ !' ಹೇಳಿದ್ದ

"ಅದ್ಹ್ಯಾಗೆ ಮರೀತೇವಪ್ಪ ? ನಿಮ್ಮ ಅಮ್ಮಂಗೆ ನಾವು ಜ್ಞಾಪಿಸಿಕೊಂಡವು ಅಂತ ಹೇಳಪ್ಪ...." ತಾಯಿ ಅಜ್ಜಿ ಇಬ್ಬರೂ ನುಡಿದಿದ್ದರು.

"ನೀವೇನೊ ಮರೆಯೋದಿಲ್ಲ ಅಜ್ಜಿ....ಆದ್ರೆ ಇವಳು ಮರ್‍ತುಬಿಡ್ತಾಳೆ. ಆಗ್ಲೆ ಮದ್ವೆ ಆಗೋವಯಸ್ಸು ಆಯ್ತು. ಹುಡುಗಿಯೋರಿಗೆ ಮದ್ವೆ ಆಗೊ ವಯಸ್ನಲ್ಲಿ ನೆಲವೇ ಕಣ್ಣಿಗೆ ಬೀಳೊದಿಲ್ವಂತೆ. ಹಾಗೆ ಇವಳೂ ಈಗ ಮೊದಲಿನ ಹಾಗೆ ಮಾತೆ ಆಡೊಲ್ಲ....ಏನೊ ಬೀಗುಮಾನ ಬಂದುಬಿಟ್ಟಿದೆ. ನಾನೇ ಚೆನ್ನಾಗಿರೋಳು ಅಂತ ಜಂಬ ಅಂತ ಕಾಣುತ್ತೆ....ಅಲ್ವೇನೆ ?" ತೀರ ಹತ್ತಿರ ಬಂದು ಮುಖದ ಹತ್ತಿರ ಮುಖ ಇಟ್ಟು ಪ್ರಶ್ನಿಸಿದ್ದ. ಶಕುಂತಲ ಕೊರಳನ್ನು ಕೊಂಕಿಸಿದ್ದಳು. ನೀನೂ ಚೆನ್ನಾಗಿಯೇ ಇದ್ದೀಯ ಎಂದು ಹೇಳಬೇಕೆಂದು ಅವಳ ಮನಸ್ಸು ಬಯಸುತ್ತಿದ್ದರೂ ನಾಲಿಗೆ ನುಡಿದಿರಲಿಲ್ಲ. ಅದೇ ಹೊತ್ತಿಗೆ ಹಾಳು ಸಂಗೀತದ ಮೇಷ್ಟರು ಬಂದುದರಿಂದ ಮಾತು ನಿಲ್ಲಲೇ ಬೇಕಾಗಿತ್ತು. "ಓಹೊ....! ಇವಳು ವಿದೂಷಿ ಬೇರೆ ಆಗ್ತಾ ಇದ್ದಾಳೊ" ನಗೆಯಾಡಿದ್ದ ಶೀನಿ: ತಾನು ಮಾತನಾಡದೆ ಹುಸಿನಗೆಯಲ್ಲಿ ಉತ್ತರ ಕೊಟ್ಟು ತನ್ನ ಕೊಠಡಿಗೆ ಹೊರಟು ಹೋಗಿದ್ದಳು. ಶೀನುವೂ ಅಲ್ಲಿ ನಿಂತಿರಲಿಲ್ಲ. 'ಬರ್‍ತೀನಿ' ಎಂದು ಹೇಳಿ ಹೊರಟು ಹೋಗಿದ್ದ.

ಬಟ್ಟೆಯನ್ನು ಒಣಗಿಹಾಕಿ ತನ್ನ ಕೊಠಡಿಗೆ ಬಂದು ಮಂಚದಮೇಲೆ ಕುಳಿತು ಬಹಳ ಹೊತ್ತು ಯೋಚಿಸಿದಳು. ಇದ್ದಕ್ಕಿದ್ದಂತೆಯೇ ಶೀನುವಿನ ಜ್ಞಾಪಕ ಏಕೆ ಬಂತೆಂದು ? ಎಷ್ಟು ಯೋಚಿಸಿದರೂ ಕಾರಣ ಹೊಳೆಯಲಿಲ್ಲ.

ಇನ್ನೂ ಇದೇತಾನೆ ದೀಪಹಚ್ಚಿದ್ದರಿಂದ ಓದಲು ಕೂಡಲು ಮನಸ್ಸು ಒಪ್ಪುತ್ತಿರಲಿಲ್ಲ. ಹೊರಗಡೆ ಬಂದು ಬೀದಿಯ ಬಾಗಿಲ ಬಳಿಯಲ್ಲಿ ನಿಂತು

ಸುಮ್ಮನೆ ಬಹುಹೊತ್ತು ದಾರಿಯನ್ನು ನೋಡುತ್ತಿದ್ದಳು. ಎಷ್ಟು ಮರೆಯಲು ಯತ್ನಿಸಿದರೂ ಶೀನುವೇ ಅವಳ ಸ್ಮೃತಿಪಥದಲ್ಲಿ ಸುಳಿಯುತ್ತಿದ್ದ. ಬಹುಹೊತ್ತು ಅಲ್ಲೆ ನಿಂತಿದ್ದು ಹೊರಗೆ ಕತ್ತಲು ಚೆನ್ನಾಗಿ ಲಾಸ್ಯವೆಸಗ ಹತ್ತಿದಮೇಲೆ ತನ್ನ ಕೊಠಡಿಗೆ ಬಂದು ಸ್ಕೂಲಿನ ಪಾಠಗಳನ್ನು ಓದಲು ಪ್ರಾರಂಭಿಸಿದಳು. ಮನಸ್ಸು ಸ್ಥಿಮಿತಕ್ಕೆ ಬರಲಿಲ್ಲ. ಕಥೆಪುಸ್ತಕವನ್ನು ತೆಗೆದುಕೊಂಡು ಹತ್ತು ಪುಟವನ್ನು ತಿರವಿ ಹಾಕಿದಳು. ಪುಟ ಹತ್ತು ಮುಂದೆ ಸರಿದಿದ್ದರೂ ಏನು ಓದಿದೆನೆಂಬುದು ತಿಳಿದಿರಲಿಲ್ಲ. ಪುಸ್ತಕವನ್ನು ದೂರ ಎಸೆದು ಹಾರ್ಮೋನಿಯಂ ಮುಂದಿಟ್ಟುಕೊಂಡು ಗೊಣಗಲಾರಂಭಿಸಿ ಸ್ವಲ್ಪ ಹೊತ್ತಿನಲ್ಲೆ ತನ್ನನ್ನೆ ಮರೆತು ಹಾಡಲಾರಂಭಿಸಿದಳು.

ಬಹು ಹೊತ್ತು ಹಾಡಿದಳು.

ಊಟಮಾಡಿ ಸುಖವಾಗಿ ನಿದ್ರೆ ಹೋದಳು. ಪುನಃ ಯಾವ ಭಾವನೆಗಳೂ ಕಾಡಿಸಲಿಲ್ಲ.

ಇಂದು ವೆಂಕಟರಾಯರಿಗೆ ಎಲ್ಲಿಲ್ಲದ ಸಡಗರ. ಮಗಳು ಈಸಾರಿ ಜ್ಯೂನಿಯರ್ ಸಂಗಿತದ ಪರೀಕ್ಷೆಗೆ ಕುಳಿತಿದ್ದಾಳೆ. ಅವಳನ್ನು ಪರೀಕ್ಷೆಗೆ ಬೆಂಗಳೂರಿಗೆ ಕರೆದುಕೊಂಡು ಹೋಗಬೇಕು. ಅದಕ್ಕಾಗಿ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದಾರೆ. ಶಕುಂತಲಳ ಉತ್ಸಾಹವನ್ನಂತೂ ಹೇಳಲು ಸಾಧ್ಯವಿಲ್ಲ. "ನಿಮ್ಮ ಶಕುಂತಲಳ ಕಂಠ ಒಳ್ಳೆ ಕೋಗಿಲೆಯ ಕಂಠ ಇದ್ದ ಹಾಗಿದೆ. ನಿಜವಾಗಿಯೂ ಫಸ್ಟ್‌ಕ್ಲಾಸು ಬರ್‍ತಾಳೆ. ರ್‍ಯಾಂಕು ಬಂದರೂ ಬರಬಹುದು." ಮೇಸ್ಟರು ತಂದೆಯಬಳಿ ಇದನ್ನು ಹೇಳಿದಾಗ ಇವಳು ಕದ್ದು ಕೇಳಿದ್ದಳು. ಪ್ರಯಾಣದ ಉತ್ಸಾಹಕ್ಕೆ ಕಳ್ಳು ಕುಡಿಸಿತು ಈ ಮಾತು. "ಪರೀಕ್ಷೆಗೆ ಬರೊ ಮೇಸ್ಟರು ನಮ್ಮ ಸಂಬಂಧೀಕರು–" ಮೇಸ್ಟರು ಮುಂದುವರಿಸಿದ್ದರೂ ಇವು ಅವಳ ಕಿವಿಗೆ ಬಿದ್ದಿರಲಿಲ್ಲ.

ಇರುವುದು ಮೂರು ದಿನಗಳಾದರೂ ಟ್ರಂಕಿನಲ್ಲಿ ಹತ್ತಾರು ಸೀರೆಗಳನ್ನು ಕುಪ್ಪಸಗಳನ್ನು ತುಂಬಿದಳು. ಪೌಡರ್, ಸ್ನೊ—ಬಾಟಲುಗಳನ್ನು ಇಡುವುದನ್ನು ಮರೆಯಲಿಲ್ಲ. ತಂದೆ ಎರಡು ಪಂಚೆಗಳನ್ನು, ಒಂದು ಬನೀನನ್ನು ಕೊಟ್ಟು 'ಪೆಟ್ಟಿಗೆಯಲ್ಲಿ ಇಡು' ಎಂದಾಗ "ಜಾಗವೇ ಇಲ್ಲ. ಇದ್ನೆಲ್ಲಿ ತುಂಬೋದು..." ಮೆಲ್ಲಗೆ ಅಸಮಾಧಾನವನ್ನು ಸೂಚಿಸಿ ಪೆಟ್ಟಿಗೆಯ ಮೇಲೆ ತಾನೇ ಕುಳಿತು ಬಾಗಿಲನ್ನು ಅದುಮಿ ಬೀಗವನ್ನು ಹಾಕಿದಳು. ಬೀಗದ ಕೈ ಎಲ್ಲಿಯಾದರೂ ಬಿದ್ದು ಹೋದೀತೆಂದು ತನ್ನ ನಾಲ್ಕು ಎಳೆ ಚಿನ್ನದ ಸರಕ್ಕೆ ಪಿನ್ನುಹಾಕಿ ಸೇರಿಸಿಕೊಂಡಳು.

ಮೇಷ್ಟರೂ ಬೆಂಗಳೂರಿಗೆ ಹೋಗುವವರಿದ್ದುದರಿಂದ ಅವರ ಕೇಳಿಕೆಯಂತೆ ಅವರ ಸಂಬಂಧಿಕರ ಮನೆಯಲ್ಲೇ ನಿಲ್ಲುವುದೆಂದು ಮೊದಲು ತೀರ್ಮಾನಿಸಿದ್ದರೂ ಕೊನೆಗೆ ಅದನ್ನು ಬದಲಾಯಿಸಬೇಕಾಯಿತು. ಈ ಹಂಚಿಕೆ ತಾಯಿ, ಮಗಳು ಇಬ್ಬರಿಗೂ ಸರಿಕಂಡಿರಲಿಲ್ಲ. ಕೊನೆಗೆ ಸಾವಿತ್ರಮ್ಮ ಶೀನಿಯ ಮನೆಯನ್ನು ಜ್ಞಾಪಿಸಿದ ಮೇಲೆ ಈ ಸಮಸ್ಯೆ ಒಡನೆಯೇ ಬಗೆಹರಿಯಿತು. "ಹೂ. ಅದೇ ಸರಿ" ಶಕುಂತಲಳೂ ನುಡಿದಳು. "ನಾನೂ ಅದನ್ನೆ ಹೇಳೋಣಾ ಅಂತಿದೆ" ತಾಯಿಯೂ ನುಡಿದರು.

ರಾಯರಂತೂ ಶೀನಿಗೆ ಕಾಗದ ಬರೆದು ಹಾಕಿದ್ದರು.

ಶಕುಂತಲ ಹೊಸ ಊರನ್ನು ನೋಡುತ್ತೇನೆಂಬ ಸಂತೋಷದಿಂದ ಉಬ್ಬಿ ಹೋಗಿದ್ದಳು.

"ಓ ಹೊ ಹೊ! ಏನು ರಾಯರು ಮಗಳು ಎಲ್ಲೊ ಪ್ರಯಾಣಕ್ಕೆ ಸಿದ್ಧಿ ಮಾಡಿಕೊಂಡಿರೊ ಹಾಗಿದೆಯಲ್ಲ....ಏನು ಮದ್ವೆ ನಿಷ್ಕರ್ಷೆಗೆ ಅಂತ ಕಾಣುತ್ತೆ...." ಹಲ್ಲಿಲ್ಲದ ಬಾಯನ್ನು ಪೂರ್ಣ ಅಗಲಿಸಿ ನಾಲಿಗೆಯಿಂದ ತನ್ನ ದಪ್ಪ ತುಟಿಗಳನ್ನು ಸವರುತ್ತ ಮೀಸೆ ಸುಬ್ಬಣ್ಣ ಒಳಗೆ ಬಂದ. ಎಲ್ಲರೂ ನಕ್ಕರು.

"ಏನು ಸುಬ್ಬಣ್ಣ ಅಪರೂಪ ಆಗಿಬಿಟ್ಟೆಯಲ್ಲ. ಬಾಳ ದಿನ ಆಗಿ ಹೋಗಿತ್ತು ನೀನು ಇಲ್ಗೆ ಬಂದು...." ವೆಂಕಟರಾಯರು ಸುಬ್ಬಣ್ಣನ ಹೆಗಲ ಮೇಲೆ ಕೈಯನ್ನು ಹಾಕಿ ನುಡಿದರು.

"ಏನು ಸುಬ್ಬಣ್ಣ ನೀನು ಹೇಳೋದು....? ನಿನ್ನ ಬಿಟ್ಟು ನಾವೆಲ್ಲಾದ್ರೂ ಶಕುಂತಲೆ ಮದ್ವೆ ಮಾಡ್ತೇವೇನೊ?....ಹೋಗ್ಲಿ ಹ್ಯಾಗಿದ್ದಿಯಪ್ಪ. ನನಗಿಂತ ಮೆತ್ತಗಾಗಿ ಬಿಟ್ಟದ್ದೀಯಲ್ಲ. ಕೈಗೆ ಕೋಲು ಬೇರೆ ಬಂದು ಬಿಟ್ಟಿದೆ. ಇದ್ದದ್ದು ಎರಡು ಮುಂದುಗಡೆಯ ಹಲ್ಲೂ ಬಿದ್ದು ಹೋಗಿದೆಯಲ್ಲೊ...." ಸಾವಿತ್ರಮ್ಮ ಅನುಕಂಪ ಸೂಸಿದರು.

"ಏಳು ಸುಬ್ಬಣ್ಣ ಊಟಕ್ಕೆ ಇವರ್ದು ಇದೇ ತಾನೆ ಆಯ್ತು. ಎರಡು ಗಂಟೆ ಟ್ರೈನಿಗೆ ಬೆಂಗಳೂರಿಗೆ ಹೋಗ್ತಾರೆ....ನಾಳೆ ಶಕುಂತಲಳ ಸಂಗೀತದ ಪರೀಕ್ಷೆ ಇದೆ." ಸೀತಮ್ಮ ಅಂದಳು.

"ಇವಳು ಸಂಗೀತದ ಪರೀಕ್ಷೆಗೆ ಕೂತಿರೋದು ನಂಗೆ ಗೊತ್ತಿಲ್ದೆ ಹೋದ್ರೂ ನಮ್ಮ ಹುಡಗಿ ಒಳ್ಳೆ ಗಾನಕೋಕಿಲ ಅಂತ ಎಲ್ಲಾರ ಹತ್ರನೂ ಹೇಳಿದ್ದೆ. ಅದೇ ಸತ್ಯವಾಯ್ತಲ್ಲ." ಶಕುಂತಲೆ ಕಡೆಗೆ ತಿರುಗಿ "ಅರೆ ಹುಡುಗಿ! ಹ್ಯಾಗಾಗಿ ಹೋಗಿದ್ದೀಯೆ!!....ಕೈ ತೊಳ್ದು ಮುಟ್ಟಬೇಕು.

ನೋಡಿದ್ರೆ ದೃಷ್ಟಿ ತಾಗೊ ಹಾಗಿದ್ದಿ....ಎಲ್ಲಾದ್ರೂ ಚೆನ್ನಾಗಿರಮ್ಮ. ಮುಖ್ಯ ವಾಗಿ ಪೂರ್ವ ಜನ್ಮದ ಸಂಸ್ಕೃತ ಫಲ ಇರಬೇಕು ನಿನ್ನಂತ ರತ್ನ ಪಡೆಯೊಕ್ಕೆ" ಶಕುಂತಲೆಯ ತಲೆಯನ್ನು ನೇವರಿಸಿದ.

"ನಂಗೆ ತಿಳಿಸ್ದೇನೇ ಇವಳ ಮದ್ವೆ ಗೊತ್ತುಮಾಡಿದ್ದೀರೊ ಅಂತ ಭಯವಾಗಿತ್ತು. ಇವಳ ಮದ್ವೇನ ನೋಡೂ ಪುಣ್ಯ ನಂಗೂ ಇರ್ಲಿ ಸ್ವಲ್ಪ. ಎಲ್ಲಿದ್ದರೂ ಬರ್ತೇನಿ. ನಂಗೂ ಸ್ವಲ್ಪ ತಿಳ್ಸಿ ಮಾಡಪ್ಪ ಇವಳ ಲಗ್ನಾನಾ" ವೆಂಕಟರಾಯರಿಗೆ ಹೇಳಿದ.

"ಅಯ್ಯೋ ನಿಂಗೆಲ್ಲೊ ಹುಚ್ಚು. ನಿಂಗೆ ಹೇಳ್ದೆ ಮದ್ವೆ ಯಾರು ಮಾಡ್ತಾರೊ. ಗಂಡು ಹೊಂಚೋನು ನೀನೇ ಇರಬೇಕಾದ್ರೆ ನಿಂಗೆ ಗೊತ್ತಾಗ್ದೆ ಹ್ಯಾಗೆ ಆಗುತ್ತೆ ಹೇಳು. ಹೋಗ್ಲಿ ಏಳು ಊಟ ಮಾಡು ಮೊದ್ಲು. ನಿನ್ನ ನಾಲಗೆ ಮಾತಾಡೊಕ್ಕೆ ಮೊದಲಿಟ್ರೆ ನಿಲ್ಲೊ ಹಾಗೇ ಇಲ್ಲ. ಊಟಾನೂ ಬೇಡ ತಿಂಡೀನೂ ಬೇಡ" ಸಾವಿತ್ರಮ್ಮ ಬಲವಂತ ಪಡಿಸಿದುದರಿಂದ ಸುಬ್ಬಣ್ಣ ಕಾಲು ತೊಳೆದುಕೊಂಡು ಬಂದು ಅಡಿಗೆ ಮನೆಯನ್ನು ಹೊಕ್ಕ. ಅಷ್ಟು ಹೊತ್ತಿಗೆ ಸೀತಮ್ಮ ಎಲೆಯನ್ನು ಹಾಕಿ ಬಡಿಸಲು ಕಾದಿದ್ದಳು. ಸಾವಿತ್ರಮ್ಮನೂ ಒಳಗೆ ಬಂದರು.

"ಈಗ ಎಲ್ಲಿಂದ ಬಂದೆ ಸುಬಣ್ಣ....ಏನು ಸಮಾಚಾರ?" ಸಾವಿತ್ರಮ್ಮ ಪ್ರಶ್ನಿಸಿದರು.

"ನೋಡು ಸಾವಿತ್ರಮ್ಮ ನೀನು ಹೇಳ್ದಾಗೇ ಗಂಡನ್ನು ನೋಡಿಕೊಂಡು ಬಂದಿದ್ದೇನಿ." ಪರಿಶಂಚನೆ ಮಾಡಲು ಪಂಚಪಾತ್ರೆಯನ್ನು ಕೈಗೆತ್ತಿಕೊಂಡಿದ್ದವನು ಹಾಗೆಯೇ ಕೆಳಗಿಳಿಸಿಬಿಟ್ಟು, ಎದ್ದು ಜೇಬಿನಿಂದ ಒಂದು ಕಾಗದ ತಂದು "ನೋಡು ಇವು ಗಂಡುಗಳು. ....ಬೇಕಾದಷ್ಟಿವೆ. ಇದ್ರಲ್ಲಿ ಮುಖ್ಯವಾದೋವು ಕೆಲವು. ಮಧುಗಿರಿಯ ಮಾಮಲೆದಾರರು ಮಾಧವ ರಾಯರು ಅಂತ. ಅವರ ಮೂರನೆ ಮಗ ಕೇಶವರಾಯ ಅಂತ. ಹೆಚ್ಚಿಗೆ ಓದಿಲ್ಲ. ಆದರೂ ಹುಡುಗ ಬಹಳ ಬುದ್ಧಿವಂತ. ಹುಡುಗೀಗೆ ಒಂದು ಸೇರು ಭಂಗಾರ ಇಡ್ತಾರಂತೆ. ಒಳ್ಳೆ ಸಂಬಂಧ. ಎರಡನೇದು ಬನ್ನೇರು ಘಟ್ಟದ ಭೀಮರಾಯರ ಮೊದಲನೇ ಮಗ. ಅವನ ಹೆಸರು ಅದೇನೋ ಇದೆಯಂತೆ. ಆದ್ರೆ ಕೂಗೋದು ಅವನ ಆಕಾರಕ್ಕೆ ತಕ್ಕಾಗಿ ಭೀಮರಾಯ ಅಂತಲೇ. ಇವರಿಗೆ ಘಟ್ಟದ ಕೆಳಗಡೆ ಎಂಭತ್ತಾರು ಎಕರೆ ಹತ್ತೊಂಭತ್ತು ಗುಂಟೆ ಗದ್ದೆ ಇದೆ. ಅಲ್ಲೆ ತೊಂಭತ್ನಾಲ್ಕು ಎಕರೆಯ ಒಂದು ದೊಡ್ಡ ಕಾಡಿದೆ...." ಮಧ್ಯದಲ್ಲಿ ಬಾಯಿ ಹಾಕಿ ಹೊರಗಿನಿಂದ ಬಂದ ಶಕುಂತಲೆ

" ಅದ್ರಲ್ಲಿ ಹುಲಿಗಳೆಷ್ಟಿವೆ ?.... ಚಿರತೆ ಎಷ್ಟು.... ಕೋತಿಗಳ ಸಂಖ್ಯೆ ಸಿಕ್ಕಿಲ್ವೊ ಇನ್ನು...." ನಗುತ್ತ ಪ್ರಶ್ನಿಸಿದಳು.

" ಏ ಸುಮ್ನಿರೆ.... ನಿಂಗ್ಯಾಕೆ ಈ ವಿಷಯ. ಹೋಗು.... ಹೋಗು ನಿನ್ನ ರೂಮಿಗೆ. ನಿನ್ನ ಕೆಲ್ಸ ನೀನು ಮಾಡ್ಕೊ ಹೋಗು." ಸುಬ್ಬಣ್ಣ ಹಿಂದೆ ತಿರುಗಿ ನೋಡಿದಾಗ ರೇಗಿದರು ಅಜ್ಜಿ. ಶಕುಂತಲ ಬಾಗಿಲಿನ ಹಿಂದೆ ಸರಿದಳು.

" ಇದಕ್ಕಿಂತಲೂ ಒಳ್ಳೆ ಸಂಬಂಧ ಇನ್ನೊಂದಿದೆ. ಸಕಲೇಶಪುರದ ಶೇಷ ಗಿರಿರಾಯರು ಅಂತ ಒಬ್ಬ ದೊಡ್ಡ ಸಾಹುಕಾರರಿದ್ದಾರೆ. ಅವರ್ಗೆ ಏಲಕ್ಕಿ ತೋಟ, ಕಾಫಿ ತೋಟ ಬೇಕಾದಷ್ಟಿದೆ. ಇವರ ಸೋದರಮಾವನ ಹೆಂಡ ತಿಯ ಅಕ್ಕನ ಮಗಒಬ್ಬ ಇದ್ದಾನೆ. ಅವನೂ ಮನೆಯಲ್ಲೆ ಇದ್ದಾನೆ. ಅವಂದೇ ತೊಟದ ಮೇಲ್ವಿಚಾರಣೆಯೆಲ್ಲಾ. B. A. ಹೋದ ವರ್ಷ ಫೇಲಾ ಯ್ತಂತೆ. ಪುನಃ ಈಸಾರಿ ಕೂತಿದ್ದಾನೆ.... ಇನ್ನೂ ನಾಲ್ಕನೇದು..." ಪುನಃ ಮುಂದುವರಿಸುವುದರಲ್ಲಿದ್ದ.

" ಊಟಾ...ಮಾಡು ಸುಬ್ಬಣ್ಣ...." ಸೀತಮ್ಮ ಎಚ್ಚರಿಸಿದಳು.

" ಹ್ಞೂಂ ! ಆಮೇಲೆ ಹೇಳೂವಿಂತೆ ಬೆಂಗಳೂರಿಗೆ ಹೋಗಿ ಬರ್ಲಿ ಅವ ರೂನು ಯೋಚ್ನೆ ಮಾಡೋಣಾ.... ಊಟ ಮಾಡು ನೀನು...." ಸಾವಿ ತ್ರಮ್ಮನೂ ಹೇಳಿದ ಮೇಲೆ ಪರಿಶಂಚನೆ ಮಾಡಿ ಊಟಕ್ಕೆ ಕುಳಿತ.

" ಇನ್ನೇನು ಸಮಾಚಾರ ಸುಬ್ಬಣ್ಣ.... ಈಗ ಎಲ್ಲಿಂದ ಬಂದೆ. ಕೇಳಲೇ ಇಲ್ಲ ನಾನು...." ಒಳಗೆ ಹೋಗಿ ಸಾಮಾನನ್ನೆಲ್ಲಾ ಪರಿಶೀಲಿಸಿ ಬಂದು ಪ್ರಶ್ನಿ ಸಿದರು ರಾಯರು.

" ರಾಮನಗರದಿಂದ ಬಂದೆ...ಅಲ್ಲಿ ಅದೇ ಅಬ್ದುಲ್‌ಕಾದರ್, ನಮ್ಮೂ ರೋನು ನಿಂಗೊತ್ತಿರಬಹುದು. ಅದೆ ಕಪ್ಪಗೆ ದಪ್ಪನಾಗೆ ಇರ್ಲಿಲ್ವಾ ಅವನೇ.... ಅವನಿಗೂ ರಾಮನಗರದ ಬೀಡಿಗಡಂಗ್‌ನ ಫೋಟಾ ಅಹಮದ್‌ನ ಮಗಳು ಜಹರುನ್ನೀಸಾಗೂ ಕೊಟ್ಟು ಶಾದಿ ಮಾಡಿದ್ರು.... ಅಲ್ಲಿಗೆ ಹೋಗಿ ಬಂದೆ.... ಅಯ್ಯೊ ನನ್ನ ಬುದ್ಧಿಗೆ....! ಜ್ಞಾಪ್ಕ ಶಕ್ತೀನೇ ಹೊರ್ಟುಹೋಯ್ತು. ನೋಡು ವೆಂಕಟರಾಯ ನನ್ನ ಬನೀನಿನ ಜೋಬ್ನಲ್ಲಿ ಕಲ್ಲುಸಕ್ಕರೆ ಉತ್ತುತ್ತೆ ಹಣ್ಣು ಇದೆ. ಶಕುಂತಲಳಿಗೆ ಕೊಡು." ಅಂದ ಸುಬ್ಬಣ್ಣ.

" ಏನು ಸುಬ್ಬಣ್ಣ ನಮ್ಮ ಜನದ ಮದ್ವೆ ಮಾಡ್ಸಿ ಸಾಕಾಯ್ತು ಅಂತ ಈಗ ಮುಸಲ್ಮಾನರ ಮದ್ವೇನೂ ಮಾಡಿಸೋಕ್ಕೆ ಶುರುಮಾಡಿಬಿಟ್ಟೆ ಅನ್ನು...." ರಾಯರು ನಗೆಯಾಡಿದರು.

" ಯಾವದಾದ್ರೆ ಏನಪ್ಪ...ಎಲ್ಲಾದ್ರೂ ಗಂಡ ಹೆಂಡ್ತಿ ಸುಖವಾಗಿದ್ರೆ ಸಾಕು. ಖಾದರ್‌ನ ಅಪ್ಪ ನನ್ನ ಮಗನಿಗೆ ಎಲ್ಲಾದ್ರೂ ಒಂದು ಹೆಣ್ಣು ನೋಡಿ ಅಂತ ಹೇಳಿದ್ದ. ಆವತ್ತು ಎಂದೊ ಒಂದು ಮದ್ವೆಗೆ ಹೋಗಿದ್ದಾಗ ಅಹಮದ್ ತನ್ನ ಮಗಳಿಗೂ ಇನ್ನು ಶಾದಿ ಆಗಿಲ್ಲ ಅಂತ ಹೇಳಿದ್ದ. ಸರಿ ಗಂಟು ಹಾಕ್ದೆ...ಆಗಿಹೋಯ್ತು ಅನ್ನು....ನಾನೇನು ಗಂಟು ಹಾಕೋದು.... ಮುಖ್ಯವಾಗಿ ದೇವರು ಗಂಟು ಹಾಕಿದ್ದ—ಆಗಿಹೋಯ್ತು."

" ನಿನ್ನ ತಲೆ ಕೂದ್ಲು ಇರೋಷ್ಟು ಮದ್ವೆ ಮಾಡ್ಸಿರಬೇಕು ಅಲ್ವೆ ಸುಬ್ಬಣ್ಣ ಮಾವ." ತನ್ನ ಮದುವೆಯಮಾತು ನಿಂತದ್ದರಿಂದ ಧೈರ್ಯ ವಾಗಿ ಪ್ರಶ್ನಿಸಿ ನಗಯಾಡಿದಳು.

" ಇಲ್ಲ....ಇಲ್ಲ....ಇನ್ನು ಒಂದು ಕಡ್ಮೆಇದೆ....ನಿನ್ನ ಮದ್ವೆ ಒಂದು ಮಾಡ್ಸಿದ್ರೆ ಅಲ್ಲಿಗೆ ಸರಿ ಹೋಗುತ್ತೆ" ಹಾಸ್ಯದಲ್ಲೆ ಉತ್ತರವಿತ್ತು ಅತ್ತ ನೊಡಿದ.

ಶಕುಂತಲ ಓಡಿಹೋಗಿದ್ದಳು.

ರಾಯರು ಜಟಕಾ ತಂದರು. ಟ್ರಂಕು ಹಾಸಿಗೆಯನ್ನು ಗಾಡಿಯಲ್ಲಿ ಇಟ್ಟು ಗಾಡಿಯಲ್ಲಿ ಕುಳಿತರು.

" ನಾನು ಬರೋತನ್ಕ ಇರು ಸುಬ್ಬಣ್ಣ...." ರಾಯರು ನುಡಿದು ಗಾಡಿ ಯನ್ನು ಹತ್ತಿದರು.

" ಹೋಗಿಬರ್ತಿವಿ...." ಶಕುಂತಲೆ ನುಡಿದಳು. "ಒಳ್ಳೇದು ಹೋಗಿ ಬಾ...." ತಾಯಿ ನುಡಿದರು.

"ನಾನು ಇರ್ತಿನೊ ಇಲ್ವೊ ಹೇಳಕ್ಕೆ ಆಗೋಲ್ಲ. ಕಲ್ಲಹಳ್ಳಿಯೋರಿಗೆ ಇಲ್ಲಿಗೆ ಬನ್ನೀ ಅಂತ ಹೇಳಿದ್ದೆ. ಅವರೇನಾದ್ರೂ ಬಂದ್ರೆ ಹೋಗ್ತೇನೆ. ಇಲ್ದಿದ್ರೆ ಇಲ್ಲ..." ಸುಬ್ಬಣ್ಣ ನುಡಿದ.

ಗಾಡಿ ಮುಂದೆ ಹೊಯಿತು.

೮

ಶೀನಿ ಸ್ಟೇಷನ್‌ಗೆ ಬಂದಿದ್ದುದರಿಂದ ಅವನ ಮನೆಯನ್ನು ಹುಡುಕುವ ಕಷ್ಟ ತಪ್ಪಿತು ರಾಯರಿಗೆ. ಎರಡುದಿನ ಮುಂಚೆ ಏನೊ ಅವನಿಗೆ ಕಾಗದ ಬರೆದಿದ್ದರು. ಆದರೂ ಬಂದಿರುತ್ತಾನೊ ಇಲ್ಲವೊ ಎಂಬ ಅನುಮಾನ. ಸ್ಟೇಷನ್ ತಲುಪಿದಾಗಲೂ ಇದೇ ಅನುಮಾನ ಅವರನ್ನು ಬಾಧಿಸುತ್ತಿತು. ಅವನು ಬರದೇ ಹೋದರೂ ವಿಳಾಸ ಗೊತ್ತಿದ್ದುದರಿಂದ ಜಟಕಾದವನಿಗೆ ನಾಲ್ಕು ಕಾಸು ಹೆಚ್ಚಿಗೆ ಕೊಟ್ಟಾದರೂ ಮನೆ ಪತ್ತೆ ಹಚ್ಚುವುದೆಂದು ತೀರ್ಮಾ

ನಿಸಿದ್ದರು. ವೆಂಕಟರಾಯರು ಟ್ರೈನಿನಿಂದ ಇಳಿದು ಶಕುಂತಲ ಕೊಟ್ಟ ಟ್ರಂಕನ್ನು ಕೆಳಗೆ ಇಳಿಸುವಷ್ಟರಲ್ಲಿ ಶೀನಿ ಇವರಬಳಿಯಲ್ಲಿ ನಿಂತಿದ್ದ.

"ನಮಸ್ಕಾರ...." ಅಂದ. ಹುಸಿಯಾಗಿ ನಕ್ಕು ಶಕುಂತಲ ಕಡೆ ನೋಡಿದ.

"ಓಹೊ! ಬಂದ್ಯಾ ಶೀನಿ...ಬಂದಿದ್ದೀಯೊ ಇಲ್ವೊ ಅಂತಿದ್ದೆ... ನೀನು ಬಂದದ್ದು ತುಂಬಾ ಅನುಕೂಲವಾಯ್ತು." ರಾಯರು ಹೇಳಿದರು. ಸೀನಿ ಉತ್ತರ ಕೊಡವೆ ಕಿಟಕಿಯಲ್ಲಿ ಇಟ್ಟಿದ್ದ ಹಾಸಿಗೆಯನ್ನು ಕೆಳಗಿಳಿಸಿದ. ಶಕುಂತಲ ಕಿಟಕಿಯಲ್ಲಿ ಹುಸಿಯಾಗಿ ನಕ್ಕಳು. "ಹಾರ್ಮೋನಿಯಂ ಪೆಟ್ಟಿಗೆ ಇದೆ..." ಮೆಲ್ಲಗೆ ನುಡಿದಳು. "ಹೂಂ ನಾನು ತಗೋತೀನಿ ... ನೀನು ಬಾ..." ಹೇಳಿ ಒಳಗೆ ಹೋಗಿ ಹಾರ್ಮೋನಿಯಂ ಪೆಟ್ಟಿಗೆಯನ್ನು ಕೆಳಗಿಳಿಸಿದ. ಶಕುಂತಲೆಯೂ ಇಳಿದು ಬಂದಳು. "ಶನಿವಾರವೂ ಕ್ಲಾಸು ಇರುತ್ತೆ ಅಂತ ಅಂದಿದ್ಯಲ್ಲ ಅದಕ್ಕೆ ನೀನು ಬಂದಿರ್ತಿಯೊ ಇಲ್ವೊ ಅಂತ ನಂಗೂ ಅನುಮಾನವೇ ಆಗಿತ್ತು...." ಮುಗುಳು ಮಲ್ಲಿಗೆಯೊಂದನ್ನು ಅರಳಿಸಿ ಬಂದುದಕ್ಕೆ ಧನ್ಯವಾದವನ್ನು ಅರ್ಪಿಸಿದಳು. "ನೀನು ಬಂದ ಮೇಲೆ ಬರ್ದೆ ಇರೋಕ್ಕೆ ಆಗುತ್ತಾ?" ಮೆಲ್ಲಗೆ ನುಡಿದ. ವೆಂಕಟರಾಯರು ಸ್ವಲ್ಪ ದೂರದಲ್ಲಿ ಕೂಲಿಯವನೊಡನೆ ಮಾತನಾಡುತ್ತಿದ್ದರು. ಶೀನಿ ಅಲ್ಲೇ ನಿಂತಿದ್ದ ಕೂಲಿಯವನ ತಲೆಯಮೇಲೆ ಟ್ರಂಕು ಹಾಸಿಗೆಯನ್ನು ಹೇರಿ ರಾಯರನ್ನು ಕೂಗಿದ. ರಾಯರು ತಮ್ಮ ಕೈಚೀಲದೊಂದಿಗೆ ಇವನ ಬಳಿಗೆ ಬಂದರು. "ಅದನ್ನು ಕೊಡಿ ಅವನ ಕೈಗೆ...." ಶೀನಿ ನುಡಿದು ಕೈ ಚೀಲವನ್ನು ಇಸಿದುಕೊಂಡು ಆ ಕೂಲಿಯ ಕೈಗೆ ಕೊಡಲು ಬಂದಾಗ ರಾಯರು ನಿರಾಕರಿಸಿದರು.... "ಬೇಡ....ಬೇಡ..." ಅಂದರು ಕೂಲಿಯವನ ತಗ್ಗಿದ ತಲೆಯನ್ನು ಕಂಡು.

ಜಟಕಾ ನಿಲ್ದಾಣಕ್ಕೆ ಬಂದರು. ಶೀನಿ ಗೊತ್ತುಮಾಡಿದ್ದ ಜಟಕಾದಲ್ಲಿ ರಾಯರು ಮೊದಲು ಹತ್ತಿ ಕುಳಿತರು. "ನೀನು ಹತ್ತು ಶಕುಂತಲ...." ಶೀನಿ ನುಡಿದಾಗ "ನೀನೇ ಹತ್ತು ನಾನು ಕೊನೆಯಲ್ಲಿ ಕೂತ್ಕೋತೀನಿ...." ಅಂದಳು ಕೊನೆಯಲ್ಲಿ ಕುಳಿತರೆ ದಾರಿ ಉದ್ದಕ್ಕೂ ಊರನ್ನು ನೋಡಬಹುದೆಂಬ ಆಸೆಯಿಂದ.

"ನೀನು ಒಳಗೆ ಕೂತ್ಕೊ ...ನಾನು ಷೂ ಹಾಕಿಕೊಂಡಿದ್ದೇನೆ ಕಾಲು ಮಡ್ಸಿಕೊಂಡು ಕೂತ್ಕೊಳಕ್ಕೆ ಆಗೋಲ್ಲ..." ಸೀನಿ ನುಡಿದ ಮೇಲೆ ಅವಳು ಒಳಗೆ ಕೂಡಲೇ ಬೇಕಾಯಿತು. ಶೀನಿ ಹೊರಗಡೆ ಮುಖ ಮಾಡಿ ಕುಳಿತ.

"ಸೀತಮ್ಮ, ಸಾವಿತ್ರಮ್ಮ ...ಎಲ್ಲಾರೂ ಚೆನ್ನಾಗಿದ್ದಾರಾ .......?"

ರಾಯರ ಕಡೆಗೆ ತಿರುಗಿ ಶಕುಂತಲಳನ್ನು ಉದ್ದೇಶಿಸಿ ಪ್ರಶ್ನಿಸಿದ.

" ಹೂಂ....ಚೆನ್ನಾಗಿದ್ದಾರೆ " ರಾಯರೇ ಉತ್ತರ ಹೇಳಿದರು.

" ನಾಳೆ ಎಷ್ಟು ಹೊತ್ತಿಗೆ ನಿನ್ನ ಪರೀಕ್ಷೆ ಇರೋದು...." ನೇರವಾಗಿಯೇ ಈ ಸಾರಿ ಅವಳನ್ನೇ ಪ್ರಶ್ನಿಸಿದ.

" ಬೆಳಿಗ್ಗೆ ಒಂಭತ್ತು ಗಂಟೆಗೆ...." ಶಕುಂತಲ ನುಡಿದಳು. " ನಿಮ್ಮ ನೇಲಿ ಅಮ್ಮಾ ಚೆನ್ನಾಗಿದ್ದಾರಾ....ನಮ್ಮಮ್ಮ, ಅಜ್ಜಿ ಅವರೆಲ್ಲಾ ತುಂಬಾ ಜ್ಞಾಪಿಸಿಕೊಳ್ತಾ ಇರ್ತಾರೆ...." ಮುಂದುವರಿಸಿದಳು.

" ನಮ್ಮನೇಲೂ ಒಂದಲ್ಲ ಒಂದು ವಿಷಯಕ್ಕೆ ನಿಮ್ಮನೆ ನೆನಪು ಬರ್ತಾನೆ ಇರುತ್ತೆ. ಇಲ್ಲಿಗೆ ಬಂದು ಆಗ್ಲೆ ಮೂರು ನಾಲ್ಕು ವರ್ಷ ಆದ್ರೂ ಇನ್ನೂ ಚೆನ್ನಾಗಿ ಒಗ್ಗೇ ಇಲ್ಲ. ಆ ಊರೇ ಚೆನ್ನಾಗಿತ್ತು...." ಶೀನಿ ನುಡಿದ.

" ಹುಟ್ಟಿದ ಊರು....ಹುಟ್ಟಿದ ಮನೆ ಅಭಿಮಾನ ಎಲ್ಲಿ ಹೋಗುತ್ತೆ...." ರಾಯರು ನುಡಿದರು.

ಗಾಡಿ ರಭಸವಾಗಿ ಶೇಷಾದ್ರಿಪುರದ ಇಳಿಜಾರಿನಲ್ಲಿ ಸಾಗಿ ಪೋಲೀಸ್ ಸ್ಟೇಷನ ಪಕ್ಕದಲ್ಲಿ ತಿರುಗಿ ಅಲ್ಲೆ ಇದ್ದ ಒಂದು ದೊಡ್ಡ ಬಂಗಲೆಯ ಮುಂದೆ ನಿಂತಿತು.

" ನಿಮ್ಮನೆ ಎಷ್ಟು ದೊಡ್ಡದು....! ಒಳ್ಳೆ ಅರಮನೆ ಇದ್ದಾಗಿದೆ." ಶಕುಂತಲ ಆಶ್ಚರ್ಯವನ್ನು ವ್ಯಕ್ತಪಡಿಸಿದಾಗ ಶೀನಿ ಗಹಗಹಿಸಿದ. "ಇದು ನಮ್ಮ ಮನೆಯಲ್ಲ ಅಲ್ಲಿ ನೋಡು ಅವರದು...." ನುಡಿದು ಕಣ್ಣಿನಲ್ಲಿ ಮೇಲೆ ತೋರಿಸಿದಾಗ ಒಬ್ಬಳು ಸಿಂಧಿ ಹುಡುಗಿ ಮಹಡಿಯ ಮೇಲೆ ನಿಂತು ಇವರನ್ನೇ ನೋಡುತ್ತಿದ್ದಳು. ಶಕುಂತಲಳಿಗೆ ಅರ್ಥವಾಗಲಿಲ್ಲ. ಶೀನುವನ್ನು ಸುಮ್ಮನೆ ಅನುಸರಿಸಿದಳು. " ನಮ್ಮನೆ ಔಟ್ ಹೌಸ್ " ಶೀನಿ ನುಡಿದ. ರಾಯರು " ಓಹೊ !" ಅಂದರು. ದೊಡ್ಡ ಬಂಗಲೆಯ ಬಲಗಡೆಯಿದ್ದ ದಾರಿಯಲ್ಲಿ ಮೂವರು ಹತ್ತು ಗಜ ಹೋಗುವಲ್ಲಿ ಶೀನುವಿನ ತಾಯಿ, "ಬನ್ನಿ....ಬನ್ನಿ....ಶಕುಂತಲ ಎಷ್ಟು ಬೆಳೆದು ಬಿಟ್ಟಿದ್ದಾಳೆ...." ಸ್ವಾಗತಿಸಿದರು.

" ರಾಯರು ಒಬ್ಬಳೇ ಮಗಳು ಅಂತ ಚೆನ್ನಾಗಿ ಬೆಳೆಸಿದ್ದಾರೆ." ಶೀನಿ ನುಡಿದಾಗ ರಾಯರು ತೆಳುವಾಗಿ ನಕ್ಕರು.

ಕೈಕಾಲು ತೊಳೆದುಕೊಂಡು ರಾಯರು ರೂಮಿಗೆ ಬರುವಷ್ಟರಲ್ಲಿ ಉಪ್ಪಿಟ್ಟು ಅವರನ್ನು ಸ್ವಾಗತಿಸಿತು. ಅದೇತಾನೆ ಟೇಬಲ್ಲಮೇಲೆ ಎರಡು ತಟ್ಟೆ ಉಪ್ಪಿಟ್ಟನ್ನು ಇಟ್ಟು ಶಕುಂತಲೆ ಇವರ ಬರುವನ್ನೆ ಕಾಯುತ್ತ ನಿಂತಿ

ದ್ದಳು. ಶೀನುವಿನ ತಾಯಿ ಎರಡು ಲೋಟಾಗಳಲ್ಲಿ ನೀರನ್ನು ತಂದು "ತಗೊಳ್ಳಮ್ಮ ಶಕುಂತಲ ಒಳಗಿಡು." ಕೂಗಿದರು. ಶಕುಂತಲ ಅದನ್ನು ತೆಗೆದುಕೊಂಡುಬರಲು ಹೊರಟಳು.

" ಲೇ ಶಕುಂತಲ ಕೂತ್ಕೊ ನೀನು ನಮ್ಮನೆಗೆ ಬಂದು ನೀನು ಕೆಲ್ಸ ಮಾಡಬಾರದು. ಅವಳ್ನ ಯಾಕಮ್ಮ ನೀನು ಕೂಗಿದ್ದು ? ನನ್ನ ಕೂಗಿದ್ರೆ ಆಗ್ತಾ ಇರಲಿಲ್ವೆ .. ? ಕೊಡು." ಎದ್ದು ಹೋಗಿ ತಾಯಿಯ ಕೈಯಿಂದ ಲೊಟಾವನ್ನು ಇಸಿಕೊಂಡು ಬಂದು ರಾಯರ ಮುಂದಿಟ್ಟ.

" ತಗೋ ನೀನು ತಿನ್ನು...." ಶಕುಂತಲೆಯ ಕಡೆಗೆ ತಿರಗಿ ಟೇಬಲ್ಲ ಮೇಲಿದ್ದ ಇನ್ನೊಂದು ತಟ್ಟೆ ಉಪ್ಪಿಟ್ಟನ್ನು ನಿರ್ದೇಶಿಸಿ ನುಡಿದ.

" ನಾನು ಒಳಗೆ ಇಸಕೋತೀನಿ ನೀನು ತಿನ್ನು ನಿಂಗೇ ಅದು ತಂದು ಇಟ್ಟಿರೋದು." ಒಳಗೆ ಹೋಗಲು ಬಾಗಿಲಿನತ್ತ ತಿರುಗಿದಳು. "ನಮ್ಮ ನೆಗೆ ಬಂದಮೇಲೆ ನಾವು ಹೇಳ್ದಂಗೆ ಕೇಳಬೇಕು.....ನೋಡಿ ರಾಯ್ರೆ.... ನಿಮ್ಮ ಮಗಳ ಜಂಭಾನಾ ?" ತಂದೆಗೆ ದೂರನ್ನಿತ್ತು ಕೈ ಹಿಡಿದು ಕೂಡಿಸಿದ. ಶಕುಂತಲ ಒಳಗೇ ನಕ್ಕು ಹೊರಗೆ ಮುಖ ಸಿಂಡರಿಸಿದಳು...."ನೀನೊಬ್ಬ ಹಟವಾದಿ....ನಿನ್ನ ಹುಡಗತನ ಇನ್ನೂ ಬಿಟ್ಟಿಲ್ಲ ...ನನ್ನ ಕೈ ಹೋಯ್ತು." ಮುಂಗೈಯನ್ನು ಹಿಸಕಿಕೊಳ್ಳುತ್ತ ನುಡಿದಳು ಶಕುಂತಲ. ತುಟಿ ಅರಳಿ ನಗು ಹಿಣಕಿ ನೋಡುತ್ತಿತ್ತು.

" ಹೋಗ್ಲಿ ಬಾರೆ....ಇಲ್ಲೆ ತಿನ್ನು ಎಲ್ಲಿ ತಿಂದ್ರೆ ಏನು ?" ರಾಯರು ತಟ್ಟೆಯನ್ನು ಕೈಗೆತ್ತಿಕೊಳ್ಳುತ್ತ ನುಡಿದರು. "ಇದೆಲ್ಲಾ ಯಾಕೆ ಮಾಡಿ ಸೊಕ್ಕೆ ಹೋದ್ಯಪ್ಪ....ಸುಮ್ನೆ....ವೃಥಾ ತೊಂದ್ರೆ ನಿಂಮ್ಗೆ...."

" ತೊಂದ್ರೆ ಏನ್ಬಂತು ಮಹಾ....! ದಿನವೂ ಬರ್ತಿರಾ ನೀವು...." ಶಾರದಮ್ಮ ಅಡಿಗೇ ಮನೆಯಲ್ಲೆ ಉತ್ತರ ಕೊಟ್ಟರು.

" ಹೋಗ್ಲಿ ನಿಂಗೆ ಇನ್ನೊಂದು ಪ್ಲೇಟು ತರ್ತೀನಿ ತಾಳು ಮೂವರೂ ತಿನ್ನೋಣಾ." ಶಕುಂತಲ ಮೇಲಕ್ಕೆ ಎದ್ದಳು.

" ಏನೂ ಬೇಡ ...ಅಷ್ಟೇನೂ ಕಷ್ಟಾನೇ ತಗೋಬೇಕಾಗಿಲ್ಲ. ನಾನೆ ಒಳಗೋಗಿ ಇಸಕೊಂಡು ಬರ್ತೀನಿ ..." ಶಕುಂತಲೆಯನ್ನು ಪುನಃ ಕೂಡಿಸಿ ಹೊರಗೆ ಹೋಗುವಷ್ಟರಲ್ಲಿ ತಾಯಿಯೇ ತೆಗೆದುಕೊಂಡು ಬಂದರು. "ಅವಳ್ನ ಯಾಕೆ ಸುಮ್ನೆ ಗೋಳಾಡಿಸ್ತಿಯೊ. ಎಲ್ಲಿ ಬೇಕೆ [illegible] ಬಿಡು. ನಿಂದೇನು ಬಲವಂತ. ಇಲ್ಲೆ ತಿನ್ನು ...ಅ[illegible] ನುಡಿದರು.

" ನೋಡಿ ಶಾರದಮ್ಮ ನಿಮ್ಮಗನ ಗಲಾಟೇನಾ ? ನಾನು ನಿಮ್ಮ ಹತ್ರ ತಿನ್ನೋಣಾ ಅಂದ್ರೆ....ಇಲ್ಲೆ ಕೂತ್ಕೊ ಅನ್ನೋದು... " ಶಕುಂತಲ ತಟ್ಟೆಯನ್ನು ಹಿಡಿದುಕೊಂಡು ಶೀನಿಯನ್ನು ನೋಡಿ ಹುಸಿಯಾಗಿ ನಕ್ಕು ಅಡಿಗೆ ಮನೆಗೆ ಹೋದಳು. ತಾಯಿ ನಕ್ಕರು.

" ಹೋಗ್ಲಿ ಬಿಡೊ ಶೀನಿ ಅವಳ್ಗೆ ಇವತ್ತು ಎಲ್ಲಿಲ್ಲದ ನಾಚ್ಕೆ ಬಂದಿದೆ." ರಾಯರು ನುಡಿದರು. " ನಾಚ್ಕೆ ಯಾಕೆ....! ಅಂತೂ ಆವಟ....!!" ನಾಲ್ಕು ಹೆಜ್ಜೆ ಮುಂದೆ ಹೋದ ಶೀನಿ ನುಡಿದು ರೂಮಿಗೆ ಪುನಃ ಹಿಂತಿರುಗಿದ.

ಅಡಿಗೆ ಮನೆಯಲ್ಲಿ ಶಕುಂತಲೆ ಗಹಗಹಿಸಿದಳು.

ಶೀನಿ ರಾಯರು ಮಾತಿಲ್ಲವೆ ತಿಂಡಿಯನ್ನು ತಿಂದು ಮುಗಿಸಿದರು. ರಾಯರು ಕಿಟಕಿಯಲ್ಲಿ ಕೈಯನ್ನು ತೂರಿಸಿ ಹೊರಗೆ ತೊಳೆದರು. ಶೀನಿ ತಟ್ಟೆಯಲ್ಲೆ ತೊಳೆದುಕೊಂಡ.

" ಅಮ್ಮಾ .." ಕೂಗಿದ ಶೀನಿ.

ಈ ನಾರಿ ಕಾಫಿಯನ್ನು ತೆಗೆದುಕೊಂಡು ಅಮ್ಮ ಬರಲಿಲ್ಲ. ನಗುತ್ತ ತಟ್ಟೆಯಲ್ಲಿ ಮೂರು ಲೋಟಾ ಕಾಫಿಯನ್ನು ಇಟ್ಟುಕೊಂಡು ಬಂದಳು. " ನಾನೇನೋ ಕಾಫೀನ ಇಲ್ಲೆ ಕುಡೀತೀನಿ " ಶೀನಿಯ ಕಡೆಗೆ ತಿರುಗಿ ನುಡಿದಳು. ಒಂದು ಲೋಟಾವನ್ನು ತಂದೆಯ ಮುಂದೆ ಇಟ್ಟಳು. ಇನ್ನೊಂದು ಲೋಟಾವನ್ನು ಶೀನಿಯ ಕೈಗೆ ಕೊಟ್ಟಳು. " ನೀನೇನು ಇಲ್ಲೆ ಕುಡಿಬೇಕಾಗಿಲ್ಲ ...ಒಳಗೆ ಕುಡಿ ..." ಮುಖವನ್ನು ದಪ್ಪಗೆ ಮಾಡಿಕೊಂಡು ನುಡಿದ.

" ಶೀನುಗೆ ಎಷ್ಟು ಬೇಗ ಕೋಪ ಬಂದುಬಿಡುತ್ತೆ...." ಶಕುಂತಲ ಅಲ್ಲೆ ಕುಳಿತು ಕಾಫಿಯನ್ನು ರುಚಿ ನೋಡಿದಳು. ಕಣ್ಣು ಅರಳಿ ನಗುತ್ತಿತ್ತು. ಶೀನಿಗೆ ನಗು ಬಂದರೂ ಕಾಫಿಯನ್ನು ಊದಿ ಕುಡಿದ.

ರಾಯರೂ, ಶೀನಿ ಸ್ವಲ್ಪ ಹೊತ್ತು ಬೆಂಗಳೂರಿನ ಬೆಳೆವಣಿಗೆಯ ವಿಷಯವಾಗಿ ಮಾತನಾಡಿದರು. ರಾಯರು ತಾವು ಈಗ್ಗೆ ಐದು ವರ್ಷಗಳ ಹಿಂದೆ ನೋಡಿದುದಕ್ಕೂ ಈಗ್ಗೂ ಬಹಳ ವ್ಯತ್ಯಾಸವಾಗಿ ಹೋಗಿದೆ ಎಂದು ಆಶ್ಚರ್ಯ ಸೂಚಿಸಿದರು. ಶೀನಿ ದಿನದಿನಕ್ಕೆ ಬದಲಾಗುತ್ತಿದೆ ಎಂದು ತಿಳಿಸಿದ.

ಮೂವರೂ ಮುಖ ತೊಳೆದುಕೊಂಡು ಬಂದು ಬಟ್ಟೆಯನ್ನು ಬದಲಾಯಿಸುವ ಹೊತ್ತಿಗೆ ಹಾಲಿನಲ್ಲಿದ್ದ ಗಡಿಯಾರ ಆರು ಗಂಟೆ ಹೊಡೆದು ಎಚ್ಚರಿಸಿತು. ತಿರುಗಾಡಿ ಬರಲು ಹೊರಗೆ ಹೊರಟರು.

ಶೇಷಾದ್ರಿಪುರದ ಸರ್ಕಲ್ಲಿಗೆ ಬಂದು ಅಲ್ಲಿಂದ ನೆಟ್ಟಗೆ ಮೆಜಸ್ಟಿಕ್ಕಿನ

ಕಡೆಗೆ ಹೊರಟರು. ಶೀನಿ ದಾರಿಯಲ್ಲಿ ಸಿಕ್ಕಿದ ಎಲ್ಲಾ ದೊಡ್ಡ ಬಂಗಲೆ, ಮನೆಗಳನ್ನೂ ವಿವರಿಸಿ ಹೇಳುತ್ತಿದ್ದ. ಎಲೆಕ್ಟ್ರಿಕ್ ಸ್ಟೇರ್ಷ ತೋರಿಸಿಕೊಂಡು ಮೆಜಿಸ್ಟಿಕ್ ಸರ್ಕಲ್ಲಿಗೆ ಬಂದರು. ಅಷ್ಟೊಂದು ಜನ ಒಟ್ಟಿಗೇ ಯಾವ ನೆಲೆಯೂ ಇಲ್ಲದೆ ಓಡಾಡುತ್ತಿರುವುದು ಅವಳಿಗೆ ಒಂದು ಸಮಸ್ಯೆಯಾಗಿತ್ತು.

ಅಲ್ಲಿಂದ ಮುಂದೆ ಕೆಂಪೆಗೌಡ ರೋಡಿನಲ್ಲಿ ಹಾಗೆ ಮೇಲಕ್ಕೆ ಹೋಗಿ ಮೈಸೂರು ಬ್ಯಾಂಕಿನ ಬಳಿಯಲ್ಲಿ ಹೋಗಿ ನಿಂತರು. ಚಿತ್ರಮಂದಿರಗಳನ್ನು ಎಣಿಸಿಯೇ ಬೆರಗಾಗಿದ್ದಳು ಶಕುಂತಲ. "ಅದೆ ನಮ್ಮ ಕಾಲೇಜು..." ಸೆಂಟ್ರಲ್ ಕಾಲೇಜಿನ ಕಡೆಗೆ ಬೆಟ್ಟು ಮಾಡಿ ತೋರಿಸಿದ.

"ಎಷ್ಟು ದೊಡ್ಡದು ನಿಮ್ಮ ಕಾಲೇಜು...." ಆಶ್ಚರ್ಯ ಸೂಚಿಸಿದಳು ಶಕುಂತಲ.

"ಮಾರ್ಕೆಟ್ಟಿಗೆ ಹೋಗಿ ಅಲ್ಲಿಂದ ಸೀದಾ ಬಸ್ಸಿನಲ್ಲಿ ಮನೆಗೆ ಹೋಗೋಣಾ ...ಸಾಕು ಇವತ್ತು. ನಾಳೆ ಬೇಕಾದ್ರೆ ಇನ್ನೆಲ್ಲಿಗಾದ್ರೂ ಹೋಗೋಣಾ" ಶೀನ ಅಂದಾಗ "ಹಾ! ಇಷ್ಟು ಬೇಗ ಮನೆಗೆ... !" ಶಕುಂತಳ ಅಸಂತೋಷ ವ್ಯಕ್ತಪಡಿಸಿದಳು.

ಶೀನಿ ಕಾರಣವಿಲ್ಲದೆ ನಕ್ಕ!

ಮೂವರೂ ಮಾರ್ಕೆಟ್ಟಿಗೆ ಬಂದು ಮಾರ್ಕೆಟ್ಟನೆಲ್ಲಾ ಸುತ್ತಾಡಿದರು. ನಾಳೆಯ ಅಡಿಗೆಗೆಂದು ಬಟಾಣಿ, ಕೋಸು, ಕ್ಯಾರೆಟ್ ಕೊಂಡುಕೊಂಡ "ಬಹಳ ದುಬಾರಿ ... ಈ ತರಕಾರಿ ಯಾಕೆ ಕೊಂಡುಕೊಂಡೆ ಇವನ್ನ" ರಾಯರು ಪ್ರಶ್ನಿಸಿದಾಗ "ಅಪರೂಪದ ತರಕಾರಿ ಇವು ತುಮಕೂರಿನಲ್ಲಿ ... ಇವೇನು ಇಲ್ಲಿ ದುಬಾರಿಯಲ್ಲ" ಶೀನು ಉತ್ತರ ಕೊಟ್ಟ. ಹಣ್ಣಿನ ಅಂಗಡಿ ಬಳಿಗೆ ಬಂದು ಒಂದು ಡಜ಼ನ್ ಕಿತ್ತಲೆ ಹಣ್ಣುಗಳನ್ನು ಕೊಂಡರು ರಾಯರು. ಶೀನಿ ಚೆನ್ನಾಗಿದ್ದ ಆರು ಸಪೋಟಾಗಳನ್ನು ಕೊಂಡುಕೊಂಡ.

ಶಕುಂತಲೆ ಎದುರಿಗಿದ್ದ ಟೇಪು, ಬಳೆಯ ಅಂಗಡಿಯನ್ನು ನುಂಗುವ ಕಣ್ಣಲ್ಲಿ ನೋಡುತ್ತಿದ್ದಳು. ಹೊಸ ವಸ್ತ್ರಗಳು ಕಣ್ಣನ್ನು ಸೆಳೆದವು. ಆಸೆ ಮೈಯುಬ್ಬಿ ಹರಿದಿತ್ತು.

ಶಕುಂತಲ ತಂದೆಯಕಡೆಗೊಮ್ಮೆ ನೋಡಿ ಧೈರ್ಯವಾಗಿ ಒಂದು ಅಂಗಡಿಯ ಮುಂದೆಹೋಗಿ ನಿಂತಳು. ಅಂಗಡಿಯವನು ಯಾವುದೊ ಬಳೆಯನ್ನು ಚುನಾಯಿಸಿ ಒಂದು ಡಜ಼ನ್ ಕಟ್ಟಿಕೊಟ್ಟ. ಹತ್ತಾರು ಟೇಪನ್ನು ತೋರಿಸಿ ಹೊಗಳಿ ಕೊನೆಗೆ ತಾನೇ ಆರಿಸಿ ಹತ್ತುಗಜ ಬೇರೆ ಬೇರೆ ಟೇಪನ್ನು ಕತ್ತರಿಸಿ ಪಟ್ಟಣ ಕಟ್ಟಿಕೊಟ್ಟ. ಶಕುಂತಲಳಿಗೆ ಅಷ್ಟೊಂದು ವಸ್ತುಗಳಲ್ಲಿ

ಯಾವುದನ್ನು ಆರಿಸುವುದು.! ಯಾವುದನ್ನು ಬಿಡುವುದು.! ಒಂದಕ್ಕಿಂತ ಇನ್ನೊಂದು ಚೆನ್ನ! ಅನ್ನಿಸಿತ್ತು. ಕೊನೆಗೆ ಅಂಗಡಿಯವನೇ ಇವಳ ಚಿಂತೆಯನ್ನು ಬಗೆ ಹರಿಸಿದ್ದ.

ಹೊರಗೆ ಹಾದು ಹೋಗುವಾಗ ದಾರಿಯಲ್ಲಿ ಇದ್ದ ಹೂವಿನವರೆಲ್ಲಾ ರಾಯರನ್ನೂ, ಶಕುಂತಲೆಯನ್ನು ಅಡ್ಡ ಹಾಕಿದರು. ಶಕುಂತಲಳ ಸುತ್ತ, ತರಹಾವಾರಿ ಹೂವಿನ ದಂಡೆ, ಹೂವಿನ ಕುಚ್ಚು, ಹಾರ, ಹೂವಿನಪಟ್ಟಿಗಳನ್ನು ಮುಂದೆ ಹಿಡಿದರು. ಶಕುಂತಲೆ ಬೆಪ್ಪು ಹಿಡಿದವಳಂತೆ ಸುಮ್ಮನೆ ನಿಂತಳು. ಶೀನಿ ಎಲ್ಲರನ್ನೂ ದೂರ ಕಳಿಸಿದ. ತಾನೇ ಹೂವಿನ ದಿಂಡನ್ನೂ, ಸುಗಂಧರಾಜ ಹೂವಿನ ಒಂದು ದೊಡ್ಡ ಕುಚ್ಚನ್ನೂ ಆರಿಸಿ ಪೊಟ್ಟಣ ಕಟ್ಟಿಸಿ ಶಕುಂತಲೆಯ ಕೈಗಿತ್ತ. ಶೀನಿ ದುಡ್ಡನ್ನು ಕೊಡುವುದರಲ್ಲಿ ರಾಯರೇ ಕೊಟ್ಟರು. ಶೀನಿ ನಕ್ಕು ಸುಮ್ಮನಾದ.

ಶಕುಂತಲ ಮಾರ್ಕೆಟ್ಟಿನಿಂದ ಹೊರಗೆ ಬಂದು ಎದುರಿಗೆ ನಿಂತಿದ್ದ ಬಸ್ಸನ್ನು ಕಂಡು ಎಲ್ಲೋ ದಾರಿಯನ್ನು ದಾಟಲು ಹೋದಳು. "ಶಕುಂತಲಾ...." ಕೂಗಿದ ಶೀನಿ. "ಅಲ್ಲಿ ಹೋಗಬಾರ್ದು... ಹೋದ್ರೆ ಪೋಲಿಸಿನೋರು ಹಿಡ್ಕೊಂಡು ಹೊಗ್ತಾರೆ...." ಕೈಹಿಡಿದು ಎಳೆದ. ಆಕೆ ಇವನ ಕಡೆಗೆ ತಿರುಗಿ ನೋಡಿದಾಗ ಕಣ್ಣು ಅರಳಿ, ತುಟಿ ಬಿರಿದಿತ್ತು.

ನಡೆಯುವವರಿಗೇ ಏರ್ಪಡಿಸಿರುವ ದಾರಿಯಲ್ಲಿ ನಡೆದು ಎದುರಿನ ಬಸ್ ನಿಲ್ದಾಣಕ್ಕೆ ಬಂದರು, ಐದು ನಿಮಿಷ ಕಾಯುವುದರಲ್ಲಿ ಬಸ್ಸು ಬಂತು.

ಮನೆಗೆ ಬಂದು ಊಟಮಾಡಿ ಸ್ವಲ್ಪ ಹೊತ್ತು ಮಾತನಾಡಿ ಮಲಗುವ ಹೊತ್ತಿಗೆ ಹಾಲಿನ ಗಡಿಯಾರ ಹನ್ನೊಂದು ಬಡಿಯಿತು.

ಹೊಸ ಜಾಗವಾದ್ದರಿಂದ ಬಹಳಹೊತ್ತು ಶಕುಂತಲೆಗೆ ನಿದ್ರೆ ಬಂದಿರಲಿಲ್ಲ.

ಬೆಳಿಗ್ಗೆ ಐದು ಗಂಟೆಗೇ ಎದ್ದ ಶಕುಂತಲಳ ಸಡಗರ ಹೇಳತೀರದು. ಅದಕ್ಕೆ ಮುಂಚೆಯೇ ಎದ್ದು ಶೀನುವಿನ ತಾಯಿ ನೀರೊಲೆಯನ್ನು ಹೊತ್ತಿಸಿಟ್ಟಿದ್ದರು. ಶಕುಂತಲ ಹೋಗಿ ಮೈ ತೊಳೆದು ಬಂದಳು. ಗುಲಾಬಿ ಬಣ್ಣದ ಸಿಲ್ಕ್ ಸೀರೆಯನ್ನು ಉಟ್ಟಳು. ಮುಖಕ್ಕೆ ಸ್ನೊ, ಪೌಡರು ಹಚ್ಚಿ ಶೃಂಗಾರ ಮಾಡಿಕೊಂಡಳು. ಕನ್ನಡಿಯ ಮುಂದೆ ನಿಂತು ನಕ್ಕರೆ ಹ್ಯಾಗೆ ಕಾಣಿಸುತ್ತೇನೊ ಎಂದು ಒಮ್ಮೆ ನಕ್ಕು ನೋಡಿದಳು.

"ಸಾಕು....ಸಾಕು....ನೀನು ನಿಜವಾಗ್ಲೂ ಚೆನ್ನಾಗಿದ್ದೀಯಾ.... ನಕ್ಕರೆ ಇನ್ನೂ ಚೆನ್ನಾಗಿರುತ್ತೆ..." ಸ್ನಾನಕ್ಕೆ ಹೋಗುತ್ತ ಶೀನಿ ನುಡಿದು

ಹೋದ. ಕನ್ನಡಿ ಮುಂದೆ ಇನ್ನೊಮ್ಮೆ ನಕ್ಕು ಸೀರೆಯ ಸೆರಗನ್ನು ತೀಡಿ, ನೆರಿಯನ್ನು ಸರಿಪಡಿಸಿಕೊಂಡು ಗಂಟಲನ್ನು ಸರಿಪಡಿಸಿಕೊಳ್ಳಲು ಹಾರ್ಮೋನಿಯಂ ಪೆಟ್ಟಿಗೆ ತೆಗೆದು ಅದನ್ನು ಕೆಳಗಿಳಿಸಿ ಅದರ ಮುಂದೆ ಕುಳಿತಳು. ಟ್ರೈನಿನಲ್ಲಿ, ಮತ್ತೆ ಜಟಕಾದಲ್ಲಿ ಕುಲಕಿದ್ದುದರಿಂದ ರೀಡ್ಸ್‌ಗಳು ಕೆಲವು ಅಸ್ತವ್ಯಸ್ತವಾದ್ದವು ಅಂತ 'ಕಾಣುತ್ತೆ. ಹಾರ್ಮೋನಿಯಂ ತಿದಿಯನ್ನು ಒತ್ತಿದೊಡನೆ ಕರ್ಕಶವಾಗಿ ಹತ್ತಾರು ಸ್ವರಗಳಲ್ಲಿ ಅರಚಲು ಮೊದಲುಮಾಡಿತು. ಅದನ್ನು ಸರಿಪಡಿಸಲು ಹತ್ತು ನಿಮಿಷ ಹಿಡಿಯಿತು. ಇನ್ನು ಒಂದೆರಡು ಹಾಡನ್ನು ಹೇಳಿದ್ದಳು ಅಷ್ಟರಲ್ಲಿ ರಾಯರು ಹೊತ್ತಾಯಿತೆಂದು ಎಚ್ಚರಿಸಿದರು. ಪರೀಕ್ಷಾ ಕೇಂದ್ರ ದೂರವಿದೆಯೆಂದು ಶೀನಿ ಜೇರೆ ನುಡಿದ. "ಎದ್ದೆ" ಎಂದು ಇನ್ನೊಂದು ಹಾಡನ್ನು ಹೇಳಿ ಹಾರ್ಮೋನಿಯಂನ್ನು ಪೆಟ್ಟಿಗೆಯಲ್ಲಿಟ್ಟು ಮುಚ್ಚಿದಳು. ಶೀನಿ ಜಟಕಾ ತಂದ.

ಮೂವರೂ ಪರೀಕ್ಷಾ ಕೇಂದ್ರಕ್ಕೆ ಹೋದರು. ಶಕುಂತಲ ಪರೀಕ್ಷೆಯಲ್ಲಿ ಬಹು ಚೆನ್ನಾಗಿ ಹಾಡಿದ್ದಳು. "ಫಸ್ಟ್ ಕ್ಲಾಸು ಗ್ಯಾರಂಟಿ" ಇವಳ ಹಾಡಿನ ಮೇಸ್ಟರು ನೀಲಕಂಠಾಚಾರ್ ಅಲ್ಲೇ ಭವಿಷ್ಯ ನುಡಿದರು. "ಧನ್ಯವಾದಗಳು" ಶೀನಿ ನುಡಿದ. ಅವಳು ತಲೆ ಎತ್ತಿ ಅವನ ಕಡೆ ನೋಡಿದಾಗ ತೆಳುವು ತುಟಿಗಳು ಅರಳಿ ಮುಖ ನಗುತ್ತಿತ್ತು. ಕೆಂಪು ತುಂಬಿದ ಕೆನ್ನೆಯಲ್ಲಿ ಸುಳಿ ಸುಳಿದಿತ್ತು. 'ನೋ ಮೇನ್‌ಷನ್ ಪ್ಲೀಸ್' ಎಂದು ಹೇಳಬೇಕೆಂದು ಅವಳ ಮೇಡಂ ಹೇಳಿದ್ದುದು ಜ್ಞಾಪಕಕ್ಕೆ ಬಂದರೂ ಅದು ಕೊರಳಲ್ಲೇ ನಿಂತಿತ್ತು.

"ಬಹಳ ಚೆನ್ನಾಗಿ ಹಾಡಿದೆ ಕಣಮ್ಮ...." ಮೇಸ್ಟರು ಹತ್ತಿರ ಬಂದು ಹೊಗಳಿದರು.

"ಎಲ್ಲಾ ನಿಮ್ಮ ಆಶೀರ್ವಾದ" ಬಹು ಕಷ್ಟಪಟ್ಟು ನುಡಿದಳು.

ಮೇಸ್ಟರನ್ನು ಇನ್ಯಾರೊ ಕರೆದುದರಿಂದ ರಾಯರಿಗೆ "ನಮಸ್ಕಾರ" ಮಾಡಿ ಹೊರಟು ಹೋದರು. "ನಾಡಿದ್ದು ಮನೆಗೆ ಬನ್ನಿ....ನಾವೂ ಬರ್ತೇವಿ...." ರಾಯರು ಕೂಗಿ ಹೇಳಿದರು.

"ನಾನು ಇಷ್ಟು ಚೆನ್ನಾಗಿ ಹಾಡ್ತೀನೊ ಇಲ್ವೊ ಅಂತಿದ್ದೆ....ಬೆಳಗ್ಗೆ ನನ್ನ ಸ್ವರ ಕೇಳಿ....! ಅದಲ್ದೆ ಹಾರ್ಮೋನಿಯಂ ಬೇರೆ ಕೆಟ್ಟು ಅಪಶಕುನ ನುಡಿದಿತ್ತು." ಎಲ್ಲರೂ ಹೊಗಳಿದುದರಿಂದ ಸ್ತ್ರೀ ಸಹಜ ಆಕಾಂಕ್ಷೆ ಅವಳಲ್ಲಿ ಹೆಡೆಯಾಡುತ್ತಿತ್ತು.

"ನೀನೇನು ಹಾಡಿದ್ದು ಮಹಾ....ಅಷ್ಟರಲ್ಲೇ ಇತ್ತು. ಎಲ್ಲೊ ನಿನ್ನ

ಮುಖ ನೋಡಿ ಹಾಕಿರ ಬೇಕು ಅಷ್ಟೆ....ನಂಬರನ್ನ...." ಕೆಣಕಬೇಕೆಂದೆ ನುಡಿದ ಶೀನಿ.

"ನನ್ನ ರೂಪಿನ ವ್ಯಾಲ್ಯಾಕೊ ನಿಂಗೆ ಅಷ್ಟೊಂದು ಸಿಟ್ಟು" ಶೀನಿ ಹೊಗಳಿದ್ದುದರಿಂದ ಒಂದು ತರಹ ತೃಪ್ತಿ ಲಭಿಸಿದ್ದರೂ ಬೇಕೆಂದೆ ಸಿಟ್ಟಾದಳು.

"ನೀನು ಚೆನ್ನಾಗಿರೋದೆ ಸುಳ್ಳೇ...."

"ನೀನೇನು ಚೆನ್ನಾಗಿಲ್ವೇನೊ....?" ನುಡಿದು ನಾಲಿಗೆ ಕಚ್ಚಿ ತಲೆ ತಗ್ಗಿಸಿದಳು. ಓರೆಗಣ್ಣಿನಲ್ಲಿ ತಂದೆಯತ್ತ ನೋಡಿದಳು. ಅವರು ಹತ್ತು ಗಜ ಮುಂದೆ ಇದ್ದುದರಿಂದ ಕೇಳಿಸಿರಲಿಕ್ಕಿಲ್ಲವೆಂದು ಧೈರ್ಯಗೊಂಡಳು.

"ಹೂಂ! ಹಾಗೇ ಅನ್ನು..." ಅವಳ ಕಡೆಗೆ ದುರಗುಟ್ಟಿ ನಗುವಂತೆ ನೋಡಿ ನಕ್ಕ.

ಶಕುಂತಲೆ ಮಾತನಾಡಲಿಲ್ಲ. ನಡಿಗೆಯನ್ನು ಜೋರುಮಾಡಿದಳು.

ಮನೆಗೆ ಬಂದು ಊಟವಾದ ಮೇಲೆ ರಾಯರು ವಿಶ್ರಮಿಸಿಕೊಳ್ಳಲು ಹಾಗೆಯೇ ಜಮಖಾನೆಯ ಮೇಲೆ ಉರುಳಿಕೊಂಡರು. ಶೀನಿ ಹಾಸಿಗೆಯನ್ನು ಹಾಸಿಕೊಳ್ಳಿಂದು ಬಹಳ ಹೇಳಿದ. ಅವರು ಒಪ್ಪಲಿಲ್ಲ. "ಹಾಗೇ ಸ್ವಲ್ಪ ಹೊತ್ತು ಉರುಳಿಕೊಂಡಿರ್ತೇನಿ ಅಷ್ಟೆ...." ಹೇಳಿ ನಾಲ್ಕು ನಿಮಿಷದಲ್ಲಿ ಗೊರಕೆ ಹೊಡೆದರು.

"ನೀನೂ ಮಲಗೋದಾದ್ರೆ ಮಲಗಮ್ಮ...." ಶಕುಂತಲಳಿಗೆ ಶಾರದಮ್ಮ ಹೇಳಿದರು. ಆದರೆ ಶಕುಂತಲೆ ಮಲಗಿಕೊಳ್ಳಲಿಲ್ಲ. ಶೀನು ಒಂದು ಪಠ್ಯ ಪುಸ್ತಕವನ್ನು ಹಿಡಿದು ಸುಮ್ಮನೆ ಪುಟವನ್ನು ತಿರುವಿ ಹಾಕುತ್ತಿದ್ದ. ಶಕುಂತಲೆ ಬೇಜಾರಿನಿಂದ ಸುಮ್ಮನೆ ಕುಳಿತಿದ್ದುದನ್ನು ಕಂಡು ಒಂದು ಹಳೆಯ ವಾರ್ಷಿಕ ಸಂಚಿಕೆಯನ್ನು ಹುಡುಕಿ ಕೊಟ್ಟ. ಹಾಲಿನಲ್ಲಿ ಅವಳು ಅದನ್ನು ಓದುತ್ತ ಕುಳಿತಳು.

"ಇವತ್ತು ನಿನ್ನೆ ಹಾಗೆ ನಿನ್ನ ಶೃಂಗಾರ ಮುಗಿಸೊದ್ರಲ್ಲಿ ಸಾಯಂಕಾಲ ಮಾಡ್ಬೇಡ. ಲಾಲುಬಾಗು, ಕಬ್ಬನ್ ಪಾರ್ಕ್, ಮ್ಯೂಜಿಯಂ, ನೋಡಬೇಕಾದ್ರೆ ಬೇಗನೆ ಹೊರ್ಟು ಬಿಡಬೇಕಾಗುತ್ತೆ." ಓದುತ್ತಲೇ ನುಡಿದ ಶೀನಿ.

"ನಾನೇನೋ ಈಗ್ಲೆ ರೆಡಿ, ಮುಖ ತೊಳೆಯೋದು, ಸೀರೆ ಉಟ್ಕೊಳೋದು. ಅಷ್ಟೆ...." ಅವಳೂ ಪುಸ್ತಕದಿಂದ ಮುಖವನ್ನು ಎತ್ತದೆ ನುಡಿದಳು. "ಇನ್ನೇನಿದೆ ನೋಡೋದು" ಪುನಃ ಪ್ರಶ್ನಿಸಿದಳು.

"ಇದೆ ಬೇಕಾದಷ್ಟಿದೆ. ಸುತ್ತೊದೊಂದಾದ್ರೆ ಎಷ್ಟೋ ಇವೆ

ನೋಡೋವು. ರಸಲ್ ಮಾರ್ಕೆಟ್ಟು, ಮಹಾತ್ಮಾಗಾಂಧಿ ರೋಡು, ಅಠಾರಾ ಕಛೇರಿ ಇನ್ನೂ ಏನೇನೋ ಇವೆ. ಎಲ್ಲಾ ತೋರಿಸ್ತೀನಿ. ನೀನು ಬೇಗ ಹೊರ್ಟ್ಟು ಬಿಡಬೇಕು."

"ಕಾಫಿಗೆ ಇಡಲೇನೊ....?" ಒಳಗಿನಿಂದ ತಾಯಿ ಪ್ರಶ್ನಿಸಿದರು

"ನೀವು ಮಲಗಿರ್ರಿ ಶಾರದಮ್ಮ ನಾನು ಮಾಡ್ತೀನಿ ಇವತ್ತು ಕಾಫಿನಾ." ಪುಸ್ತಕವನ್ನು ಅಲ್ಲೆ ಎಸದು ಮೇಲಕ್ಕೆ ಎದ್ದಳು.

"ನಾವು ಪುನಃ ಹಿಂತಿರುಗಿ ಬರೋದು ಸ್ವಲ್ಪ ಹೊತ್ತಾಗಬಹುದು ಏನಾದ್ರೂ ತಿಂಡಿ ಮಾಡಿಬಿಡಮ್ಮ" ಪುನಃ ರೂಮಿನಿಂದಲೇ ನುಡಿದ. "ಅವಳ್ನ ತಿಂಡಿ ಮಾಡೋಕೆ ಬಿಡಬೇಡ್ವಮ್ಮ....ಅವಳ್ಗೆ ಏನೂ ಬರೋಲ್ಲ." ಪುನಃ ಮುಂದುವರಿಸಿದ ಪುಸ್ತಕ ಕೈಯಲ್ಲೆ ಹಿಡಿದು ಹೊರಕ್ಕೆ ಬಂದು.

"ಶಾರದಮ್ಮ ನೀವು ಸುಮ್ನೆ ಮಲಗಿ....ಇವತ್ತು ನಾನು ಮಾಡ್ತೀನಿ ನೋಡೋಣಾ ಹ್ಯಾಗಿರುತ್ತೊ....ಶೀನಿ ಆಡಿಕೊಳ್ಳೊ ಹಾಗೆ ಇರುತ್ತೊ ಅಥವ ಅದೇ ಬಾಯಲ್ಲಿ ಹೊಗಳೊ ಹಾಗೆ ಇರುತ್ತೊ !....ನೀವು ಸುಮ್ನೆ ಸಾಮಾನು ಎಲ್ಲಿದೆ ತೋರ್ಸಿಬಿಡಿ ಸಾಕು. ನಾನೇ ಎಲ್ಲಾ ಮಾಡ್ತೀನಿ. ಬೆಳಗ್ನಿಂದ ಅಡ್ಗೆ ಮಾಡಿ ಸುಸ್ತಾಗಿದ್ದೀರ ಹಾಯಾಗಿ ಒಂದು ನಿಮಿಷ ಮಲಗಿರ್ರಿ."

"ಎಲ್ಲೊ ಒಂದುದಿನ ಇದ್ದು ಹೋಗೋಕೆ ಅಪರೂಪಕ್ಕೆ ಬಂದೊಳ ಕೈಲಿ ಕೆಲ್ಸ ಮಾಡ್ಸಿದ್ರೆ ನೋಡ್ದೋರು ಏನಂತಾರೆ ಹೇಳು.!" ಮಲಗಿದ್ದ ಶಾರದಮ್ಮ ಮೇಲಕ್ಕೆ ಎದ್ದು ಅಗ್ಗಿಷ್ಟಗೆಗೆ ಇದ್ದಲನ್ನು ಹಾಕಿದರು. ಶಕುಂತಲೆ ಸೀಮೆಎಣ್ಣೆಯನ್ನು ಹುಯ್ದು ಒಲೆಯನ್ನು ಹೊತ್ತಿಟ್ಟಳು. "ನೀನು ಸುಮ್ನಿರು ಶಕುಂತಲ....ನಾನೆಲ್ಲಾ ಮಾಡ್ಕೋತೀನಿ" ಶಾರದಮ್ಮ ಕೆಲಸ ಮಾಡಬೇಡವೆಂದು ಬಲವಂತ ಪಡಿಸಿದರು.

"ಸುಮ್ನಿರಿ ಶಾರದಮ್ಮ ನೀವು. ಶೀನಿ ಏನೊ ಬಾಳ ಆಡ್ಕೊಳ್ತಾ ಇವ್ನಾನೆ. ನೋಡೋಣಾ ನಂಗೆ ಕಾಫಿ ಉಪ್ಪಿಟ್ಟು ಮಾಡೋಕೆ ಬರುತ್ತೊ ಇಲ್ವೊ ತೋರಿತ್ತೇನೆ. ತಿಂದಬೆರಳನ್ನು ಕಡಿಕೊಳ್ಳಬೇಕು." ಈಳಿಗೆಮಣೆ ಯನ್ನು ತೆಗೆದುಕೊಂಡು ಅಲ್ಲೆ ಇದ್ದ ಈರುಳ್ಳಿಯನ್ನು ಹಚ್ಚುತ್ತ ಕುಳಿತಳು. "ನಾನು ಮನೇಲಿ ಇದ್ದಿದ್ರೆ ಕೆಲ್ಸ ಮಾಡ್ತಾ ಇರ್ಲಿಲ್ವೆ....ಇಲ್ಲಿ ಮಾಡಿದ್ರೇನು ?" ಕೊರಳು ಕೊಂಕಿಸಿ ಓರಗಣ್ಣಿನಲ್ಲಿ ಶೀನಿಯನ್ನು ನೋಡಿದಳು.

"ಸಾಹುಕಾರರ ಮನೆ ಹುಡುಗಿ ಹಾಗೆಲ್ಲಾ ಕೆಲ್ಸ ಮಾಡ್ಬಾರ್ದು. ನಿಮ್ಮ ತಂದೆ ನೋಡಿದ್ರೆ ಏನಂತಾರೆ ಹೇಳು...." ಶಾರದಮ್ಮ ಬಹುಮೆಲ್ಲಗೆ ನುಡಿದರು. ನಿದ್ದೆಯಿಂದ ಆಗಲೇ ಎಚ್ಚರಾಗುತ್ತಿದ್ದ ರಾಯರು ರೂಮಿನಲ್ಲೆ

ನುಡಿದರು "ಹಾಗೇನೂಇಲ್ಲ ನಮ್ಮ ಸೇಲೂ ಇವಳ್ನ ಸುಮ್ನೆ ಕೂಡಿಸಿರೊಲ್ಲ. ಹೆಂಗ್ಸರನ್ನ ಯಾವಾಗ್ಲು ಸುಮ್ನೆ ಕೂಡ್ಸಿರಬಾರ್ದು. ಅವರ್ಗೆ ವೈಗಳ್ತನ ಬಂದ್ರೆ ಆಗಿಹೋಯ್ತು. ಬ್ರಹ್ಮ ಬರಬೇಕು ಪುನಃ ಅವರ್ನ ಕೆಲ್ಸಕ್ಕೆ ಎಬ್ಬಿಸೋಕ....ಕೆಲ್ಸಮಾಡ್ತೀನಿ ಅಂದ್ರೆ ಮಾಡ್ಲಿಬಿಡಿ....ಮುದ್ವೆ ಆಗೋ ಹುಡ್ಗಿ ಕೆಲ್ಸ ಕಲೀಲಿ ಸ್ವಲ್ಪ" ಅರ್ಧ ನಿದ್ದೆಗಣ್ಣನ್ನು ತೆರೆಯದೆ ಇಷ್ಟನ್ನು ನುಡಿದರು. "ನಮಗೋಸ್ಕರ ನೀವು ವೃಥಾ ತೊಂದ್ರೆ ತಗೊಳ್ತಾ ಇದ್ದೀರಾ...." ಪುನಃ ನುಡಿದು ಗೋಡೆಯ ಕಡೆಗೆ ಹೊರಳಿದರು.

"ಏನು ಕಷ್ಟ ಹೇಳಿ ಇದೆಲ್ಲಾ...." ಶೀನಿ ನುಡಿದ. ರಾಯರು ನುಡಿಯಲಿಲ್ಲ. ಶಕುಂತಲ ಶಾರದಮ್ಮನವರನ್ನು ನೋಡಿ ನಕ್ಕಳು. "ನಿನ್ನ ಹಟಾನೇ ಗೆಲ್ತಲ್ಲ...." ಶಾರದಮ್ಮನೂ ನುಡಿದು ನಕ್ಕರು.

"ಹಾಡು ಹೇಳ್ದಾಗೆ ಅಲ್ಲ ಅಡಿಗೆ ಮಾಡೋದು" ಅಡಿಗೆಮನೆಯ ಬಾಗಿಲಲ್ಲಿ ನಿಂತು ನುಡಿದ ಶೀನಿ. "ಅಹಹ....!" ಹಲ್ಲು ಕಿರಿದು ಅಣಕಿಸಿದಳು ಶಕುಂತಲ.

ತಾಯಿ ಜೋರಾಗಿ ನಕ್ಕರು.

"ಇವತ್ತೇನಾದ್ರೂ ಚೆನ್ನಾಗಿಲ್ದೆ ಇರ್ಲಿ—ಆಗತಾನೆ....?" ನುಡಿಯುತ್ತ ಒಳಗೆ ಅಡಿಯಿಟ್ಟ.

"ಚೆನ್ನಾಗಿಲ್ದೆ ಇದ್ರೆ ಏನ್ಮಾಡ್ತಿ....? ತಿನ್ನೊದಿಲ್ಲ ತಾನೆ....?" ಕೆಣಕಿದಳು ಶಕುಂತಲ. "ತಿನ್ನೊಲ್ಲ ಅಲ್ಲ....ನಿನ್ನ ಕಿವಿ ಹಿಂಡ್ತೀನಿ ಹೀಗೆ...." ಅವಳ ಕಿವಿಯನ್ನು ಹಿಡಿದುಕೊಂಡ.

"ಲೋ ಬಿಡೊ ಶೀನಿ....ಏನು ಇನ್ನೂ ಹುಡುಗನ ಹಾಗೆ ಆಡ್ತಾ ಇದ್ದೀಯಲ್ಲ. ಅವಳೇನು ಇನ್ನೂ ಚಿಕ್ಕ ಹುಡ್ಗೀನೇನೊ....! ಮದ್ವೆ ಆಗೊ ವಯಸ್ಸಾಯ್ತು"—ತಾಯಿ ನಿಜವಾಗಿಯೂ ಸಿಟ್ಟಾದರು. ಮದುವೆ ಶಬ್ದ ಕೇಳಿ ಶಕುಂತಲ ನಾಚಿಕೆಯಿಂದ ತಲೆ ತಗ್ಗಿಸಿದಳು. ಆದಷ್ಟು ಚಿಕ್ಕದಾಗಬೇಕೆಂದು ತನ್ನ ತಲೆಯನ್ನು ಮೊಳಕಾಲುಗಳ ಮಧ್ಯದಲ್ಲಿ ಸೇರಿಸಿದಳು.

ಶೀನಿ ನಗುತ್ತ ಹೊರಗೆ ಹೊರಟು ಹೋದ.

"ವಯಸ್ಸಾದ್ರೂ ಇನ್ನೂ ಅವನಿಗೆ ಬುದ್ಧಿ ಬಂದಿಲ್ಲ. ಮೊದಲಿನ ಹಾಗೇ ಆಡ್ತಾನೆ." ತಾಯಿ ಮಗನನ್ನು ದೂರಿದರು. ಶಕುಂತಲ ಏನೂ ಹೇಳದೆ ಮೆಣಸಿನಕಾಯನ್ನು ಹೆಚ್ಚಿದ್ದ ಕೈಯನ್ನು ತೊಳೆಯಲು ಹೊರಗೆ ಎದ್ದು ಹೊದಳು.

(ಶಕುಂತಲ ಉಪ್ಪಿಟ್ಟನ್ನು ಮಾಡಲು ಬಿಡಲಿಲ್ಲ. ಹೊರಗಿನ ಅಲ್ಪ

ಸ್ವಲ್ಪ ಕೆಲಸವನ್ನು ಮಾಡಲು ಮಾತ್ರ ಅನುಮತಿ ಕೊಟ್ಟರು. ಕೊನೆಗೆ ಶಾರದಮ್ಮ ಎಷ್ಟು ಹೇಳಿದರೂ ಕೇಳದೆ ತಾನೇ ಕಾಫಿಪುಡಿ ಸಕ್ಕರೆಯನ್ನು ಹಾಕಿ ಕಾಫಿಯನ್ನು ಮಾಡಿದಳು. ಇದರಲ್ಲಾದರೂ ತನ್ನ ಕೈಪಾಡವನ್ನು ತೋರಿಸಬೇಕೆಂದು ತೀರ್ಮಾನಿಸಿದ್ದಳು.

" ಎಷ್ಟು ರುಚಿಯಾಗಿದೆಯೋ... ಅಹಹ! ಉಪ್ಪಿಟ್ಟು... ಪರವಾಗಿಲ್ಲ ನಿಂಗೂ ತಿಂಡಿ ಮಾಡೊಕ್ಕೆ ಬರುತ್ತೆ" ಅವಳು ಮಾಡಿಲ್ಲವೆಂದು ಗೊತ್ತಿದ್ದರೂ ಬೇಕೆಂದೇ ನುಡಿದ. "ನಾನಲ್ಲ ಮಾಡಿದ್ದು....ನಿಮ್ಮ ಅಮ್ಮನೆ" ಎಂದಾಗ ನಂಗೊತ್ತು ಎಂಬಂತೆ ತಲೆಯನ್ನು ಅಲುಗಾಡಿಸಿದ.)

ಉಪಹಾರವನ್ನು ಮುಗಿಸಿ ಬಹಳ ಅವಾಂತರ ಅವಾಂತರವಾಗಿ ಹೊರಡಬೇಕಾದರೂ ನಾಲ್ಕುವರೆ ಗಂಟೆ ಆಗಿಹೋಯಿತು.

ಶೀನಿ ರೇಸ್‌ಕೋರ್ಸ್‌ನ ಮಾರ್ಗವಾಗಿ ಮಹಾರಾಣಿ ಕಾಲೇಜಿನ ಬಳಿಗೆ ಅವರನ್ನು ಕರೆದುಕೊಂಡು ಬಂದ. ಅದನ್ನು ತೋರಿಸಿ ಆಕ್ಯುಪೇಷನಲ್ ಇನ್‌ಸ್ಟಿಟ್ಯೂಟ್, ಇಂಜನೀಯರಿಂಗ್ ಕಾಲೇಜಿನ ಬಳಿಯಲ್ಲಿ ಹಾದು ಕಬ್ಬನ್ ಪಾರ್ಕಿನ ಕಡೆಗೆ ಹೊರಟರು. ಭಾನುವಾರವಾದ್ದರಿಂದ ಹೋಗಿ ಬರುವ ಜನ ಅಸಾಧ್ಯವಾಗಿತ್ತು. ಶಕುಂತಲ ಆಶ್ಚರ್ಯದಿಂದ ಹೊಸರೀತಿಯ ಉಡುಪು ಧರಿಸಿ ಹೋಗುತ್ತಿರುವ ಜನರನ್ನೆ ನೋಡುತ್ತಿದ್ದಳು. ಹಲವು ಬಗೆಯ ಜನ! ಹಲವು ರೀತಿಯ ಉಡುಪು! ವಿವಿಧ ಭಾಷೆ! ಗಂಡು ಹೆಣ್ಣು ಎಂಬ ಭೇದವಿಲ್ಲದೆ ನಕ್ಕು ನಲಿಯುತ್ತಿರುವ ಜನಸಂದಣಿ! ಶಕುಂತಲೆಗೆ ಈ ನೋಟ ಬಹು ಮೆಚ್ಚಿಗೆಯಾಗಿ ಕಂಡಿತು. ಬೆನ್ನಹಿಂದೆ ಇನ್ನೂ ಸೂರ್ಯ ಸುಡುತ್ತಿದ್ದರೂ ಗಾಳಿ ಬಹು ತಂಪಾಗಿತ್ತು.

" ಬೆಂಗಳೂರಿನಲ್ಲಿರೊ ನೀವೇ ಪುಣ್ಯವಂತರಪ್ಪ." ರಾಯರು ಮೆಚ್ಚಿಗೆಯಿಂದ ನುಡಿದರು.

"ಒಂದು ವಿಧದಲ್ಲಿ ಹೌದು. ಜನಕ್ಕೆ ಹೊಟ್ಟೆಗೆ ತಿನ್ನಲು ಇಲ್ಲದೆ ಹೋದರೂ ಮನ ತಣಿಸುವ ನಿಸರ್ಗ ಸೌಂದರ್ಯವಿದೆ. ಇಲ್ಲಿ ಕುಳಿತು ನಿಜವಾಗಿಯೂ ಮನುಷ್ಯ ಒಂದು ಕ್ಷಣ ದುಃಖವನ್ನು ಮರೆಯಬಹುದು." ಶೀನಿ ನುಡಿದ.

ಶಕುಂತಲ ಸುತ್ತಲೂ ಭವ್ಯ ನಿಸರ್ಗ ನೋಡಿ ಮಾರುಹೋಗಿದ್ದಳು. ಹಚ್ಚ ಹಸುರ ಹುಲ್ಲ ಮೇಲೆ ಕುಳಿತು ತೆರದ ಕಣ್ಣಿನಿಂದ ಅರಳಿ ನಿಂತ ಪುಷ್ಪಸೌಂದರ್ಯವನ್ನು ನೋಡುತ್ತ ಕುಳಿತರೆ ಚೆನ್ನು ಅನ್ನಿಸುತ್ತಿತ್ತು.

" ನೋಡು ಶೀನಿ ಈ ಜನ ಎಷ್ಟು ಸುಖಿಗಳಾಗಿದ್ದಾರೆ. ಮಕ್ಕಳು

ಮರಿಗಳೊಂದಿಗೆ ಹ್ಯಾಗೆ ನಗ್ತಾ ನಗ್ತಾ ಪ್ರಪಂಚಾನೇ ಮರ್ತು ಹೋಗ್ತಾ ಇದ್ದಾರೆ. ನೋಡು ಯಾರಲ್ಲಿ ದುಃಖ, ಅತೃಪ್ತಿ ಕಾಣಿಸುವುದೇನೊ?"

"ಇಲ್ಲ. ಕಾಣಿಸುವುದಿಲ್ಲ ತೊಳೆದು ಬಣ್ಣ ಹಚ್ಚಿ ಒಳಗಿನ ಅಶಾಂತಿ ಹೊರಗೆ ಕಾಣದಂತೆ ನಟಿಸುತ್ತಿದ್ದಾರೆ."

"ನೋಡು....ಆ ಹುಲ್ಲಿನ ಮೇಲೆ ಕುಳಿತಿರುವ ಆ ದಂಪತಿಗಳನ್ನು ನೋಡು. ಹ್ಯಾಗೆ ನಗ್ತಾ ನಗ್ತಾ ಇದ್ದಾರೆ... ಅಲ್ಲಿ ನೋಡು ಆ ಮರದ ಕೆಳಗೆ ಆ ಹುಡುಗರು ಹ್ಯಾಗೆ ಆನಂದದಿಂದ ಕೇಕೆ ಹಾಕಿ ನಗುತ್ತ ಆಟ ಮಾಡ್ತಾ ಇದ್ದಾರೆ. ಇಲ್ಲಿ ಬಂದಿರೊ ಯಾರನ್ನು ಬೇಕಾದರೂ ನೋಡು ಎಲ್ಲರೂ ನಗುತ್ತಲೇ ಇದ್ದಾರೆ. ಪಟ್ಟಣ ಜೀವನ ಚೆನ್ನ ಅಂತ ನಾನು ತೀರ್ಮಾನಿಸಿಬಿಟ್ಟೆ."

"ನನ್ನ ಮಾತಿನಿಂದ ನಿಮಗೆ ಸಿಟ್ಟು ಬರಬಹುದು. ಇದೇನು ಹುಡ್ಗ ಹೀಗೆ ಹೇಳ್ತಾ ಇದ್ದಾನಲ್ಲ ಅಂತ. ಹಳ್ಳಿಯ ಜೀವನದ ಸುಖ ಇಲ್ಲಿಯ ಆಡಂಬರ ಜೀವನದಲ್ಲಿ ಇಲ್ಲ"

"ಅಯ್ಯೊ ನಿಂಗೆಲ್ಲೊ ಹುಚ್ಚು. ಹಳ್ಳಿಯೋರ ಜೀವನ ನಿಜವಾಗ಼್ೂ ಸುಖವಾಗಿರೊಲ್ಲ. ಏನಾದ್ರೂ ಒಂದು ಯೋಚ್ನೇನ ತಲೆಗೆ ಹಚ್ಚಿಕೊಂಡು ಕೊರಗ್ತಾ ಇರ್ತಾರೆ. ಹೊಟ್ಟೆ ತುಂಬಾ ತಿಂದ್ರೆ ಬಂತಾ? ಹಂದಿ ತಿಂದಾಗೆ! ವಿದ್ಯಾ ಇಲ್ಲ. ಬುದ್ಧಿ ಇಲ್ಲ. ನಾಗರೀಕತೆಯಿಲ್ಲ...."

"ನೋಡಿ ರಾಯ್ರೆ ಇಲ್ಲೆ ಬಹಳ ಜನ ಮೋಸ ಹೋಗೋದು. ನಮ್ಮ ಸರಕಾರವೂ ಮೋಸಹೋಗಿ ನೈಜ ಸ್ಥಿತಿಯನ್ನು ಅರಿಯದಾಗಿದೆ."

"ಏನು ನಿನ್ನ ತಲೆ! ಈಗ ಕಾಣ್ತಾ ಇರೋದು ನೈಜಸ್ಥಿತಿ ಅಲ್ದೆ ಇನ್ನೇನು."

"ಅಲ್ಲ ಇದು ಜೀವನದ ಸ್ಥಿತಿಯಲ್ಲ. ಉಂಡುಟ್ಟು ನಲಿಯುವ ಕೆಲವು ಜನಗಳ ವಿಹಾರ. ಮನೆಯ ವಾತಾವರಣ ಎಷ್ಟೋ ಹೊಲಸಾಗಿದ್ದರೂ ಇಲ್ಲಿಯ ಜನ ನಗುತ್ತಿರುತ್ತಾರೆ. ಈ ಹಸನ್ಮುಖಿ ಪ್ರಕೃತಿ ಅವರನ್ನು ನಗುವಂತೆ ಮಾಡುತ್ತದೆ. ಕೆಲವರ ಮೇಲೆ ಮೂಕ ನಿಸರ್ಗ ಏನೂ ಪರಿಣಾಮ ಮಾಡುವುದಿಲ್ಲ. ಆದರೂ ಅವರು ನಗುತ್ತಾರೆ. ಎಲ್ಲರಿಗಿಂತ ಹೆಚ್ಚಾಗಿ ಬಹು ಹೊತ್ತು ನಗುತ್ತಾರೆ...."

"ಅಂದರೆ ...!"

"ನಗುವುದು ಕೆಲವರ ಅಭ್ಯಾಸ. ಕೆಲವರಿಗೆ ಇದು ಸಭ್ಯತೆಯ ಲಕ್ಷಣ. ಮನಸ್ಸನ್ನು ಮುಚ್ಚುವ ಮುಖವಾಡ ಹಲವರಿಗೆ. ಸ್ವಚ್ಛ ಹಲ್ಲನ್ನು

ತೋರಿಸಬೇಕೆಂಬ ಬಯಕೆಯಿಂದ ಸುಮ್ಮನೆ ನಗುವವರೂ ಇದ್ದಾರೆ. ನಗುವೇ ಜೀವನದ ಸತ್ಯವಲ್ಲ."

"ಏನು ಹಾಗಾದರೆ ಆ ನಗುವಿನ ಹಿಂದೆ ಅತೃಪ್ತಿ, ಅಶಾಂತಿ ಇದೆ ಯೆಂದೊ ನಿನ್ನ ಅಭಿಪ್ರಾಯ ?"

"ಹೌದು ಬಹಳ ಜನಗಳಿಗೆ ಇದು ಅನ್ವಯಿಸುತ್ತದೆ. ಇಲ್ಲಿಗೆ ಬರುವ ಬಹು ಅಲ್ಪ ಜನಕ್ಕೆ ಇದು ಅನ್ವಯಿಸದೆ ಹೋಗಬಹುದು. ಆದರೆ ಈ ಅತೃಪ್ತಿ ಅಶಾಂತಿ ಪಟ್ಟಣದ ಬಹು ಜನರಿಗೆ ಅನ್ವಯಿಸುತ್ತೆ. ಇಲ್ಲಿ ನಾವು ನೋಡುವ ಜನರಿಗಿಂತ ಸಾವಿರ ಪಾಲು ಹೆಚ್ಚಾಗಿ ನಗರದ ಒಳಗಡೆ ಕರ್ಮದ ಕುಲುಮೆಯಲ್ಲಿ ಕರಗುತ್ತಾ ಇದ್ದಾರೆ. ಒಂದು ಕ್ಷಣ ಕುಳಿತು ಹಾಯಾಗಿ ಬೇಸರದ ನೀಳ ಉಸಿರನ್ನು ಬಿಡುವಂತಿಲ್ಲ. ಕುಳಿತರೆ ಬೆನ್ನ ಹಿಂದೆ ಯಜ ಮಾನರು ಕಣ್ಣು ಕೆಂಪಗೆ ಮಾಡಿಕೊಂಡು ನಿಂತಿರುತ್ತಾರೆ. ಮಿಲ್ಲು ಕೂಲಿ ಗಳ, ಬಡ ಮೇಸ್ಟ್ರರ, ಗುಮಾಸ್ತರ ನೀರಸ ಜೀವನವನ್ನು ನೆನಸಿಕೊಳ್ಳಿ. ಅವರು ಪಡುವ ಬವಣೆ ಕಂಡು ಕಣ್ಣಿಂದ ನೀರು ಬರುವುದಿಲ್ಲ. ನೆತ್ತರು ಸುರಿಯುತ್ತೆ. ಎಷ್ಟು ದುಡಿದರೂ ಹೊಟ್ಟೆಗೆ ನಾಲದು. ಹಾಗೂ ಹೀಗೂ ಗಂಜಿಯನ್ನ ಕುಡಿದರೆ ಬಟ್ಟೆಯ ಸ್ಥಿತಿಯಂತೂ ಅತಿ ಶೋಚನೀಯ. ಇಲ್ಲಿ ಜನ ಹ್ಯಾಗೆ ನಗುತ್ತಾ ಇದ್ದಾರೆ ನಗರದ ಒಳಗಡೆ ಅನೇಕ ಜನಕ್ಕೆ ಈ ನಗುವಿನ ಪರಿಚಯವೇ ಆಗಿಲ್ಲ. ಒಮ್ಮೆಯೂ ತಮ್ಮ ಜೀವನದಲ್ಲಿ ನಗದ ವರನ್ನ ನಾನೂ ಕಂಡಿದ್ದೇನೆ. ಕಾರಿನಲ್ಲಿ ಓಡಾಡುವ ಅಧಿಕಾರಿಗಳಿಗೆ ನೆಲಹತ್ತಿ ನಡೆಯುವ ಈ ಜನ ಕಣ್ಣಿಗೆ ಬೀಳುವುದಿಲ್ಲ. ತಿಂದು ಉಬ್ಬಿ ಕೊಬ್ಬಿನಿಂದ ತಿರುಗುವ ಈ ಸೌಂದರ್ಯಪ್ರಿಯ ಸುಖಿ ಜನರೇ ಕಾಣುತ್ತಾರೆ ಹೊರಗೆ. ಇವರ ಮುಖಕ್ಕೆ ಬೆಲೆ ಕಟ್ಟಿ ದೇಶ ಸುಭಿಕ್ಷ ಎನ್ನುವುದರಲ್ಲಿ ಹುರು ಳಿಲ್ಲ ರಾಯರೇ ..." ಶೀನಿ ಆವೇಶ ಬಂದಂತೆ ನುಡಿದ.

"ನೀನು ಏನೇ ಹೇಳು ಹಳ್ಳಿಯ ಜನಕ್ಕೆ ಸುಖದ ಕಲ್ಪನೆಯಿಲ್ಲ...."

"ನಿಜ ಕಲ್ಪನೆಯಿಲ್ಲ. ಆದರೆ ಅದನ್ನು ಅನುಭವಿಸುತ್ತಾರೆ. ಇಲ್ಲಿಯ ಜನ ಅನುಭವಿಸೊಲ್ಲ, ಸೊಗಸಾಗಿ ಕಲ್ಪಿಸಿಕೊಳ್ತಾರೆ. ಇಲ್ಲಿ ಪ್ರತಿಯೊಂದೂ ಆಡಂಬರ, ತೋರಿಕೆ. ಇಲ್ಲಿಯ ಜೀವನ ಕೃತಕ. ಅಲ್ಲಿಯ ಜೀವನ ತಿಳಿ ಯಾದ್ದು. ಕೃತಕರಹಿತವಾದ್ದು. ಇಲ್ಲಿಯ ಜನ ಏನು ಕೆಲಸ ಮಾಡಬೇಕಾ ದರೂ ಜನ ನೋಡಬೇಕು. ಜನ ಹೊಗಳಬೇಕು. ಇದು ಮುಖ್ಯ. ಉಳಿ ದುದೆಲ್ಲವೂ ಗೌಣ. ಪಟ್ಟಣದ ಜೀವನ, ಸೌಖ್ಯದ ಆಡಂಬರ ಕರ್ಪೂರದ ಬೊಂಬೆಯಂತೆ, ಸ್ವಲ್ಪ ಕಾವು ತಗಲಿದರೆ ಸಾಕು ಸುಟ್ಟುಹೋಗುತ್ತದೆ.

ಆದರೆ ಇದ್ದಾಗ ಬಡ ಜನರ ಮನಸ್ಸನ್ನು ಸೆಳೆಯುತ್ತದೆ. ಇದೇ ಪಟ್ಟಣದ ಜೀವನ...." ಶೀನಿ ಹೇಳುತ್ತಲೇ ಇದ್ದ. ರಾಯರು ಮಾತನ್ನು ಮರೆತು ಎದುರಿನ ಫೌಂಟೆನ್ನು ನೋಡುವುದರಲ್ಲಿ ತನ್ಮಯರಾಗಿದ್ದರು.

"ನಿಜ ನೀನು ಹೇಳಿದ್ದು. ಇಲ್ಲಿ ಕಾಣುವ ಸೌಂದರ್ಯ, ಸುಖದ ಛಾಯೆ ನಿಜಜೀವನದಲ್ಲೂ ಇದ್ದರೆ ದೇಶ ಸ್ವರ್ಗವಾಗುತ್ತಿತ್ತು. ಇಲ್ಲಿ ಕಣ್ಣಿಗೆ ಕಾಣುವ ಜನ ತೃಪ್ತ ಜನ, ಅಥವ ನಟಿಸುತ್ತಿರುವವರು. ಹೊಟ್ಟೆ ತುಂಬಿರುವುದರಿಂದ ಎಲ್ಲೆಲ್ಲೂ ಓಡಿಯಾಡುತ್ತಾರೆ. ಹಸಿವ ಜನ ಬಡಕಲು ಹೊಟ್ಟೆಯನ್ನು ಹೊತ್ತು ತಿರುಗಲಾರರು. ಅವರು ಕಣ್ಣಿಗೆ ಬೀಳುವಂತಿಲ್ಲ. ಕಣ್ಣಿಗೆ ಕಂಡದ್ದೇ ಸತ್ಯವೆಂದು ತಿಳಿಯುವುದು ತೀರ ತಿಳಿಗೇಡಿತನ..." ಶಕುಂತಲಳ ಮನಸ್ಸೂ ಕಾದುಹೋಗಿತ್ತು. ಅಲ್ಲೆ ಒಬ್ಬ ಹುಡುಗ ಸುಮಾರು ಏಳೆಂಟು ವರ್ಷ ವಯಸ್ಸಿರಬಹುದು. ಕಡ್ಲೆ ಕಾಯನ್ನು ಮಾರುತ್ತಲಿದ್ದ. ಇನ್ನೊಬ್ಬ 'ಪಾಲೀಷ್....ಪಾಲೀಷ್' ಕೂಗುತ್ತ ನಗುತ್ತ ಸಂತೋಷದ ಹೊನಲಿನಲ್ಲಿ ತೇಲುತ್ತಿದ್ದ ಸ್ತ್ರೀ ಪುರುಷರನ್ನು ಹಿಂಬಾಲಿಸಿ ಬೈಸಿಕೊಂಡು ಹಿಂತಿರುಗುತ್ತಿದ್ದ.

ರಾಯರು ಸ್ವಲ್ಪ ಹೊತ್ತು ಅಲ್ಲೇ ನಿಂತು ಮಾತಿನ ಮೂಲವನ್ನೇ ಮರೆತರು.

"ಈಗ ಎತ್ಲಾಗೆ ಹೋಗೋಣಾ ಶೀನಿ...." ಪ್ರಶ್ನಿಸಿದರು.

ಮೂವರೂ ಮ್ಯೂಜಿಯಮ್‌ನ ಕಡೆಗೆ ಹೊರಟರು.

ವಸ್ತು ಸಂಗ್ರಹಣಾಲಯವನ್ನು ನೋಡಿ ಮೂವರೂ ಹೊರಗೆ ಬರುವುದರಲ್ಲಿ ಸೂರ್ಯ ಮುಳುಗಿ ಹೋಗುವುದರಲ್ಲಿದ್ದ. ಹೊನ್ನು ಕಿರಣ ಹಚ್ಚ ಹಸಿರು ಹುಲ್ಲ ಮೇಲೆ ಬಹು ರಮ್ಯವಾಗಿ ನಲಿಯುತ್ತಿತ್ತು. ಶಕುಂತಲ ಪಶ್ಚಿಮ ದಿಗಂತದತ್ತ ಮುಖ ಮಾಡಿ ನಿಂತಳು. ಕೆಂಪು ಮುಖ ಇನ್ನೂ ರಂಗಾಗಿ ಹೊಳೆಯಿತು. ಸುತ್ತಲಿನ ಹಸುರ ನಡುವೆ ಅವಳು ಉಟ್ಟಿದ್ದ ಗುಲಾಬಿ ಬಣ್ಣದ ಸೀರೆ ಬಹು ಅಂದವಾಗಿ ಕಾಣುತ್ತಿತ್ತು. ಕೊರಳಲ್ಲಿದ್ದ ಮೂರೆಳೆಯ ಮುತ್ತಿನ ಸರ ಸಪ್ತವರ್ಣವನ್ನು ಚೆಲ್ಲುತ್ತಿತ್ತು. ಶೀನಿ ಶಕುಂತಲೆಯನ್ನು ಬಹು ಹೊತ್ತು ರೆಪ್ಪೆ ಆಡಿಸದೆ ನೋಡಿದ. ಶಕುಂತಲೆ ನೋಡಿ ತಲೆ ತಗ್ಗಿಸಿದಳು.

"ಬಹಳ ಚೆನ್ನಾಗಿದೆ ಮ್ಯೂಜಿಯುಮ್...." ಮೊದಲನೇಬಾರಿ ನೋಡುವ ಅವಳಿಗೆ ವಸ್ತು ಸಂಗ್ರಹ ಶಾಲೆ ಅದ್ಭುತವಾಗಿಯೇ ಕಂಡಿತ್ತು.

"ಏನೊ ಅಷ್ಟರಲ್ಲೆ ಇದೆ. ಇನ್ನೂ ಸಾಲದು...." ಬೇರೆ ಯಾವ

ವಸ್ತು ಸಂಗಹವನ್ನು ಕಾಣದೇ ಇದ್ದರೂ ಕೇಳಿ ತಿಳಿದಿದ್ದರ ಮೇಲೆ ನುಡಿದ. "ಮದ್ರಾಸು, ಬೊಂಬಾಯಿ, ಕಲ್ಕತ್ತಾಗಳಲ್ಲಿ ಉತ್ತಮ ವಸ್ತು ಸಂಗಹಣಾಲಯಗಳಿವೆ."

ಮೂವರೂ ಅಲ್ಲೆ ಹತ್ತಿರ ಇದ್ದ ಬಿದಿರು ಮೆಳೆಗಳ ಮಧ್ಯದ ದಾರಿಯಲ್ಲಿ ನಡೆದು ಹಸರು ಹುಲ್ಲ ಮೇಲೆ ಕುಳಿತರು.

"ಕೂತಿರಿ ಈಗ ಬಂದೆ ಸ್ವಲ್ಪ ಕಡ್ಲೆಕಾಯಿ, ಬಾಣೆಹಣ್ಣು ತರ್ತೀನಿ...." ಉತ್ತರವನ್ನೂ ನಿರೀಕ್ಷಿಸದೆ ಹೊರಟುಹೋದ ಶೀನಿ.

ಕಡ್ಲೆಕಾಯಿ, ಪುರಿ, ಹುರಿಗಡಲೆ, ಬಾಳೆಹಣ್ಣು ಇವುಗಳನ್ನು ತನ್ನ ಚೌಕದಲ್ಲಿ ಹಾಕಿಸಿಕೊಂಡು ಅಂಗಡಿಯಿಂದ ತಿರುಗುವುದರಲ್ಲಿ ವೆಂಕಟರಾಯರು ಅವನನ್ನು ಕೂಗಿದರು. "ನೋಡು ಶೀನಿ....ಶಕುಂತಲ ಒಬ್ಬಳೇ ಇದ್ದಾಳೆ. ನಾನು ಇವರ ಜೊತೇಲಿ ಸ್ವಲ್ಪ ದೂರ ಹೋಗಿ ಬರ್ತೀನಿ...."

"ನೀವು ಹೊಗಿ ಮಿಸ್ಟರ್ ಇವರ ಮಗಳ್ನ ಕರಕೊಂಡು....ಮನೆಗೆ ಇವರು ಈಗ್ಲೆ ಬರೊಲ್ಲ. ಸುಮ್ನೆ ಕಾಯ್ಬೇಡಿ. ಇವರ ಹತ್ರ ನಂಗೆ ಬೇಕಾದಷ್ಟು ಕೆಲ್ಸವಿದೆ." ಎಮ್. ಎಲ್. ಎ. ರಂಗಪ್ಪಗೌಡರು ನುಡಿದರು.

"ಸ್ವಲ್ಪ ಹೊತ್ತು ನೋಡು ಶೀನಿ. ನಾನು ಬರೋದು ಲೇಟಾದ್ರೆ ನೀನು ಅವಳ್ನ ಕರಕೊಂಡು ಮನ್ಗೆ ಹೋಗು....ನಾನು ಮನ್ಗೇ ಬರ್ತೀನಿ.... ಇವರ ಕೈಲಿ ಸಿಕ್ಕಿದ ಮೇಲೆ ಆಗಿಹೋಯ್ತು...." ರಾಯರು ನಗುತ್ತ ನುಡಿದರು....ಶೀನಿ ಒಂದು ನಿಮಿಷ ಅನುಮಾನಿಸುತ್ತ ಅಲ್ಲೆ ನಿಂತವನು ಅನಂತರ ಮುಗುಳ್ನಕ್ಕು ಶಕುಂತಲಳತ್ತ ನಡೆದ.

"ಇನ್ನೂ ಒಂದು ಗಂಟೆ ಇಲ್ಲೆ ಇರ್ತೀವಿ....ಅಷ್ಟರಲ್ಲಿ ಬಂದುಬಿಡಿ...." ಶೀನಿ ಕೂಗಿದ.

"ನೀವು ಕಾಯಬೇಡಿ...." ರಂಗಪ್ಪಗೌಡರೇ ಉತ್ತರವಿತ್ತರು.

ಶಕುಂತಲ ಹಸುರ ಹುಲ್ಲ ಮೇಲೆ ಅರ್ಧ ಮಲಗಿ ಬಾಯಲ್ಲಿ ಒಂದು ಹುಲ್ಲುಕಡ್ಡಿಯನ್ನು ಅಗಿಯುತ್ತ ಸುತ್ತಲಿನ ವಿವಿಧ ಬಣ್ಣದ ಪುಷ್ಪಗಳ ಸೊಬಗನ್ನು ನೋಡಿ ಆನಂದಿಸುತ್ತಿದ್ದಳು. ಶೀನಿ ಅಲ್ಲಿಗೆ ಬಂದೊಡನೆಯೇ ಎದ್ದು ಕುಳಿತಳು. "ನಿಮ್ಮ ತಂದೆ ಯಾರ ಜೊತೆಯಲ್ಲೊ ಹೋದ್ರು..." ಶಕುಂತಲಳಿಗೆ ಗೊತ್ತಿರಲಾರದೆಂದು ನುಡಿದ. "ಹೂಂ! ಅದೇ ರಂಗಪ್ಪ ಬಂದಿದ್ದ ಕರಕೊಂಡು ಹೋದ. ಅವನಂತೂ ಬಂದುಬಿಟ್ರೆ ಆಗಿಹೋಯ್ತು ಅಣ್ಣನ್ನ ಎಲ್ಲೂ ಬಿಡೋಲ್ಲ. ಅದೇನು ಮಾತೊ ಏನೊ ನಾನು ಕಾಣೆ....ದಿನವೆಲ್ಲಾ ಮಾತ್ನಾಡ್ತಾ ಇರ್ತಾರೆ."

"ನಿಮ್ಮ ತಂದೆ ಬರೋದು ಹೊತ್ತಾಗುತ್ತಂತೆ. ನಾವು ಮನ್ಗೆ ಹೋಗ್ಬೇಕಂತೆ...." ಶೀನಿ ನುಡಿದು ಹುಲ್ಲಿನ ಮೇಲೆ ತಾನು ತಂದಿದ್ದ ತಿಂಡಿ ಸುರಿದ. ಶಕುಂತಲ ಒಂದು ಕಡಲೆ ಕಾಯನ್ನು ಸುಲಿದು ಬಾಯಿಗೆ ಹಾಕಿಕೊಂಡಳು.

"ಈ ಕಬ್ಬನ್‌ಪಾರ್ಕ್ ನಿಜವಾಗ್ಲೂ ನೋಡ್ಬೇಕಾದ್ದೆ. ಎಷ್ಟು ಚೆನ್ನಾಗಿ ಗಿಡಗಳನ್ನು ಬೆಳೆಸಿದ್ದಾರೆ. ನಂಗಂತೂ ಇದನ್ನು ಬಿಟ್ಟೇ ಹೋಗಲು ಮನಸ್ಸಿಲ್ಲ .." ಕಡ್ಲೆಕಾಯನ್ನು ಸುಲಿಯುತ್ತಿದ್ದವಳು ಅದನ್ನು ಹಾಗೇ ಬಿಟ್ಟು ಸುತ್ತಲೂ ನೋಡಿದಳು. ಹಿನ್ನೆಲೆಗೆ ತಕ್ಕಂತೆ ಬಣ್ಣ ಬಣ್ಣದ ಹೂಗಳು ಅರಳಿ ನಿಂತಿದ್ದವು.

"ಇಲ್ಲೆ ಇದ್ದು ಬಿಡು ಯಾರು ಬೇಡ ಅಂತಾರೆ....?" ನಗುತ್ತ ನುಡಿದ ಶೀನಿ.

ಇಬ್ಬರೂ ಸುಮ್ಮನೆ ಕುಳಿತರು. ಏನು ಮಾತನಾಡಬೇಕೆಂಬುದು ಇಬ್ಬರಿಗೂ ಹೊಳೆಯದು. ಒಬ್ಬರ ಮುಖವನ್ನೊಬ್ಬರು ನೋಡಿ ತಲೆಯನ್ನು ತಗ್ಗಿಸುತ್ತಿದ್ದರು. ಎದುರಿಗೆ ಬಿದ್ದಿದ್ದ ತಿಂಡಿಯ ರಾಶಿಯು ಸ್ವಲ್ಪವೂ ಕಡಿಮೆಯಾಗಿರಲಿಲ್ಲ. ಶಕುಂತಲ ಕೈಗೆತ್ತಿಕೊಂಡ ಕಡಲೆಕಾಯಿ ಕೈಯ ಬೆರಳುಗಳ ಮಧ್ಯೆ ಸ್ವಲ್ಪ ಹೊತ್ತು ಸಂದಾಡಿ ಕೊನೆಗೆ ನಿಧಾನವಾಗಿ ಎರಡು ಭಾಗಗಳಾಗಿ ಒಂದೊಂದು ಬೇಳೆ ಬಾಯಿಗೆ ಹೋಗುತ್ತಿದ್ದವು. ಬಾಯಿ ಜೋರಾಗಿ ಅಲುಗಾಡಿದರೆ ಅಲ್ಲಿನ ಗಭೀರ ಶಾಂತಿಗೆ ಎಲ್ಲಿ ಚ್ಯುತಿ ಬರುವುದೊ ಎಂದು ನಿಧಾನವಾಗಿ ಅದು ತನ್ನ ಕೆಲಸ ಮಾಡುತ್ತಿತ್ತು. ಹಾಗೂ ಹೀಗೂ ಸ್ವಲ್ಪ ಚುರುಕಾಗಿ ಕೈಯಾಡಿಸುತ್ತಿದ್ದವನು ಅಂದರೆ ಶೀನುವೇ. ಅವನು ಆಗಲೇ ಎರಡು ಬಾಳೆ ಹಣ್ಣನ್ನು ತಿಂದು ಮುಗಿಸಿದ್ದ. ಸಾಕಷ್ಟು ಕಡಲೆಕಾಯಿಯೂ ಅವನ ಹೊಟ್ಟೆ ಸೇರಿತ್ತು.

"ನಾನು ಇವನ್ನು ತಂದು ಹಾಕಿರೋದು ತಿನ್ನೋಕೆ ಸುಮ್ನೆ ಕೆದಕೋಕೆ ಅಲ್ಲ ..." ಸ್ವಲ್ಪ ಹೊತ್ತಿನಿಂದಲೂ ನೋಡುತ್ತಿದ್ದ ಶೀನಿ ನುಡಿದ. ಶಕುಂತಲೆಯ ಕೈ ಕಡ್ಲೆಕಾಯಿಯ ರಾಶಿಯಮೇಲೆ ಸುಮ್ಮನೆ ಸರಿದಾಡುತ್ತಿತ್ತೆ ವಿನಃ ಅದನ್ನು ತೆಗೆದುಕೊಂಡಿರಲಿಲ್ಲ. ಇದನ್ನು ಕೇಳಿ ಬೆಚ್ಚಿಬಿದ್ದು ಎದ್ದು ಕುಳಿತಳು. ಒಂದು ಕಡ್ಲೆಕಾಯನ್ನು ತೆಗೆದುಕೊಂಡು ಬಾಯಿಗೆ ಹಾಕಿಕೊಂಡಳು. "ತಗೋ ಬಾಳೆಹಣ್ಣು ತಿನ್ನು...." ಬಾಳೆ ಹಣ್ಣಿನ ಚಿಪ್ಪನ್ನು ಅವಳ ಮುಂದೆ ಹಿಡಿದ.

"ನಾನೇನು ಹಿಡಿಂಬೀನಾ ಇಷ್ಟೊಂದು ತಿನ್ನೋಕೆ?" ಎರಡು ಬಾಳೆ ಹಣ್ಣುಗಳನ್ನು ಕಿತ್ತುಕೊಂಡಳು.

" ನಾನು ಆಗ್ಲಿಂದ ಒಂದೇ ಸಮನಾಗಿ ತಿಂತಾ ಇದ್ದಿನಲ್ಲ. ಇನ್ನೂ ನಾನೇ ತಿಂದು ಮುಗಿಸೋಕೆ ನಾನೇನು ಬಕಾಸುರನೆ...." ಶೀನಿ ನುಡಿದಾಗ ಶಕುಂತಲ ಗಹಗಹಿಸಿದಳು. ಅವಳು ನಕ್ಕಿದನ್ನು ಕಂಡು ಇವನೂ ನಕ್ಕ.

ಪುನಃ ಮೌನ ಆವರಿಸಿತು.

ಈಸಾರಿ ಇಬ್ಬರ ಕೈಯೂ ಜಡವಾಗಿರಲಿಲ್ಲ, ಬಹು ಚೂಟಿಯಾಗಿ ಓಡಾಡುತ್ತಿದ್ದವು. ಕೊನೆಗೆ ಈಸಾರಿಯೂ ಶೀನಿಯೇ ಮೌನವನ್ನು ಮುರಿದ. "ಈಸಾರಿ ನೀನು ಎಸ್.ಎಸ್.ಎಲ್.ಸಿ.ಗೆ ಕಟ್ಟಿದ್ದೀಯಲ್ವಾ ?"

" ಹೂಂ! ಕಟ್ಟಿದ್ದೇನೆ. ಏನು ಪಾಸಾಗುತ್ತೊ ನಾನುಕಾಣೆ. ಬಹುಶಃ ಆಗೊಲ್ಲ...."

" ಸುಳ್ಳು ಹೇಳೋದು ಬೇರೆ ಚೆನ್ನಾಗಿ ಕಲ್ತುಬಿಟ್ಟಿದ್ದಿ. ನಿಂಗೆ ಪಾಸಾಗ್ದೆ ಇನ್ಯಾರಿಗೆ ಆಗ್ಬೇಕು . ಪಾಸಾಗುತ್ಲ್ಲ ಏನು ಕಾಲೇಜಿಗೆ ಸೇರ್ತಿಯೊ....ಅಥವ ನಿಮ್ಮಣ್ಣ ಹೇಳಿದ್ದಲ್ಲ ಹಾಗೆ ಎಲ್. ಎಮ್. ಪಿ. ಗೆ ಸೇರ್ತಿಯೊ ...?"

" ಪಾಸಾಗೊ ನಂಬಿಕೇನೇ ಇಲ್ದಮೇಲೆ ಅವೆಲ್ಲಾ ಯಾಕೆ ಅಂತ."

" ಒಂದು ಸಮಯ ಆಯ್ತು ಅಂತ ಇಟ್ಕೊ....ಆಮೇಲೆ ಏನ್ಮಾಡ್ತಿ....?"

" ನೀನು ಬಿ.ಎಸ್‌ಸಿ. ಪಾಸುಮಾಡಿ ಏನ್ಮಾಡ್ತಿ....?" ಅವಳು ಉತ್ತರಕ್ಕೆ ಬದಲಾಗಿ ಪ್ರಶ್ನಿಸಿದಳು.

" ಇನ್ನೇನು ಮಾಡೋದು ಗೊತ್ತೇ ಇದ್ಯಲ್ಲ. ಪಾಸಾದ್ರೆ ಅಪ್ಲಿಕೇಷನ್ ಬರೆದುಕೊಂಡು ಆಫೀಸ್ ತಿರಗೋದು. 'ಕೆಲಸ ಖಾಲಿಇಲ್ಲ' ಅಂತ ಹೇಳಿಸ್ಕೊಂಡು ಹೊರಗೆ ಬರೋದು .. ಕೆಲ್ಸದ ಬೇಟೆ ಇದ್ಯಲ್ಲ !...." ಹೇಳಿ ನಕ್ಕ.

" ನಿನೇನು ಮಾಡ್ತಿ ಹೇಳ್ಳೇ ಇಲ್ವಲ್ಲ...." ಪುನಃ ಬಲವಂತ ಪಡಿಸಿದ.

" ಪಾಸು ಆಗೊ ನಂಬಿಕೆ ಅಂತೂ ನಂಗೆ ಇಲ್ಲ. ಒಂದುವೇಳೆ ಆದ್ರೆ ಕಾಲೇಜು ಸೇರೊಲ್ಲ. ನನಗೆ ಈಗಿನ ವಿದ್ಯಾಭ್ಯಾಸ ಕ್ರಮದಲ್ಲಿ ನಂಬಿಕೆಯಿಲ್ಲ."

" ನಂಬಿಕೆಯಿಲ್ಲ ..." ಆಶ್ಚರ್ಯಗೊಂಡ ಶೀನಿ.

" ಹೌದು ನಂಬಿಕೆಯಿಲ್ಲ. ಇದು ಮನುಷ್ಯರ ಬೆಳವಣಿಗೆಗೆ ಸರಿಯಾದ ವಿದ್ಯೆಯಲ್ಲ. ಇದು ನೌಕರಿ ಬೇಟೆಗಾಗಿ ಹೋರಾಡುವ ವಿದ್ಯೆ. ಈ ವಿದ್ಯೆ ಕಟ್ಟಿಕೊಂಡು ನಾವು ಹೆಂಗಸರು ಏನ್ಮಾಡಬೇಕಾಗಿದೆ. ಹೆಂಗಸಿಗೆ ಲೋಕ ವ್ಯವಹಾರ ಜ್ಞಾನ ತಿಳಿದರೆ ಸಾಕು. ಓದಿ ಬಿ. ಎ., ಎಂ. ಎ. ಪಾಸು ಮಾಡಿ ಯಾವ ರಾಜ್ಯಭಾರ ಮಾಡಬೇಕಾಗಿದೆ."

"ವಿದ್ಯೆಯ ಗಂಧವೇ ಇಲ್ಲದ ಎಷ್ಟೋ ಜನ ಸಮಾನತೆಗಾಗಿ ಹೋರಾಡ್ತಾ ಇರೋವಾಗ ನೀನು ಹೀಗೆ ಹೇಳೋದು ಆಶ್ಚರ್ಯ. ಹೆಚ್ಚಿಗೆ ವಿದ್ಯೆ ಕಲ್ತರೇನು ತಪ್ಪು. ಜ್ಞಾನ ಹೆಚ್ಚುತ್ತೆ ...ಜೀವನವ ಮಟ್ಟ ಸುಧಾರಿಸುತ್ತೆ. ಓದಿದ ಹುಡುಗಿ ತನ್ನ ಸಂಸಾರಾನ್ನ ಬಹಳ ಸೊಗಸಾಗಿ ನಡ್ಸ ಬಹುದು."

"ಸಂಸಾರ ಸುಧಾರಿಸಿ ನಡೆಸುವ ಸ್ಥೈರ್ಯವಿದ್ದರೆ ಸಾಕು. ನಡೆಸ ಬಹುದು. ಇದಿಲ್ಲದಿದ್ದರೆ ಎಷ್ಟು ಓದಿದರೂ ಒಂದೇ."

"ಓದಿದ ಹುಡುಗಿ ಗಂಡನ್ನ ಚೆನ್ನಾಗಿ ಆಳ್ತಾಳೆ ...ಹೆಚ್ಚಿಗೆ ವಿದ್ಯೆ ಇದ್ದಷ್ಟು ಗಂಡನ್ನ ಕೈಲಿ ಹಿಡಿದು ಕುಣ್ಸಬಹುದು...."

"ಹಾಗಾದ್ರೆ ನೀನು ನಿನ್ನ ಹೆಂಡ್ತಿ ಕೈಯ ಬೊಂಬೆ ಅನ್ನು...." ನಗೆಯಾಡಿದಳು.

"ನಾನೇ .. ?!" ಗಹಗಹಿಸಿದ ಶೀನಿ. "ಗರಕ್....ಗುರಕ್ ಅಂದ್ರೆ ಕಿವಿ ಹಿಂಡ್ತೀನಿ. ತಲೆಮೇಲೆ ಹಾಕ್ತೀನಿ ...ಹೀಗೆ..." ಶಕುಂತಲಳ ಕಿವಿಯನ್ನು ಹಿಂಡಿದ.

"ಹೋಗೋ ಸಾಕು ನಿನ್ನ ಹುಡುಗಾಟ....ಕಿವಿಯೆಲ್ಲಾ ಕೆಂಪಾಗಿ ಹೋಯ್ತು ಅಂತ ಕಾಣುತ್ತೆ ಉರಿತಾ ಇದೆ." ತನ್ನ ಕಿವಿಯನ್ನು ಮುಟ್ಟಿ ನೋಡಿಕೊಂಡಳು. "ಅದಕ್ಕೆ ನಿನ್ನ ಹತ್ರ ಮಾತಾಡಬಾರ್ದು ಅನ್ನೋದು ....ಹೋಗ್ತೀನಿ ನಾನು...." ಮುನಿಸಿನಿಂದ ಮೇಲಕ್ಕೆ ಎದ್ದಳು. ನಾಲ್ಕು ಹೆಜ್ಜೆ ಮುಂದೆ ಹೋದಳು. ಶೀನಿ ಏಳಲಿಲ್ಲ ... "ಹೋಗು....ಹೋಗು ಎಲ್ಲಿ ಹೋಗ್ತಿಯೊ ಹೋಗು....ನಾನು ಇಲ್ಲೇ ಇರ್ತೀನಿ...." ನಗುತ್ತ ನುಡಿದ.

ಹತ್ತು ಹೆಜ್ಜೆ ಮುಂದೆ ಹೋದ ಶಕುಂತಲ ಅಲ್ಲಿ ನಿಂತು ಹಿಂತಿರುಗಿ ನೋಡಿ ಮುಗುಳು ನಗೆ ನಕ್ಕು ಪುನಃ ಬಂದು ಕುಳಿತಳು.

"ನೀನೊಬ್ಬ ಹಟಮಾರಿ .." ಕೈಯಲ್ಲಿ ಹಿಡಿದಿದ್ದ ಸಣ್ಣ ಹುಲ್ಲಿನ ಕಡ್ಡಿಯಿಂದ ಅವನ ತಲೆಯ ಮೇಲೆ ಹೊಡೆದಳು. "ಕೂತ್ಕೊಳ್ಳೇ ಸಾಕು ....ನಿನ್ನ ಸಿಟ್ಟು" ಕೈ ಹಿಡಿದು ಎಳೆದ. ಶಕುಂತಲ ತೂರಾಡಿ ಅಷ್ಟು ದೂರದಲ್ಲಿ ಕುಕ್ಕರುಬಿದ್ದಳು.

"ನಿನ್ನ ಕೈಗೆ ಸಿಕ್ಕೋಳು ನಿಜವಾಗ್ಲೂ ಪಾಪ ಮಾಡಿರಬೇಕು...." ಮುಖವನ್ನು ಅತ್ತ ತಿರುಗಿಸಿ ಪುನಃ ತಲೆಯನ್ನು ತಗ್ಗಿಸಿ ನಕ್ಕಳು.

"ನೀನು ಬಾಳ ಪುಣ್ಯ ಮಾಡಿ ಹುಟ್ಟಿದ್ದಿ ಅಂತ ಕಾಣುತ್ತೆ...." ಗಂಭೀರವಾಗಿ ಒಳಗಿನ ನಗುವನ್ನು ತಡೆದು ನುಡಿದ.

ಶಕುಂತಲಳಿಗೆ ನಗು ತಡೆಯಲಾಗಲಿಲ್ಲ. ಜೋರಾಗಿ ನಕ್ಕುಬಿಟ್ಟಳು.

ಸ್ವಲ್ಪ ಹೊತ್ತು ಇಬ್ಬರ ಮಧ್ಯೆ ಗಂಭೀರ ಮೌನ ಪುನಃ ಆವರಿಸಿತು.

"ಕಾಲೇಜು ಅಂತೂ ಸೇರೊಕ್ಕೆ ನಿನಗೆ ಇಷ್ಟವಿಲ್ಲ. ನಿನ್ನ ಬುದ್ಧಿಗೆ ಸರಿಯಾದ ವಿದ್ಯೆ ಅಲ್ಲ ಅಲ್ಲಿ ಹೇಳಿಕೊಡೋದು. ಹೋಗ್ಲಿ ಎಲ್. ಎಮ್. ಪಿ. ಸ್ಕೂಲಿಗಾದ್ರೂ ಸೇರಬಹುದಲ್ಲ...." ಹಿಂದೆ ಅರ್ಧಕ್ಕೆ ನಿಂತುಹೋಗಿದ್ದ ಮಾತನ್ನು ಪುನಃ ಕೆಣಕಿದ. "ಹೆಂಗಸರಿಗೆ ಸರಿಯಾದ ವಿದ್ಯೆ ಇದು. ಅವರ ಕೋಮಲ ಸ್ವಭಾವಕ್ಕೂ, ಸೇವಾಪ್ರಕೃತಿಗೂ ಇದು ಸರಿಹೋಗುತ್ತೆ. ಇದು ನಿನ್ನ ಅಭಿಪ್ರಾಯ ನನ್ನ ಅಭಿಪ್ರಾಯ ಅಲ್ಲ. ನಾನು ಬದಲಾಯ್ಸಿದೆ ಅಂತ ತಿಳ್ಕೋಬೇಡ. ಇದ್ರಲ್ಲಿ ಮನುಷ್ಯನ ಅಂತರ್ಯದ ಬೆಳವಣಿಗೆ ಕಡಿಮೆ ಆಗೊಲ್ಲ ಜನತಾಸೇವೆ ಆದ ಹಾಗೂ ಆಯ್ತು....ಸಾಕಷ್ಟು ಗೌರವವೂ ಇರುತ್ತೆ...."

"ಅದೇನೊ ಸರಿ. ಜನತೆಯನ್ನು ಸೇವಿಸಬೇಕೆನ್ನುವವರಿಗೆ ಇದೇ ಸರಿಯಾದ ಮಾರ್ಗ. ನಂಗೂ ಅನ್ಸುತ್ತೆ ಹೆಂಗಸಾಗಿ ಹುಟ್ಟಿದ ಮೇಲೆ ತನ್ನ ಕೈಲಾದ ಸೇವೆಯನ್ನು ಮಾಡಬೇಕು ಅಂತ. ಸರಿಯಾದ ಸೇವೆಯಿಂದ ರೋಗಿಯ ಮೇಲೆ ಆಗುವ ಪರಿಣಾಮ ಬಹಳ ಹೆಚ್ಚಿನದು...."

"ಹೌದು! ಹೌದು! ಹೆಂಗಸು ರೋಗಿಯಮೇಲೆ ಬಾಳ ಪ್ರಭಾವ ಬೀರ್ತಾಳೆ...." ಮಧ್ಯದಲ್ಲೇ ಅವಳ ಮಾತನ್ನು ತಡೆಹಾಕಿ ನುಡಿದ ಶೀನಿ.

ಶಕುಂತಲ ತೀಕ್ಷ್ಣವಾಗಿ ಅವನತ್ತ ನೋಡಿ ಪುನಃ ಮುಂದುವರಿಸಿದಳು. "ಈ ಸೇವೆಯಿಂದ ಇಹದಲ್ಲಿ ಉಪಯೋಗವಿದ್ದರೂ ಪರದಲ್ಲಿ ಯಾವರೂ ಇದರ ಫಲವನ್ನು ಉಣ್ಣಬಹುದು. ಆದರೆ ಇದನ್ನು ಪೂರ್ಣವಾಗಿ ನಿರ್ವಹಿಸುವ ಸ್ಥೈರ್ಯವಿಲ್ಲ ನನ್ನಲ್ಲಿ. ಮನಸ್ಸು ಅಳುಕುತ್ತೆ."

"ಪಾಪ, ಅಲ್ಲ ಹಣ ಕುಯ್ಯಬೇಕಾಗುತ್ತೆ; ಕುಯ್ದರೆ ಹೆಣಕ್ಕೆ ನೋವಾಗುತ್ತೆ" ನಗೆಯಾಡಿದ.

"ನಿಂದು ಯಾವಾಗ್ಲೂ ಹಾಸ್ಯವೇ ಶೀನಿ. ನಾನು ಸೀರಿಯಸ್ ಆಗಿ ಹೇಳ್ತಾ ಇದ್ದಿನಿ ಡಾಕ್ಟರ ವೃತ್ತಿ ಏನೊ ಬಹಳ ಅಮೂಲ್ಯವಾದ್ದು. ಆದರೆ ಆ ರಕ್ತ, ಆ ರೋಗಿಗಳ ನೋವು, ಆ ಆಸ್ಪತ್ರೆಯ ವಾತಾವರಣ ಇವುಗಳನ್ನು ಎದುರಿಸುವ ಸ್ಥೈರ್ಯವಿಲ್ಲ ನನಗೆ. ಇದು ನನ್ನ ದುರ್ಬಲತೆ. ನಾನೇ ಅರಿತಿದ್ದೇನೆ. ಇದನ್ನು ಮಾಡುವ ಜನ ಬಹಳವಿದ್ದಾರೆ. ಅವರೇ ಮಾಡಲಿ ಎಂತ ಸಮಾಧಾನ ಪಟ್ಟುಕೊಬೇಕಾಗಿದೆ...."

"ಮಾಡುವ ಮನೋಭಾವವಿದ್ದರೆ ಸಾಕು ಸ್ಥೈರ್ಯ ತಾನಾಗಿಯೇ ಬರುತ್ತದೆ."

"ಇಲ್ಲ. ಸುಳ್ಳು. ಮನೋಭಾವವೇ ಸ್ಥೈರ್ಯವೆಂದಿಗೂ ಆಗದು. ಸ್ಥೈರ್ಯ

ವಿದ್ದರೆ ಮನೋಭಾವವನ್ನು ರೂಪಿಸಿಕೊಳ್ಳಬಹುದು."

"ಹಾಗಾದರೆ ನಿನ್ನ ಜೀವನಧ್ಯೇಯ?"

"ನಾನು ಸಾಮಾನ್ಯ ಹೆಂಗಸು. ಎಲ್ಲರಂತೆ ಕೇವಲ ಆಸೆ ಬಯಕೆಗಳನ್ನು ಹೊತ್ತು ಬಂದವಳು. ಯಾವ ಧ್ಯೇಯ ಸಾಧನೆಗೂ ಹುಟ್ಟಿ ಬಂದವಳಲ್ಲ...."

ಶೀನಿ ಜೋರಾಗಿ ನಕ್ಕ. "ಆಸೆ....! ಬಯಕೆ....!" ಹೇಳಿ ಇನ್ನೊಮ್ಮೆ ನಕ್ಕ. ಶಕುಂತಲ ಸುಮ್ಮನೆ ಅವನನ್ನು ನೋಡಿದಳು.

"ಪ್ರಾಚೀನ ಸಂಸ್ಕೃತಿಯು ನೆಳಲಾಗಿ ಬಾಳಿ ಅಳಿಯಬೇಕೆಂಬುದೇ ನನ್ನ ಆಸೆ. ನಾನು ಯಾವ ಧ್ಯೇಯವನ್ನು ಹೊತ್ತು ನಿರ್ವಹಿಸಲಾರೆ. ಮುಖ್ಯವಾಗಿ ಈ ಆಕಾಂಕ್ಷೆಯೇ ನನಗೆ ಇದುವರೆಗೂ ಬಂದಿಲ್ಲ."

"ಹಾಗಾದ್ರೆ ಬಿಚ್ಚಾಲಿ ಗೌರಮ್ಮನಾಗಿ ಗಂಡನ ಸೇವೆ ಮಾಡ್ತಿ ಅನ್ನು...."

"ಯಾಕೆ ನಗುತ್ತಿ ಶೀನಿ. ಹಾಗಾದರೆ ತಪ್ಪೇನು? ಮದುವೆಯಾಗುವುದು ತಪ್ಪೆ .? ಸತಿಯಾಗಿ ಗಂಡನ ಇಚ್ಛೆ ಅನಿಚ್ಛೆಗಳನ್ನು ಅರಿತು ಅವನೊಡನೆ ಸಹಕರಿಸಿ ಬಾಳುವುದು ತಪ್ಪೆ?"

"ಹಾಗಲ್ಲ ಶಕುಂತಲ ನಾನು ಹೇಳಿದ್ದು....ಓದಿದ ಹುಡುಗಿಯರು ಕೇವಲ ಮಡಿ ಮುತ್ತೈದೆಯಂತೆ ಇರಬಾರದು. ನಾಗರಿಕತೆಯನ್ನು ಕಲಿತುಕೊಳ್ಳಬೇಕು...."

"ನಾಗರೀಕತೆ....! ನಾಗರೀಕತೆ! ಹಾಗೆಂದರೆ ಏನು, ಅದನ್ನಾದರೂ ಹೇಳು ಶೀನಿ"

"ನಾಗರೀಕತೆ ...!....ನಾಗರೀಕತೆ ಅಂದ್ರೆ ...ಅಂದ್ರೆ ಅದೇ...." ತಡವರಿಸಿದ ಶೀನಿ.

"ಹೂಂ....ಹೇಳು ಶೀನಿ. ಯಾಕೆ ನಿಲ್ಲಿಸಿದೆ. ಹೇಳು. ಗಂಡಸರ ಜೊತೆಯಲ್ಲಿ ಸ್ವೇಚ್ಛೆಯಾಗಿ ವಿಹರಿಸಬೇಕು. ಕೋರ್ಟು, ಆಫೀಸಿನಲ್ಲಿ ಕೆಲಸ ಮಾಡಬೇಕು. ಕ್ಲಬ್ಬುಗಳಿಗೆ ಪ್ರತಿ ದಿನ ಭೇಟಿಕೊಡಬೇಕು. ಪರಗಂಡಸು ಎಂಬ ಬೇಧವನ್ನು ಎಣಿಸದೆ ಎಲ್ಲರೊಡನೆ ವ್ಯವಹರಿಸಬೇಕು.....ಹೂಂ.... ಹೇಳು...."

"ಗಂಡನನ್ನು ಆರಿಸುವಾಗ ಸ್ವಾತಂತ್ರ್ಯವಹಿಸಬೇಕು. ಮದುವೆಗೆ ಮುಂಚೆ ಪಾಶ್ಚಿಮಾತ್ಯ ದೇಶದಲ್ಲಿರೊ ಹಾಗೆ ಕೋರ್ಟುಷಿಪ್‌ಗೆ ಹೆಂಗಸರು ಒಪ್ಪಬೇಕು. ಗಂಡಸಿಗೆ ಯಾವ ವಿಧದಲ್ಲೂ ಕಡಿಮೆ ಎಂದು ತಿಳಿಯದೆ ವ್ಯವಹರಿಸಬೇಕು. ತನ್ನ ಜೀವನ ಮತ್ತು ನಿರೂಪಿಸಿಕೊಳ್ಳಲು ಆಕೆಯೇ

ಸಂಪೂರ್ಣ ಸ್ವಾತಂತ್ರ್ಯವಾಗಿರಬೇಕು. ಇನ್ನೆಲ್ಲಾ ನೀನೇ ಹೇಳಿದ್ದಿ...."

"ನಿನ್ನ 'ನಾಗರಿಕತೆ'ಯ ವಿವರಣೆ ಮುಗಿಯಲಿಲ್ಲ. ಶೀನಿ ಮುಖ್ಯವಾದ್ದನ್ನೆ ಮರೆತುಬಿಟ್ಟದ್ದಿ. ಜ್ಞಾಪಿಸಿಕೊ. ಇನ್ನೇನು ಮರೆತಿದ್ದಿ ಎಂದು." ಸುಮ್ಮನೆ ನಗಲು ಮೊದಲುಮಾಡಿದಳು.

ಶೀನಿ ಸುಮ್ಮನೆ ಅತ್ತ ಇತ್ತ ನೋಡಿದ. ಕೊನೆಗೆ ಶಕುಂತಲಳೇ ಮೊದಲಿಟ್ಟಳು.

"ಮದುವೆಯಾದ ಗಂಡನನ್ನ ಬೇಡವಾದಾಗ ಬಿಟ್ಟು ಇನ್ನೊಬ್ಬನನ್ನು ಕಟ್ಟಿಕೊಳ್ಳುವ ಸ್ವಾತಂತ್ರ್ಯವೂ ಇರಬೇಕು.! ಅಲ್ಲವೇ ಶೀನಿ....? ಇದೂ ನಾಗರಿಕತೆ ನಾರುತ್ತೆ...." ಪುನಃ ನಕ್ಕಳು.

"ಒಂದು ವೇಳೆ ನಾನೇ ನಿನ್ನನ್ನು ಮದುವೆ ಆದೆ ಅಂತ ಇಟ್ಟಿಕೊ.... ಆಗ ನೀನು ನನಗೆ ಪೂರ್ಣ ಸ್ವಾತಂತ್ರ್ಯವನ್ನು ಕೊಡುವೆಯ !" ಪ್ರಶ್ನಿಸಿ ಕಣ್ಣು ಅರಳಿಸಿ ಅವನತ್ತ ತೀಕ್ಷ್ಣವಾಗಿ ನೋಡಿದಳು.

ಶೀನಿ ಬೆಚ್ಚಿಬಿದ್ದ. ಆ ಮಾತನ್ನು ಅವನು ಆಗ ನಿರೀಕ್ಷಿಸಿರಲಿಲ್ಲ. ಇದೇ ಮಾತನ್ನೆ ಮುಂದುವರಿಸಲು ಮಾತಿನ ಸರಣಿಯನ್ನು ಹೊಸೆಯುತ್ತಿದ್ದ.

"ಹಾಂ...! ಹ್ಞ...! ಇಲ್ಲ..." ತಡವರಿಸಿದ. ಏನು ಹೇಳಿದೆ ಎಂಬುದು ಅವನಿಗೆ ತಿಳಿಯದಲಿಲ್ಲ. ಶಕುಂತಲ ಜೋರಾಗಿ ಗಹಗಹಿಸಿದಳು. ಅವನು ಕಣ್ಣು ಅರಳಿಸಿ ಕಾರವಿಲ್ಲದ್ದೆ ನಕ್ಕ.

"ಈ ಸ್ವಾತಂತ್ರ್ಯ ಕೊಡಲು ಈಗ ನೀನು ಒಪ್ಪುವುದಿಲ್ಲ ಅಲ್ಲವೆ? ... ಹೌದು ನನಗೆ ಗೊತ್ತು. ಗಂಡಸರು ಸ್ವಾರ್ಥಿಗಳು. ಬಾಯಲ್ಲಿ ಹೇಳುವುದು ಸುಲಭ ಕಾರ್ಯದಲ್ಲಿ ನಿರ್ವಹಿಸುವುದು ಕಷ್ಟ. ಹೊಸ ಸಭ್ಯತೆ, ಹೊಸ ನಾಗರಿಕತೆಯ ಸೋಗಿನಲ್ಲಿ ಮನುಷ್ಯರು ಮನುಷ್ಯರಾಗೇ ಬಾಳಬೇಕೆ ಹೊರತು ಪ್ರಾಣಿಗಳಾಗಬಾರದು." ಶಕುಂತಲಳ ಕಾದ ಮನಸ್ಸು ಕೆನೆಯಿತು.

"ಪ್ರಾಣಿಗಳಾಗಬೇಕು ಅಂತ ಯಾರು ಹೇಳ್ತಾರೆ. ಮನುಷ್ಯ ಹಿಂದಿನ ಛಾಯಾನುವರ್ತಿಯಾಗಿರದೆ ತನಗೆ ಒಳ್ಳೆಯದೆಂದು ಕಾಣುವ ಹೊಸ ಹಾದಿಯನ್ನು ಹುಡುಕಿ ಹೊರಟರೆ ಅದು ತಪ್ಪೆ? ಮನುಷ್ಯನ ಬುದ್ಧಿಶಕ್ತಿ ಬೆಳೆದಂತೆ ಸಮಾಜದ ಸಭ್ಯತೆಗಳೂ ಬದಲಾಗಲೇಬೇಕು. ಪ್ರಾಚೀನ ಸಂಸ್ಕೃತಿಯ ದೃಷ್ಟಿಯಲ್ಲಿ ಈಗಿನದನ್ನು ಅಳೆದು ಬೆಲೆ ಇಲ್ಲವೆಂದು ಹೇಳುವುದು ಮನಸ್ಸಿನ ಸಣ್ಣತನವನ್ನು ತೋರಿಸುತ್ತೆ .. " ಸುಧಾರಿಸಿಕೊಂಡು ನುಡಿದ.

ಯಾರೊ ತರುಣನೊಬ್ಬ ಹದಿನಾರು ವಯಸ್ಸಿನ ಹುಡುಗಿ ನಗುತ್ತ ಬಹು ಸಂತೋಷವಾಗಿ ಇವರ ಸಮಿಪದಲ್ಲೆ ಹಾದುಹೋದರು.

ಶೀನಿ ಅವರ ಕಡೆಗೆ ನೋಡಿ, ಶಕುಂತಲಳ ಕಡೆಗೆ ತಿರುಗಿ ನಕ್ಕ. "'ಲವರ್ಸ್' ಅಂತ ಕಾಣುತ್ತೆ. ಅಥವ ಹೊಸದಾಗಿ ಮದ್ವೆ ಆದ ಜೊತೆಯಾಗಿರಬಹುದು .. ...." ನಗುವೇ ಅವನ ಮಾತಾಗಿತ್ತು. ತಾನು ತೀವ್ರವಾಗಿ ಹೇಳುತ್ತಿದ್ದ ಮಾತು ಎತ್ತಲೊ ಹೊರಟು ಹೊಗಿತ್ತು.

" ಇದು ನಿಮ್ಮ ಬೃಹತ್ ದೃಷ್ಟಿ ಅಂತ ಕಾಣುತ್ತೆ. ಅಥವ ಹೊಸ ಸಂಸ್ಕೃತಿಯ ತುರುಪು ಇದ್ದರೂ ಇರಬಹುದು. ಕಣ್ಣಿಗೆ ಬೀಳುವ ಸ್ತ್ರೀಯರೆಲ್ಲಾ ನಿಮಗೆ ಒಂದೇ ಕುಲಕ್ಕೆ ಸೇರಿದವರು ಅಲ್ಲವೇ ಶೀನಿ. ಇದು ನಿಮ್ಮ ಪ್ರೌಢ ವಿದ್ಯಾಭ್ಯಾಸದ ಪ್ರತಿಫಲ ವಿದ್ದರೂ ಇರಬಹುದು. ಈ ಕೀಳು ಮನೋಭಾವ ನಮ್ಮಲ್ಲಿ ಅತಿಯಾಗಿ ಬೆಳೆಯುತ್ತಿದೆ. ಯಾವುದನ್ನು ಪೂರ್ಣವಾಗಿ ಪರೀಕ್ಷಿಸದೆ ನುಡಿಯಬಾರದು. ಸ್ತ್ರೀ ಕೇವಲ ಹೆಂಡತಿಯೇ ಅಲ್ಲ. ತಾಯಿಯೂ ಹೌದು. ಸಹೋದರಿಯೂ ಹೌದು. ವಯಸ್ಸಿಗೆ ಬಂದ ಇಬ್ಬರನ್ನು ನೋಡಿ ಅವರ ನೈಜ ಮನೋಭಾವವನ್ನು ಅರಿಯದೆ ಹಾಗೆ ಹೆಸರಿಸುವುದು ಎಷ್ಟು ಅನಾಗರೀಕ ಶೀನಿ... ನನಗಂತೂ ಇದು ತೀರ ಅಸಹ್ಯವಾಗಿ ಕಾಣುತ್ತೆ. ಮದುವೆ ಹೆಣ್ಣು ಗಂಡುಗಳ ಜೀವನದಲ್ಲಿ ಒಂದು ಮಹತ್ತರವಾದ ಘಟ್ಟ."

" ನೀನು ಇನ್ನೂ ಇಷ್ಟೇ ಇದ್ದರೂ ಎಷ್ಟೊಂದು ಮಾತ್ನಾಡ್ತಿ... ಚಿಕ್ಕೋಳಾಗಿದಾಗ್ಲಿಂದಲೂ ಇಷ್ಟೆ... ತುಂಬಾ ಹಟ... ಈಗ್ಲೂ ಹಾಗೇ ಹಟ್ತ್ಟಿ ಪರವಾಗಿಲ್ಲ...." ಬಹಳ ಗಂಭೀರ ವಾಗುತ್ತಿದ್ದ ಮಾತನ್ನ ಸ್ವಲ್ಪ ತಿಳಿಯಾಗಿಸಲು ನುಡಿದ.

" ಹೌದು ಶೀನಿ. ನಾನು ಯಾವಾಗ್ಲೂ ಮಾತನಾಡೋದು ಜಾಸ್ತಿ. ಮೊದಲಿನಿಂದಲೂ ಅಷ್ಟೆ. ಎಲ್ಲರೂ ಇದನ್ನೆ ಹೇಳ್ತಾರೆ. ಆದರೆ ಏನು ಮಾಡ್ಲಿ ನಾನು ಕಲಿತದ್ದು. ನನಗೆ ಸರಿ ಅಂತ ಕಂಡದ್ದನ್ನು ಹೇಳೋದು ನನ್ನ ಸ್ವಭಾವ. ಮನಸ್ಸಿನಲ್ಲಿ ಒಂದು ಹೊರಗೆ ಒಂದು ಮಾತನಾಡೋದು ನಂಗೆ ಬರೊಲ್ಲ...."

ಶೀನಿ ಏಕೊ ಕಂಪಿಸಿದ. ತೆರೆದ ಕಣ್ಣಿನಿಂದ ಆಕೆಯನ್ನು ದೃಷ್ಟಿಸಿ ಪುನಃ ತಲೆಯನ್ನು ತಗ್ಗಿಸಿದ.

" ಅದು ಸರಿಯಾಗಿರಲಿ ಇಲ್ದೆ ಇರ್ಲಿ. ಕೇಳುವವರಿಗೆ ಸರಿಬೀಳಲಿ ಬೀಳದೇ ಇರಲಿ .. ನಂಗೆ ಮಾತ್ನಾಡೋವಾಗ ಒಂದೂ ಗೊತ್ತಾಗಲ್ಲ ನಮ್ಮ ಸ್ಕೂಲಿನಲ್ಲೂ ಅಷ್ಟೆ. ನನ್ನ ರೇಗಿಸಿ ಜೈಸಿಕೊಳ್ಳೋದ್ರಲ್ಲಿ ಬಹಳ ಹುಡುಗಿಯರಿಗೆ ಪ್ರೀತಿ. ಒಂದಲ್ಲ ಒಂದು ಮಾತು ತೆಗೆದು ನನ್ನ ಕೆಣಕುತ್ತಾರೆ.

ನನ್ನ ಬಾಯಿ ನಿಲ್ಲದು. ಗಂಟೆ ಗಟ್ಟಲೆ ಎಷ್ಟೋ ಮಾತ್ನಾಡಿದ್ದೇನಿ." ಶೀನಿ ಯನ್ನು ನೋಡಿದಳು. ಅವನು ಸುಮ್ಮನೆ ಕುಳಿತಿದ್ದ. ಅವನ ಕೈ ಕೆಳಗಿನ ನೆಲವನ್ನು ಒಂದು ಸಣ್ಣ ಕಡ್ಡಿಯಿಂದ ಬಡಿಯುತ್ತಿತ್ತು.

"ಒಟ್ಟಿನಲ್ಲಿ ನಾನು ಇಷ್ಟೇ ಶೀನಿ ಹೇಳೋದು. ನಮ್ಮ ಸದೃಢ ಸಭ್ಯತೆ ಯನ್ನು ಪೂರ್ಣ ಅರ್ಥಮಾಡಿಕೊಳ್ಳದೆ ಪ್ರಾಚೀನವನ್ನು ಅಸಭ್ಯವೆಂದು ತಿಳಿದು ನಮ್ಮ ಸಂಸ್ಕೃತಿ ಹಾಗೂ ಮನೋಧರ್ಮಕ್ಕೆ ಪೂರ್ಣ ವ್ಯತಿರಿಕ್ತ ವಾಗಿರುವ ಪ್ರಾಚೀನ ಸಂಸ್ಕೃತಿಯ ಛಾಯಾನುವರ್ತಿ ಯಾಗಿರುವುದು ನಮ್ಮ ಅಲ್ಪತನ. ನಮ್ಮದನ್ನೇ ನಾವು ಅರ್ಥಮಾಡಿಕೊಳ್ಳುವಂತೆ ಇಲ್ಲ. ಇನ್ನೊಬ್ಬರದನ್ನು ನಮ್ಮದನ್ನಾಗಿ ಮಾಡಿಕೊಳ್ಳಲು ಹವಣಿಸುತ್ತಿದ್ದೇವೆ.... ಇದು ನಾಚೀಗೇಡಿನ ವಿಷಯ ಅಲ್ಲವೆ ಶೀನಿ ..." ಶೀನಿಯ ಹತ್ತಿರ ಸರಿದು ಪ್ರಶ್ನಿಸಿದಳು.

ಶೀನಿ ಮೌನವಾಗಿದ್ದ.

"ಏನು ಹೇಳುತ್ತಿ ಶೀನಿ .. ?" ಕೆಣಕಿದಳು.

"ಪ್ರಾಚೀನ ಸಂಸ್ಕೃತಿಯ ಹುಚ್ಚು ಹಿಡಿದಿದೆ ನಿನಗೆ. ಮನುಷ್ಯನಿಗೆ ಸ್ವಾತಂತ್ರ್ಯ ಇರಬೇಡವೆ? ಜೀವನದ ಜೊತೆಗಾರರನ್ನು ಆರಿಸಿಕೊಳ್ಳುವಾಗ ಹೆಣ್ಣು ಗಂಡು ಸ್ವಾತಂತ್ರ ವಹಿಸುವುದು ತಪ್ಪೆ. ತಂದೆ ತಾಯಿಗಳು ದೇವ ರೆಂದು ಅವರು ಕೊರಳಿಗೆ ಕಟ್ಟಿದ್ದನ್ನು ತಮ್ಮ ಅದೃಷ್ಟವೆಂದು ತಿಳಿದು ಅಷ್ಟ ರಲ್ಲೆ ತೃಪ್ತಿಯನ್ನು ಕಾಣಬಯಸುವುದು ನಮ್ಮ ಸಂಸ್ಕೃತಿಯೇ? ಮದುವೆ ಯಾಗಿ ಮೂರನೆ ದಿನ ಗಂಡ ಸತ್ತರೆ ಆಕೆ ವಿಧವೆ. ಜೀವನದ ಸೌಖ್ಯ ಆಕೆಗೆ ಕೇವಲ ಕನಸಿನ ಮಾತು....ಗಂಡಸಿಗೆ ಈ ಅಡ್ಡಿಯಿಲ್ಲ. ಅವನು ಏನನ್ನೂ ಮಾಡಲು ಸ್ವತಂತ್ರನಿದ್ದಾನೆ. ಹೆಂಗಸು ಒಮ್ಮೆ ತಪ್ಪುದಾರಿ ಹಿಡಿದರೆ ಸಾಕು ಆಜೀವ ಪರ್ಯಂತ ಅದರ ಫಲವನ್ನೂ ಉಣ್ಣಬೇಕು. ಕ್ಷಮೆ ಎಂಬುದು ಅವಳ ಪಾಲಿಗೆ ಇಲ್ಲವೇ ಇಲ್ಲ. ನಾಯಿ ಮುಟ್ಟಿದ ಮಡಕೆ ಆಕೆ. ಕೆರೆಯೊ ಕುಂಟೆಯೊ ಯಾವೂ ಆಕೆಗೆ ನೆರವು ಕೊಡಬೇಕು. ನಮ್ಮ ಸದೃಢ ಸಂಸ್ಕೃ ತಿಯ ಆಧಾರದ ಮೇಲೆ ಬೆಳೆದಿರುವ ಸಮಾಜ ನೆರವು ಕೊಡುವಂತಿಲ್ಲ. ನೀನು ಹೆಂಗಸಾಗಿ ಓದಿದವಳಾಗಿ ಈ ಸಂಸ್ಕೃತಿಯನ್ನು ಕಂಡು ನನಗೆ ಆಶ್ಚರ್ಯವಾಗುತ್ತೆ. ನಿನಗೆ ವ್ಯವಹಾರ ಜ್ಞಾನ ಸಾಲದು ಮುಖ್ಯವಾಗಿ. ಪಾಶ್ಚಿಮಾತ್ಯ ಸಂಸ್ಕೃತಿ ನಮ್ಮ ಸ್ತ್ರೀಯರ ಕಣ್ಣನ್ನು ಸ್ವಲ್ಪ ತೆರೆಸಿದೆ ಹೆಚ್ಚು ಮಂದಿ ಪ್ರಗತಿಪರರಾಗಿದ್ದಾರೆ. ಆದರೆ ನೀನು ಮಾತ್ರ ಇನ್ನೂ ಮಡಿಯ ಶತಮಾನದಲ್ಲೆ ಇದ್ದೀಯಾ ..."

"ಈ ಪ್ರಗತಿಯ ಪಥದಲ್ಲಿ ನೀವು ನಾಗಿರೆಂದು ನಮಗೆ ಹೇಳುವುದರಲ್ಲಿ ಖಂಡಿತವಾಗಿಯೂ ನಿಸ್ವಾರ್ಥಿಗಳೇ? ಪಾಪಪುಣ್ಯದ ಭೀತಿ ತೊರೆದು ನಿಮ್ಮ ಸುಖವನ್ನು ಮುಖ್ಯ ಗುರಿಯಾಗಿಟ್ಟುಕೊಂಡು ಪ್ರಗತಿಯ ಪಥದಲ್ಲಿ ನಾಗಿರೆಂದು ನಮ್ಮನ್ನು ಪ್ರೋತ್ಸಾಹಿಸುವುದರಲ್ಲಿ ನಿಮ್ಮ ಪೂರ್ಣ ಸ್ವಾರ್ಥ ಅಡಗಿಲ್ಲವೆ ನಿನ್ನ ಮಾತಿನಲ್ಲೆ ಆಗಲೇ ಅದರ ಸಾತ ಹೊಡೆಯುತ್ತಿದೆ. ಇದು ಗಂಡಸರ ಪ್ರವಂಚನೆ. ಇದನ್ನು ನಿಮ್ಮ ಜನ ಅರ್ಥ ಮಾಡಿಕೊಂಡಿಲ್ಲ. ಕೆಲವು ಜನ ಅರ್ಥಮಾಡಿಕೊಂಡರೂ ಬಾಹ್ಯ ಸುಖದ ಈ ಜಂಬೆಳಕೆ ಅವರನ್ನು ಕುರುಡರನ್ನಾಗಿ ಮಾಡಿದೆ. ಇದರಿಂದಾಗಿಯೇ ನಮ್ಮ ಸಮಾಜ ಇಂದು ಡೋಲಾಯಮಾನದಾಗಿರುವುದು. ನಾವು ಹೆಂಗಸರು ನಮ್ಮ ಕರ್ತವ್ಯವನ್ನು ನೆನೆದು ಹಿಂದಿನ ಆದರ್ಶ ಮಹಿಳೆಯರನ್ನು ಅನುಸರಿಸಿದಾಗಲೇ ನಮ್ಮ ಪ್ರಗತಿ. ನಮ್ಮ ದೇಶದ ಹಿರಿಮೆ ಹೆಚ್ಚಲು ಸಾಧ್ಯ. ನಿನ್ನಂತಹ ಸಮಾಜ ಸುಧಾರಕರು ಹೆಚ್ಚಿದರೆ ದೇಶ ಅಧೋಗತಿಗೆ ಇಳಿಯುತ್ತೆ ಶೀನಿ. ಎಚ್ಚರದಿಂದರು."

ಶೀನಿಯ ಬಾಯಿ ಕಟ್ಟಿತ್ತು.

"ರಾಮಾಯಣ, ಮಹಾಭಾರತದ ಉದಾಹರಣೆ....ಅದೂ ಬೇಡ ನಮ್ಮ ತಾಯಿ ತಂದೆಯ ವರ ಉದಾಹರಣೆ, ನಿಮ್ಮ ತಾಯಿಯ ಉದಾಹರಣೆ ಸಾಲದೇ ಶೀನಿ. ನಮ್ಮ ಸುದೃಢ ಸಂಸ್ಕೃತಿಯ ಪ್ರತೀಕವಾಗಿದ್ದಾರೆ. ದೇಹ ಸಾವಿರಕಷ್ಟ ಸಹಿಸಬಲ್ಲದು ಆದರೆ ಮನಸ್ಸು ಪ್ರಫುಲ್ಲವಾಗಿರುತ್ತದೆ. ಹಿಂದಿನ ಗಂಡ ಹೆಂಡಿರ ಜೀವನದಲ್ಲಿ ಐಕ್ಯತೆಯಿತ್ತು. ಇದರಿಂದಾಗಿ ಪೂರ್ಣ ಸೌಖ್ಯವಿತ್ತು ಅವರ ಜೀವನದಲ್ಲಿ. ಈ ಐಕ್ಯತೆಯ ಮನೋಭಾವವೇ ನಮ್ಮ ಜನಜೀವನದ ಜೀವಾಳ. ಕೇವಲ ಸುಖಲಾಲಸೆ ಪಾಶ್ಚಿಮಾತ್ಯ ಸಮಾಜದ ಗುರಿ. ರೀತಿ, ನೀತಿ, ಧರ್ಮ, ಕರ್ಮ ಕಾಣದ ಅಸ್ತಿತ್ವರಹಿತ ಸಮಾಜ ಅವರದು. ಇಬ್ಬರ ವಿರುದ್ಧ ಮನೋಭಾವಗಳಲ್ಲಿ ಒಂದು ಮಧ್ಯಸ್ಥ ಮಧುರ ವಾತಾವರಣವನ್ನು ಸೃಷ್ಟಿಮಾಡಿ ಅದರಲ್ಲಿ ತೃಪ್ತಿಯನ್ನು ಕಾಣುವುದು ನಮ್ಮ ವೈವಾಹಿಕ ಜೀವನದ ಗುರಿ. ಅದಕ್ಕೆ ನಮ್ಮ ಸಮಾಜ ನಿಮ್ಮಂತ ಸಾವಿರಾರು ಸುಧಾರಕರು ತಲೆ ಕೆಡಿಸಿಕೊಂಡು ಕಿರುಚುತ್ತಿದ್ದರೂ ಇನ್ನು ಆ ಮಟ್ಟಕ್ಕೆ ಇಳಿದಿಲ್ಲ. ಹೆಚ್ಚಿಗೆ ಭಾರತದ ಮಹಿಳೆ ಇಳಿಯುವುದೂ ಇಲ್ಲ. ಎಲ್ಲೋ ಕೆಲವರು ಮಾರು ಹೋಗಬಹುದು ಅಷ್ಟೆ.... ಏನು ಶೀನಿ ನಾನು ಹೇಳ್ತಾ ಇರೋದು ಸರಿತಾನೆ...." ಪ್ರಶ್ನಿಸಿ ಆತನನ್ನು ನೋಡಿದಳು. ಅವನು ಸುಮ್ಮನೆ ತರಗೆಲೆಗಳನ್ನು ಕಡ್ಡಿಯಿಂದ ತೂತು ಕೆಡವುತ್ತ ಕುಳಿತಿದ್ದ.

"ಅವರ ಸಮಾಜ ದೂರಕ್ಕೆ ಚೆನ್ನಾಗಿ ಕಂಡರೂ ಅಸ್ತಿತ್ವರಹಿತವಾಗು

ತ್ತಿರುವುದು. ನೂರಾರು ವಿವಾಹ ವಿಚ್ಛೇದನಗಳು, ಮಕ್ಕಳುಗಳ ಬೇರ್ಪಡೆ, ಆಸ್ತಿಗಳ ವಿಚಿತ್ರ ಪಾಲುಗಾರಿಕೆ ನಾವು ಕಾಣುತ್ತಿರುವುದು. ಅದಕ್ಕೆ ಮುಖ್ಯ ವಾಗಿ ಧರ್ಮ, ನೀತಿಯ ಹಿನ್ನೆಲೆಯಲ್ಲಿ....ನಮ್ಮ ಸಂಸ್ಕೃತಿಯನ್ನು ನಂಬಿ ನಡೆ ದಾಗಲೇ ನಮಗೆ ಕಲ್ಯಾಣ ..." ಹೇಳಿ ಸುಮ್ಮನಾದಳು.

ಪಾರ್ಕಿನಲ್ಲಿ ಆಗಲೇ ಬಹಳ ಜನ ಕಡಿಮೆ ಆಗುತ್ತಿದ್ದರು. ದೂರದಲ್ಲಿ ಸರ್ಕಲ್ಲಿನಲ್ಲಿ ಫೌಂಟನ್ನಿನಲ್ಲಿ ನೀರು ಮೇಲೆ ಹಾರಿ ಕೆಳಗೆ ಬೀಳುತ್ತಿತ್ತು. ಶಕುಂತಲ ಮಾತು ಸಾಕೆನ್ನುವಂತೆ ಮೇಲೆ ಎದ್ದಿದ್ದಳು. ನರಸವಾಗಿ ಪ್ರಾರಂಭವಾದ ಮಾತು ಬಹಳ ಗಂಭೀರವಾಗಹತ್ತಿದ್ದರಿಂದ ಇವನಿಗೂ ಮಾತನ್ನು ಮುಗಿಸಿದರೆ ಸಾಕೆನಿಸಿತ್ತು.

" ಎಂದೂ ನಮ್ಮಿಬ್ಬರ ಮಾತಿನಲ್ಲಿ ದ್ವಂದ್ವವಿದ್ದೇ ಇರುತ್ತೆ...." ಶೀನಿ ನಗುತ್ತ ಮೇಲಕ್ಕೆ ಎದ್ದ.

" ಇಬ್ಬರ ಮನೋಭಾವಗಳೂ ಸಂಪೂರ್ಣವಾಗಿ ಬೇರೆ ಬೇರೆ...." ಶಕುಂತಲ ಮುಂದೆ ನಡೆದಳು.

" ಮನೋಭಾವ ಬೇರೆಯಾದರೂ ಮಧುರ ವಾತಾವರಣ ಏರ್ಪಡ ಬಹುದು ..." ನುಡಿದು ಶಕುಂತಲಳನ್ನು ನೋಡಿ ನಕ್ಕ.

ಅವಳೂ ನಕ್ಕಳು.

ಫೌಂಟನ್ನಿನ ಮುಂದೆ ಸ್ವಲ್ಪ ಹೊತ್ತು ನಿಂತು ಅದರ ಸೌಂದರ್ಯವನ್ನು ಸವಿದರು. ಶೀನಿ ಪುನಃ ಎರಡು ಖಾರದ ಪುರಿಯ ಪೊಟ್ಟಣವನ್ನು ತೆಗೆದು ಕೊಂಡ. ಒಂದನ್ನು ಶಕುಂತಲಳಿಗೆ ಕೊಟ್ಟ. ಅದನ್ನು ತಿನ್ನುತ್ತ ಸುತ್ತಲಿನ ಪ್ರಕೃತಿಸೌಂದರ್ಯವನ್ನು ಅಲ್ಲಿ ಅಲ್ಲಿ ನಿಂತು ಸವಿಯುತ್ತ ಮನೆಯನ್ನು ಸೇರ ಬೇಕಾದರೆ ಒಂಭತ್ತು ಗಂಟೆ ಆಗಿಹೋಗಿತ್ತು. ದಾರಿಯಲ್ಲಿ ಯಾರೂ ಹೆಚ್ಚಿಗೆ ಮಾತನಾಡಿರಲಿಲ್ಲ.

ಶಕುಂತಲ ಊಟ ಮಾಡಿ ಮಲಗಿದಳು. ಶೀನಿ ಊಟವಾದ ನಂತರ ರೂಮಿನಲ್ಲಿ ಓದುತ್ತ ಕುಳಿತುಕೊಂಡ. ರಾತ್ರಿ ಬಹು ಹೊತ್ತಿನ ಮೇಲೆ ವೆಂಕಟರಾಯರು ಮನೆಗೆ ಬಂದರು. ಹೊರಗೆ ಹೋಟಲಿನಲ್ಲೆ ರಂಗಪ್ಪ ಗೌಡರ ಜೊತೆಯಲ್ಲಿ ಊಟಮಾಡಿ ಬಂದಿದ್ದುದರಿಂದ ಬಹಳ ಬಲವಂತ ಪಡಿಸಿದರೂ ಊಟಮಾಡದೆ ಶೀನಿಯ ರೂಮಿನಲ್ಲಿ ತಮಗಾಗಿ ಏರ್ಪಡಿಸಿದ್ದ ಹಾಸಿಗೆಯ ಮೇಲೆ ಮಲಗಿಬಿಟ್ಟರು.

ಸೋಮವಾರ ಊರಿಗೆ ಹೊರಡುತ್ತೇವೆಂದು ಎಷ್ಟು ಹೇಳಿದರೂ ಶಾರ ದಮ್ಮ, ಶೀನಿ ಅವರನ್ನು ಹೋಗಗೊಡಲಿಲ್ಲ. ಶಕುಂತಲ ಬೇಡ ಬೇಡ

ವೆಂದರೂ ಕೇಳದೆ ಎಣ್ಣೆ ಒತ್ತಿ ನೀರನ್ನು ಹಾಕಿದರು. ಔತಣವನ್ನು ಮಾಡಿದರು. ವೆಂಕಟರಾಯರು ಹೆಚ್ಚಿಗೆ ಹೇಳಿಸಿಕೊಳ್ಳಲು ಬಯಸಲಿಲ್ಲ. ಅವರ ಸ್ನೇಹಿತ ರಂಗಣ್ಣಗೌಡ ಸಿಕ್ಕಿದ್ದುದರಿಂದ ಅವರೊಡನೆ ಮಾತನಾಡುವುದು ಇವರಿಗೂ ಬಹಳ ಇತ್ತು. ಆದ್ದರಿಂದ ಔತಣದ ಊಟವನ್ನು ತೀರಿಸಿಕೊಂಡವರೆ ಎಂ. ಎಲ್. ಎ, ಯನ್ನು ಕಾಣಲು ಅವನ ಬಿಡಾರಕ್ಕೆ ಹೊರಟು ಹೋದರು. "ಎಲ್ಲೆಲ್ಲಿ ಹೋಗಬೇಕೊ....ಏನೇನು ನೋಡಬೇಕೊ ಎಲ್ಲಾ ಇವತ್ತೇ ತೀರಿಸಿಬಿಡು. ಬೆಳಗ್ಗೆ ಹೊರಟುಬಿಡೋಣ....ನಾನೂ ಸಾಯಂಕಾಲ ಆದ್ರೆ ಜೊತೇಲಿ ಬರ್ತೇನಿ. ಇಲ್ದೆಹೋದ್ರೆ ಶೀನಿ ಕಾಲೇಜು ಮುಗಿಸಿ ಬಂದ ಮೇಲೆ ಬೇಕಾದ್ರೆ ಲಾಲ್‌ಬಾಗಿಗೆ ಹೋಗಿಬನ್ನಿ. ನಿನ್ನೆ ಹೋಗ್ಲಿಲ್ಲ ಅಂದ್ರಲ್ಲ" ಹೇಳುತ್ತಲೆ ಅವಸರವಸರವಾಗಿ ಹೊರಟು ಹೋಗಿದ್ದರು.

ಶೀನಿಗೆ ಅಂದು ಪೂರ್ತಿಯಾಗಿ ಕಾಲೇಜು ಇದ್ದರೂ ಹೋದ ಶಾಸ್ತ್ರ ಮಾಡಿ ಎರಡು ಗಂಟೆ ಹೊತ್ತಿಗೆಲ್ಲಾ ಹಿಂತಿರುಗಿದ. "ನಿಮ್ಮ ಸ್ಕೂಲನ್ಹಾಗೆ ಅಲ್ಲಿ ಶಕುಂತಲ ನಮ್ಮ ಕಾಲೇಜು...ಯಾವಾಗ್ಲೊ ಒಂದೆರಡು ಪಿರಿಯಡ್ ಇರುತ್ತೆ. ಒಂದೊಂದು ದಿನ ಬರಿ ಪ್ರಾಕ್ಟಿಕಲ್ ಕ್ಲಾಸು ಮಾತ್ರ ಇರುತ್ತೆ...." ಶೀನಿ ಅವಳು ಏನಾದರೂ ಪ್ರಶ್ನಿಸಬಹುದೆಂದು ಎಚ್ಚರಿಕೆ ವಹಿಸಿದ.

"ಏನು ಕಾಲೇಜೊ ಏನೊ....!" ಬೇಜಾರಿನಿಂದ ನುಡಿದಳು ಶಕುಂತಲ

"ಸೆಂಟ್ರಲ್ ಕಾಲೇಜು...." ಹೇಳಿ ನಕ್ಕ. ಅವಳೂ ನಕ್ಕಳು. ಆದರೆ ಅವಳು ನಕ್ಕದ್ದು ಬೇರೆ ಕಾರಣಕ್ಕಾಗಿ.

ನಡದೇ ಲಾಲ್‌ಬಾಗಿಗೆ ಹೋಗಿಬರಬೇಕೆಂದು ತೀರ್ಮಾನಿಸಿದ್ದುದರಿಂದ ನಾಲ್ಕೂವರೆ ಗಂಟೆಗೆಲ್ಲಾ ಮನೆಯನ್ನು ಬಿಟ್ಟು ಹೊರಟರು. ತಮ್ಮ ಮನೆಯನ್ನು ದೊಡ್ಡ ಗೇಟಿನ ಬಳಿಗೆ ಬರುವಲ್ಲಿ ವೆಂಕಟರಾಯರು ಬಂದರು. "ನೀವು ಹೊರ್‍ಟುಹೋಗ್ತೀರಾ ಲಾಲ್‌ಬಾಗಿಗೆ ಅಂತಿದ್ದೆ. ನಾನೂ ಸರಿಯಾದ ಹೊತ್ತಿಗೇ ಬಂದ ಹಾಗಾಯ್ತು. ಹೂಂ. ನಡೀರಿ ಹೋಗೋಣಾ...." ಮನೆಯ ಒಳಗೆ ಹೋಗದೆ ಹಾಗೆಯೇ ಪುನಃ ಹೊರಟರು. "ಒಳಗೆ ಹೋಗಿ ಬನ್ನಿ ವೆಂಕಟರಾಯ್ರೆ....ಕಾಫಿ ಆಗಿದೆ. ಕುಡ್ದು ಬನ್ನಿ.... ಹೋದ್ರಾಯ್ತು ಬನ್ನಿ....ಒಳಗೆ ಹೋಗೋಣ." ರಾಯರನ್ನು ಒಳಗೆ ಕರೆದುಕೊಂಡು ಹೋದ. ನಗುತ್ತಿದ್ದ ಕಣ್ಣು ಆಗಲೇ ಸ್ವಲ್ಪ ಸಪ್ಪಗಾಗಿತ್ತು. ಶಕುಂತಲ ಗೇಟಿನ ಬಳಿಯಲ್ಲಿ ಸುಮ್ಮನೆ ಹೊರಗೆ ನೋಡುತ್ತ ನಿಂತುಕೊಂಡಳು. ಸ್ವಲ್ಪ ಹೊತ್ತಿನಲ್ಲೇ ರಾಯರು ಕಾಫಿಯನ್ನು ಕುಡಿದು ಹೊರಗೆ ಬಂದರು.

"ಬಸ್ಸಿನಲ್ಲಿ ಹೋಗೋಣಾ....ಈ ಉರಿಬಿಸಲಿನಲ್ಲಿ ನಡೆದು ಯಾಕೆ." ರಾಯರು ಹೇಳಿದುದರಿಂದ ಶಕುಂತಲಳ ಆಸೆಯೆಲ್ಲಾ ಮಣ್ಣುಗೂಡಿತು. ನಡದೇ ಹೋದರೆ ಬೆಂಗಳೂರಿನ ಬಹುಭಾಗವನ್ನು ನೋಡಬಹುದೆಂದು ಬಹು ಉತ್ಸಾಹದಿಂದಿದ್ದಳು. ಶೀನಿ ಅವಳತ್ತ ತಿರುಗಿ ನೋಡಿದ. ಮನದ ಇಂಗಿತ ಮುಖದಲ್ಲಿ ಮುದ್ರಿತವಾಗಿತ್ತು.

"ಬರೋ ಹೊತ್ತಿಗೆ ತಂಪಾಗಿರುತ್ತೆ....ಬೇಕಾದ್ರೆ ನಡದೇ ಬರೋಣಾ...." ಶೀನಿ ನುಡಿದ. "ಹೂಂ..! ಅದೇ ಸರಿ.. ಬರ್‍ತಾ ನಡದೇ ಬರೋಣಾ ..." ನಿರ್ಧರಿಸಿ ನುಡಿದಳು. "ಬರೋ ಮಾತು ಬರೋವಾಗ– ಈಗ ಹೊತ್ತಾಯ್ತು ನಡೀರಿ ..." ರಾಯರು ಮುಂದಾದರು.

ಬಸ್ಸು ಹತ್ತಿ ಮಾರ್‍ಕೆಟ್ಟಿನ ಬಳಿಗೆ ಬಂದರು. ಮಾರ್‍ಕೆಟ್ಟಿನಲ್ಲಿ ಹೂವನ್ನು ಕೊಂಡುಕೊಳ್ಳಬೇಕೆಂದಿದ್ದಳು ಶಕುಂತಲ. ಆದರೆ ಅಷ್ಟರಲ್ಲೇ ಹುಚ್ಚರ ಆಸ್ಪತ್ರೆಗೆ ಹೋಗುವ ಬಸ್ಸು ಬಂದುದರಿಂದ ಅದನ್ನು ಹತ್ತ ಬೇಕಾಯಿತು.

ಮೂವರೂ ಲಾಲ್‌ಬಾಗನ್ನು ಸಂಪೂರ್ಣವಾಗಿ ಸುತ್ತಿದರು. ವಿವಿಧ ಫಲಪುಷ್ಪಗಳ ಸೊಬಗಿನಿಂದ ಶಕುಂತಲ ಬಹುವಾಗಿ ಸಂತೋಷಗೊಂಡಳು. ಅವಳಿಗೆ ಆ ಹಸುರ ಹುಲ್ಲ ಮೇಲೆ ಎಷ್ಟು ಕಡೆಯಲ್ಲಿ ಕುಳಿತರೂ ಸಾಲದು. ಗಾಜಿನ ಮನೆಯ ಮುಂದೆ ಕುಳಿತರು. ಅಲ್ಲಿನ ಮುಂದಿನ ಮಂಟಪದಲ್ಲಿ ಕುಳಿತರು. ಹೋಟಲಿನ ಮುಂಭಾಗದ ಹುಲ್ಲಿನ ಮೇಲೆ ಬಹಳ ಹೊತ್ತು ಕುಳಿತರು. ಅಲ್ಲೆ ಇದ್ದ ಮೃಗಾಲಯವನ್ನು ನೋಡಿದರು. ಹುಲ್ಲಿನೊಡನೆ ಹುಲ್ಲೆಯಂತೆ ಕುಣಿದಾಡಿದಳು. ಪುಷ್ಪಗಳ ಬಳಿಸಾರಿ ಅವನ್ನು ನಯವಾಗಿ ಸ್ಪರ್ಶಿಸಿ ಆಘ್ರಾಣಿಸಿದಳು. ತೆರದ ಕಣ್ಣನ್ನು ಮುಚ್ಚದೆ ನುಂಗುವಂತೆ ನೋಡಿದ್ದನ್ನೇ ಪುನಃ ಪುನಃ ನೋಡಿದಳು. ವಿಚಿತ್ರ ಆಕಾರದ ಗಿಡಗಳು ಆ ನಸುಗತ್ತಲಿನಲ್ಲಿ ಅವಳಿಗೆ ಒಂದು ಸಮಸ್ಯೆಯಾಗಿ ಕಂಡವು. ಹತ್ತಿರ ಸಾಗಿ ಅದನ್ನು ಮುಟ್ಟಿ ನೋಡಿದ ಮೇಲೆ ಮನಸ್ಸಿನಲ್ಲಿನ ಭಾವ ತಿಳುನಗೆ ಯಾಗಿ ನುಸುಳಿಹೋಯಿತು.

"ಇದು ಭೂಲೋಕದ ನಂದನವನ ..." ಮನಸ್ಸಿನ ಸಂತೋಷ ಅತಿ ಯಾದಾಗ ನುಡಿದಳು.

"ಬನ್ನಿ ಸ್ವಲ್ಪ ಹೋಗಿ ಅಮೃತವನ್ನು ಕುಡ್ದು ಹೋಗೋಣಾ.... ನಂದನವನಕ್ಕೆ ಬಂದುದಕ್ಕೆ ಸಾರ್ಥಕವಾಗುತ್ತೆ." ಶೀನಿ ರಾಯರನ್ನು ಉದ್ದೇಶಿಸಿ ಶಕುಂತಲೆಯನ್ನು ನೋಡುತ್ತ ನುಡಿದ. "ಥೂ ನಾನಂತೂ ಹೋಟ್ಲಿಗೆ ಬರೋಲ್ಲ." ವಾಸ್ತವವಾಗಿ ಎಂದೂ ಅವಳು ಹೋಟಲಿಗೆ ಹೋಗಿಲ್ಲದೆ ಇದ್ದರೂ

ಹೋಗಬಾರದೆಂಬ ಹಟವೇನೂ ಇಲ್ಲ. ಸುತ್ತಾಡಿ ಸುಸ್ತಾಗಿದ್ದ ರಾಯರ ದೇಹವೂ ಸ್ವಲ್ಪ ವಿರಾಮ ಮತ್ತು ತಿಂಡಿಯನ್ನು ಬಯಸುತ್ತಿತ್ತು.

"ಹೋಟ್ಲಲ್ಲಿ ತುಂಬಾ ಗದ್ಲ—ಯಾಕೆ ಇಲ್ಲೆ ಕೂತ್ಕೊಳ್ಳೊಣಾ ಹುಲ್ಲು ಚೆನ್ನಾಗಿದೆ." ಶೀನಿ ಕುಳಿತ. ಉಳಿದವರಿಬ್ಬರೂ ಕುಳಿತರು.

ಉಪಹಾರವನ್ನು ಮುಗಿಸುವುದರಲ್ಲಿ ಇನ್ನರ್ಧ ಗಂಟೆ ಮುಗಿದು ಹೋಯಿತು. ಗಭೀರ ಕತ್ತಲಿನ ಹಿನ್ನೆಲೆಯಲ್ಲಿ ಬೆಳಗುತ್ತಿದ್ದ ಪ್ರಕಾಶ ಮಾನವಾದ ದೀಪಗಳು ಶಕುಂತಲಳಿಗೆ ನಕ್ಷತ್ರ ಲೋಕದ ನೆನಪನ್ನು ತರುತ್ತಿದ್ದವು.

"ಸುತ್ತಲೂ ಮನೋಹರ ಹಸರು..! ಮೇಲಾಗಿ ಕತ್ತಲಿನ ಮಧ್ಯದಲ್ಲಿ ನೆಲಬಿಟ್ಟು ಮಧ್ಯದಲ್ಲಿ ನಿಂತಿರುವ ದೀಪಗಳು....! ಈ ಕತ್ತಲೂ ಇದಕ್ಕೇ ಮೆರಗು ಗೊಟ್ಟಿದೆ." ಶಕುಂತಲ ಆನಂದದಿಂದ ನುಡಿದಳು.

"ಪರವಾಗಿಲ್ಲ. ಇಲ್ಲಿಗೆ ಬಂದಮೇಲೆ ಮಾತಿನಲ್ಲಿ ಕವಿಯತ್ರಿ ಆಗೊ ಹಾಗೂ ಕಾಣ್ತಾ ಇದೆ." ಶೀನಿ ನಗೆಯಾಡಿದ.

"ಹೂ! ನಡೀರಿ ಹೋಗೋಣಾ. ಹೊತ್ತಾಯ್ತು. ಮನೆಗೆ ಹೋಗಬೇಕಾದ್ರೆ ಇನ್ನೂ ಹೊತ್ತಾಗುತ್ತೆ." ರಾಯರು ನುಡಿದರು.

"ನಡಕೊಂಡೆ ಹೋಗೋಣಾ...." ಎಲ್ಲಿ ತಂದೆ ಬಸ್ಸಿನಲ್ಲಿ ಹೋಗೋಣವೆಂದು ಹೇಳುತ್ತಾರೊ ಎಂದು ಅನುಮಾನಿಸಿ ನುಡಿದಳು. "ಹ್ಞೊ! ಹಾಗೇ ಆಯ್ತು" ತಂದೆ ನುಡಿದಾಗ ಶಕುಂತಲಳಿಗೆ ಸ್ವಲ್ಪ ಸಮಾಧಾನವಾಯಿತು.

ಮಾರ್ಕೆಟ್ಟಿನ ಬಳಿಗೆ ನಡವೇ ಬಂದರು. ಅಲ್ಲಿಂದ ಬಸ್ಸಿನಲ್ಲಿ ಹೋಗೋಣವೆಂದು ರಾಯರು ಸೂಚಿಸಿದುದರಿಂದ ಮೂವರೂ ಬಸ್ಸನ್ನು ಹತ್ತಿದರು. ಶಕುಂತಲಳಿಗೆ ನಡವೇ ಹೋಗಬೇಕೆಂಬ ಆಸೆ ಇದ್ದರೂ ಎಂದೂ ಹೆಚ್ಚಿಗೆ ನಡೆಯದಿದ್ದರಿಂದ ಕಾಲುಗಳು ನೋಯುತ್ತಿದ್ದವು. ಆದ್ದರಿಂದ ಅವಳೂ ಹೆಚ್ಚಿಗೆ ವಿರೋಧಿಸದೆ ಅನುಮೋದಿಸಿದಳು.

ಮನೆಗೆ ಬಂದು ಮೂವರೂ ಊಟವನ್ನು ತೀರಿಸಿದರು. ಶಾರದಮ್ಮ ಹೊಸದಾಗಿ ಅಡಿಗೆಯನ್ನು ಮಾಡಿದ್ದರು.

ರಾಯರು ಊಟವಾದ ಮೇಲೆ ಅಡಕೆಲೆಯ ತಟ್ಟೆಯ ಮುಂದೆ ಕುಳಿತರು. ತಟ್ಟೆಯಲ್ಲಿದ್ದ ಎಲೆ ಅರ್ಧ ಖರ್ಚಾಗುವವರೆಗೂ ಏನೇನೊ ಮಾತನಾಡುತ್ತ ಅಗಿಯುವುದರಲ್ಲೇ ತನ್ಮಯರಾಗಿದ್ದರು. ಇದ್ದಕ್ಕಿದ್ದಂತೆಯೇ ಶೀನಿಯ ಕಡೆಗೆ ತಿರುಗಿದರು. "ಶೀನಿ, ಟೈಂ ಎಷ್ಟು ಈಗ...." ಅವಾಂತರ

ವಾಗಿ ಪ್ರಶ್ನಿಸಿದರು. ಶೀನಿ ಗಡಿಯಾರ ನೋಡಿ ಒಂಭತ್ತೂವರೆ ಗಂಟೆ ಎಂದು ತಿಳಿಸಿದ.

"ಶೀನಿ ನಾವು ಹೊರಡ್ತೀವಪ್ಪ ...ಶಾರದಮ್ಮ ಬರ್ತೀವಿ ನಾವು. ನಮ್ಮಿಂದ ನಿಮಗೆ ತೊಂದ್ರೆ ಆಯ್ತು ...ಯಾವಾಗ್ಲಾದ್ರೂ ರಜದಲ್ಲಿ ಬನ್ನಿ. ನಮ್ಮ ತಾಯಿ, ಅವಳೂ ನಿಮ್ಮನ್ನ ನೋಡ್ಬೇಕು ಅಂತಿದ್ದರು."

ತಾಯಿ, ಶೀನಿ ಈ ಅವೇಳೆಯಲ್ಲಿ ಯಾಕೆ, ನಾಳೆಯೊ ನಾಡಿದ್ದೊ ಹೋದರೆ ಆಯಿತೆಂದು ಬಹಳ ಹೇಳಿದರು. ರಾಯರು ಒಪ್ಪಲಿಲ್ಲ. "ನಾಳೆ ಮಂಗಳವಾರ ನೀವೂ ಕಳ್ಸಲ್ಲ.. ನಾವೂ ಹೊರಡಲು ಒಪ್ಪಲ್ಲ. ಹೆಣ್ಣು ಹುಡ್ಗಿ ಇದ್ದಾಳೆ. ಅದಲ್ದೆ ನಂಗೆ ರಜಾನೂಇಲ್ಲ..." ಹೇಳಿ ಹಾಸಿಗೆಯನ್ನು ಸುತ್ತಿ ಹಗ್ಗವನ್ನು ಬಿಗಿದೇ ಬಿಟ್ಟರು. ಶಕುಂತಲೆಯೂ ಮೌನವಾಗಿ ಟ್ರಂಕನ್ನು ಸಿದ್ಧಪಡಿಸಿದಳು.

"ಹೋಗಪ್ಪ ಶೀನಿ ಒಂದು ಜಟಕಾ ತೆಗೊಂಡು ಬಾ...." ರಾಯರು ನುಡಿದರು.

ಶೀನಿ ಮನಸ್ಸಿಲ್ಲದೆ ಹೋಗಿ ಒಂದು ಜಟಕಾವನ್ನು ಹೊಡೆಸಿಕೊಂಡು ಬಂದ.

"ಹೋಗಿ ಬರ್ತೀವಿ ಶಾರದಮ್ಮ ಜ್ಞಾಪ್ಕಇರ್ಲಿ. ಬನ್ನಿ ಯಾವಾಗ್ಲಾದ್ರೂ." ಹೇಳುತ್ತ ಹಾಸಿಗೆಯನ್ನು ಕೈಯಲ್ಲಿ ಹಿಡಿದು ಹೊರಗೆ ಹೊರಟೇ ಬಿಟ್ಟರು ರಾಯರು. ಶಕುಂತಲ ಟ್ರಂಕಿಗೆ ಕೈ ಹಾಕಿದಳು. "ನಾನು ತಗೊಂತೀನಿ ಬಿಡು" ಶೀನಿ ಅವಳ ಕೈಯಿಂದ ಟ್ರಂಕನ್ನು ತೆಗೆದುಕೊಂಡು ಜಟಕಾದಲ್ಲಿ ಇಟ್ಟ.

"ಹೋಗಿ ಬರ್ತೀವಿ ಶಾರದಮ್ಮ. ಕಂಡಿತ ಈಸಾರಿ ಜೋಸಿಗೆ ರಜಾಕ್ಕೆ ಬಂದು ಹದಿನೈದು ದಿನ ಇದ್ದು ಹೋಗಬೇಕು....ನಮ್ಮ ಅಜ್ಜಿ, ಅಮ್ಮ ಇಬ್ಬರೂ ಹೇಳಿದ್ರು....ಕಂಡಿತಾ ಬರ್ತೀರಿತಾನೆ?" ಶೀನಿಯ ಕಡೆಗೆ ತಿರುಗಿ "ಏನು ಶೀನಿ ಕರ್ಕೊಂಡು ಬರ್ತಿತಾನೆ?" ಪ್ರಶ್ನಿಸಿದಳು. ಶಾರದಮ್ಮ ಕುಂಕುಮ ತಂದು ಕೊಟ್ಟರು. "ಹೋಗಿಬಾಮ್ಮ. ನಾವು ಎಷ್ಟ ಹೇಳಿದ್ರೂ ನೀವು ನಿಲ್ಲಲಿಲ್ಲ. ಹೋಗಿಬನ್ನಿ. ಕಂಡಿತಾ ರಜಾದಲ್ಲಿ ಬರ್ತೀವಿ ಅಂತ ಹೇಳಮ್ಮ. ನಂಗೂ ಅವರ್ನೆಲ್ಲಾ ನೋಡ್ಬೇಕು ಅನ್ನಿಸಿದೆ. ನಮ್ಮ ನಾರಾಯಣನೂ ಊರಿಗೆ ಬಾ ಅಂತ ಕಾಗ್ದ ಬರೆದಿದ್ದ....ನಿಸ್ಗೆ ಹೊತ್ತಾಗುತ್ತೆ' ಜ್ಞಾಪ್ಕ ಇಟ್ಕೊಂಡು ಇಲ್ಲಿಗೆ ಬಂದಾಗ ಬಂದುಹೋಗಿ...." ಶಾರದಮ್ಮ ನುಡಿದರು. ಸೆರಗಿನಿಂದ ಕಣ್ಣನ್ನು ಒರೆಸಿಕೊಂಡರು.

ಹೊರಗಡೆ ರಾಯರು ಹೊತ್ತಾಯಿತೆಂದು ಕೂಗಿಕೊಂಡರು.

"ಬರ್ತೀನಿ ...ಶೀನಿ...." ಶಕುಂತಲ ಅವನ ಕಡೆಗೆ ತಿರುಗಿ ನುಡಿದಳು. ಬೇಸಗೆ ರಜಾಕ್ಕೆ ಖಂಡಿತ ಬಾ...." ಇನ್ನೊಮ್ಮೆ ತಿರುಗಿ ನುಡಿದಳು.

"ಹೋಗಿ ಬರ್ತೀನಿ ..." ಶಾರದಮ್ಮನಿಗೆ ಪುನಃ ಹೇಳಿದಳು.

ಮೂವರೂ ಸ್ಟೇಷನ್ನಿಗೆ ಬರುವ ಹೊತ್ತಿಗಾಗಲೇ ಭರ್ತಿಯಾಗಿ ಟ್ರೈನು ನಿಂತಿತ್ತು. ಶೀನಿ ಒಳಗೆ ನುಗ್ಗಿ ಮಲಗಿದ್ದ ಇಬ್ಬರನ್ನು ಎಬ್ಬಿಸಿ ಇಬ್ಬರಿಗೆ ಕೂಡಲು ಜಾಗ ಮಾಡಿಕೊಟ್ಟು ಕೆಳಗೆ ಇಳಿದು ಕಿಟಕಿಯ ಬಳಿಗೆ ಬಂದು ನಿಂತುಕೊಂಡ.

"ನಮಗೋಸ್ಕರ ನೀನು ಬಹಳ ಕಷ್ಟ ತಗೊಂಡಿಯಪ್ಪ ಶೀನಿ.... ಪಾಪ ನೀನೊಬ್ಬನೆ ಈಗ ಅಷ್ಟು ದೂರ ಹೋಗ್ಬೇಕು." ರಾಯರು ಅಭಿಮಾನ ದಿಂದ ನುಡಿದರು.

"ಇದೆಲ್ಲಾ ಏನು ಬಿಡಿ. ಅಪರೂಪಕ್ಕೆ ಬಂದೊರ್ನ ನಮ್ಕೈಲಾದ ಮಟ್ಟಿಗಾದ್ರೂ ನೋಡಿಕೊಳ್ಳಬೇಡ್ವೆ. ಏನೊ ಬಡವರ ಮನೆಗೆ ಅಷ್ಟು ಅಭಿ ಮಾನ ಇಟ್ಟು ಬಂದ್ರಲ್ಲ ..." ಶೀನಿ ನಕ್ಕು ನುಡಿದ.

"ಯಾರು ಬಡವರು ...? ಯಾರು ಸಾಹುಕಾರರು ಶೀನಿ....? ಈ ಪ್ರಪಂಚದಲ್ಲಿ. ಎಲ್ಲಾ ಒಂದೆ. ಇವತ್ತು ಸಾಹುಕಾರ ಆಗಿರೋನು ನಾಳೆ ದಿನ ಬಡವ ಆಗಬಹುದು. ಇವತ್ತು ಬಡವ ಆಗಿರೋನು ಬೆಳಕು ಹರಿಯೋ ದ್ರಲ್ಲಿ ಲಕ್ಷಾಧಿಪತಿಯಾಗ ಬಹುದು. ನೀನು ಓದಿನಲ್ಲಿ ಸಾಹುಕಾರನಿದ್ದಿ.... ಮನುಷ್ಯನ ಬೆಲೆ ಹಣದಲ್ಲಿಲ್ಲ. ಇರೋದು ವಿದ್ಯೆಯಲ್ಲಿ. ನಡತೆಯಲ್ಲಿ." ಅಂದರು ರಾಯರು.

ರೈಲುಗಾಡಿ ಕೂಗಿತು.

"ಹೋಗ್ಬರ್ತಿಯಾ ಶಕುಂತಲ ...ಜ್ಞಾಪ್ಕ ಇರ್ಲಿ...." ನಕ್ಕು ನುಡಿದ ಶೀನಿ ...ಶಕುಂತಲ ಉತ್ತರವಾಗಿ ಮುಗುಳ್ನಕ್ಕಳು.

ರೈಲುಗಾಡಿ ನಿಧಾನವಾಗಿ ಮುಂದೆ ಹೊರಟಿತು.

"ಬರ್ತೀನಿ ಶೀನಿ...." ಶಕುಂತಲ ಹೊರಗೆ ಕೈಚಾಚಿ ಕೂಗಿ ಹೇಳಿ ದಳು.

ಶೀನಿ ಕರವಸ್ತ್ರವನ್ನು ಉತ್ತರವಾಗಿ ಬೀಸಿದ.

ರಾಯರು ಕೊಂಡಿದ್ದ ವೃತ್ತ ಪತ್ರಿಕೆಯನ್ನು ಓದುತ್ತ ಕುಳಿತುಬಿಟ್ಟರು. ಶಕುಂತಲ ಬಹುಹೊತ್ತು ಕಿಟಕಿಯ ಹೊರಗೆ ತಲೆ ಇಟ್ಟುಕೊಂಡಿದ್ದು ಅನಂ ತರ ಒಳಗೆ ಸರಿಯಾಗಿ ಕುಳಿತಳು.

ರೈಲುಕಾಡಿ ವೇಗವಾಗಿ ಸರಿಯುತ್ತಿತ್ತು.

ಹುಟ್ಟಿ ಬೆಳೆದ ಊರು ತುಮಕೂರೇ ಆದರೂ ಎರಡು ದಿನ ಬೆಂಗಳೂರಿನಲ್ಲಿ ಇದ್ದು ಬಂದ ಶಕುಂತಲಳಿಗೆ ಇಂದು ಯಾವುದರಲ್ಲೂ ಆಸಕ್ತಿಯಿಲ್ಲ. ಬೆಂಗಳೂರಿನ ಸವಿನೆನಪೇ ಅವಳ ಮನಸ್ಸಿನಲ್ಲಿ ಸಂಪೂರ್ಣವಾಗಿ ನೆಲೆಸಿತ್ತು. ಇದರಿಂದ ಬಿಡಗಡೆ ಹೊಂದಿ ಮೊದಲಿನ ಸ್ಥಿತಿಗೆ ಬರಬೇಕಾದರೆ ಇನ್ನೂ ನಾಲ್ಕು ದಿನ ಹಿಡಿಯಿತು.

ವೆಂಕಟರಾಯರು ಊರಿಗೆ ಹಿಂತಿರುಗಿದಾಗ ಸುಬ್ಬಣ್ಣ ಊರಿಗೆ ಹೊರಟುಹೋಗಿದ್ದರೂ ಆತನ ಪ್ರಭಾವ ಮನೆಯಲ್ಲಿ ಚೆನ್ನಾಗಿ ನೆಲಸಿತ್ತು. ಬೆಂಗಳೂರಿಗೆ ಹೋಗುವಾಗ ಹಾಸಿಗೆ ಹಿಡಿದು ಮಲಗಿದ್ದ ಸಾವಿತ್ರಮ್ಮ ಚೇತರಿಸಿಕೊಂಡು ಎದ್ದಿರಲಿಲ್ಲ. ಮೈ ಕೈ ಕತ್ತರಿಸುವುದು ನಿಂತಿರಲಿಲ್ಲ. ರಾತ್ರಿ ಇವರು ಮನೆಗೆ ಬರುವಾಗ ಬಹಳ ಹೊತ್ತಾಗಿದ್ದುದರಿಂದ ಶಾರದಮ್ಮನವರ ಯೋಗಕ್ಷೇಮ ಕೇಳಿ ಸುಮ್ಮನಾಗಿದ್ದರು. ಬೆಳಗ್ಗೆ ಕಾಫಿಯನ್ನು ಕುಡಿದು ಹೊರಗೆ ನಡುಮನೆಗೆ ಬಂದೊಡನೆ ಮಗನನ್ನು ಹತ್ತಿರ ಕರೆದರು.

"ವೆಂಕಣ್ಣ...." ತಾಯಿಯ ಧ್ವನಿ ಗದ್ಗದಿತವಾಗಿತ್ತು. ವೆಂಕಟರಾಯರು ಹತ್ತಿರ ಕುಳಿತರು. "ಅಮ್ಮಾ ನಾನಂತೂ ಹೇಳಿ ಹೇಳಿ ಸಾಕಾಯ್ತು. ನೀನಂತೂ ಔಷಧಾ ತಗೊಳ್ಳೊದಿಲ್ಲ. ಖಾಯಿಲೆ ಹ್ಯಾಗೆ ವಾಸಿಯಾಗಬೇಕು ಹೇಳು...? ಇವತ್ತು ನೀನು ಏನೇ ಹೇಳು ಡಾಕ್ಟರನ್ನು ಕರಕೊಂಡೇ ಬರ್‍ತೀನಿ..." ತಾಯಿಯ ಹಣೆಯ ಮೇಲೆ ಕೈಯಿಟ್ಟರು. ಸ್ವಲ್ಪ ಜ್ವರವೂ ಬಂದಂತಿತ್ತು. "ಡಾಕ್ಟರನ್ನು ಕರಕೊಂಡು ಬಂದ್ರೆ ನನ್ನಾಣೆ. ಮಗು.... ಹುಟ್ಟಿದಾಗ್ನಿಂದ ನಾನು ಹಾಳು ಔಷಧಿ ಕುಡ್ದಿಲ್ಲ. ಈಗ ಸಾಯೋ ಕಾಲದಲ್ಲಿ ಆ ಇಂಗ್ಲೀಷು ನೀರು ಕುಡ್ದು ನರಕಕ್ಕೆ ಹೋಗು ಅಂತಿಯಾ.... ಇವೇನು ಮಾಡುತ್ತೆ. ನಾಲ್ಕು ದಿನ ಇದ್ದು ಹೊರ್‍ಟುಹೋಗುತ್ತೆ ಹೋಗ್ಲಿ ಮಗು....ನಂಗೆ ವಯಸ್ಸಾಯ್ತು. ಕಾಲವಾಯ್ತು. ಯಾವಾಗ ಕಣ್ಣು ಮುಚ್ತೀನೊ ಏನೊ ? .. " ಒಳಗಿನಿಂದ ಅಳು ಉಕ್ಕಿಬಂತು.

"ಸುಮ್ನಿರಮ್ಮ....ನಿಂಗೇನು ಕಡ್ಮೆ ಆಗಿದೆ ಹೇಳು. ಅಳಬೇಡ ಸುಮ್ನಿರು...." ರಾಯರು ನುಡಿಯುವಾಗ ಕಣ್ಣಿನ ಆಲಿಗಳು ವಿಚಿತ್ರವಾಗಿ ಚಲಿಸುತ್ತಿದ್ದವು.

"ನೋಡು ವೆಂಕಟರಾಯ....ಶಕುಂತಲ ಎಷ್ಟು ಎತ್ತರ ಬೆಳೆದು ಹ್ಯಾಗೆ ಗೌರಮ್ಮನಾಗಿ ನಿಂತಿದ್ದಾಳೆ. ಇವಳ್ಗೆ ಇನ್ನೂ ಮದ್ವೆ ಮಾಡೋ ವಯಸ್ಸಿಲ್ವೇನೊ....? ನಮ್ಮ ಕಾಲದಲ್ಲಿ ಇಷ್ಟು ಹೊತ್ತಿಗೆ ಮದ್ವೆ ಆಗಿ ಎಷ್ಟೊ

ವರ್ಷ ಆಗಿರ್‍ತಿತ್ತು! ಏನೊ ಹುಡ್ಗಿ ಈಗಿನ ಕಾಲದವಳು ಎಲ್ಲರ್‍ಹಾಗೆ ಓದಿ ಬೆಳೀಲಿ ಅಂತ ಸುಮ್ನಿದ್ದುದು ಆಯ್ತು. ಈಗ ಇನ್ನು ಮುಂದಕ್ಕೆ ತಳ್ಳೋಕೆ ಆಗೊಲ್ಲ....ಅವಳ ಮದ್ವೇನ ಕಣ್ಣು ತುಂಬಾ ನೋಡ್ಬೇಕು...ಸುಖವಾಗಿರೋ ದನ್ನ ನೋಡಿ ಕಣ್ಣು ಮುಚ್ಬೇಕು....ಅಂತ ನಂಗೆ ಆಸೆ....ಜೀವಮಾನ ಶಾಶ್ವತ ಅಲ್ಲ...." ಮಗನ ಕೈಯನ್ನು ಬಹು ನಮ್ರತೆಯಿಂದ ತಮ್ಮ ಕೈಯಲ್ಲಿ ಹಿಡಿದುಕೊಂಡಿದ್ದರು. ಪಕ್ಕದಲ್ಲಿ ನಿಂತಿದ್ದ ಶಕುಂತಲ ರೂಮಿನೊಳಗೆ ಹೊರಟುಹೋದಳು. "ನೋಡು ಮಗು....ಸುಬ್ಬಣ್ಣ ಯಾವುಯಾವ್ದೊ ಜಾತಕಗಳನ್ನ ನನ್ನ ಕೈಲಿ ಕೊಟ್ಟು ಹೋಗಿದ್ದಾನೆ. ಅದ್ರಲ್ಲಿ ಎರಡು ಮೂರು ಚೆನ್ನಾಗಿ ಶಕುಂತಲಳ ಜಾತ್ಕದೊಡನೆ ಒಪ್ಪುತ್ತಂತೆ...."

"ನಿನ್ನೆ ದಿನ ಬೆಳಗ್ಗೆ ರಾಮರಾಯರು ಬಂದಿದ್ರು" ಇದುವರವಿಗೂ ಸುಮ್ಮನೆ ಅಡಿಗೆ ಮನೆಯ ಬಾಗಿಲಲ್ಲಿ ನಿಂತಿದ್ದ ಸೀತಮ್ಮ ನುಡಿದಳು.

"ಹ್ದೂ ಕಣೊ ಮಗು....ಅವನ್ಗೆ ಯಾರು ಏನು ಹೇಳಿದ್ರೊ ಏನೊ.... ಬಂದೊನೆ ವೆಂಕಟರಾಯ ಬೆಂಗಳೂರಿಗೆ ಹೋಗಿದ್ದಾನಂತೆ ಶಕುಂತಲಳನ್ನು ಕರಕೊಂಡು ಪೀನಿ ಮನೆಗೆ....! ಅಂದ. ನೋಡು ಮಗು ಅವನು ಅಪಾರ್ಥ ಮಾಡಿಕೊಂಡಿರಬಹುದು. ನಾನು ಶಕುಂತಲಳ ಸಂಗೀತ ಪರೀಕ್ಷೆಗೆ ಅಂತ ಬಾಳ ಹೇಳ್ದೆ. ಅದು ಅವನಿಗೆ ಅಷ್ಟು ಸಮಂಜಸವಾಗಿ ಕಾಣಲಿಲ್ಲ ಅಂತ ಕಾಣುತ್ತೆ. ನಾವು ಊಟಕ್ಕೆ ಏಳು ಅಂತ ಎಷ್ಟು ಬಲವಂತಮಾಡಿದ್ರೂ ಏಳಲಿಲ್ಲ. ಹೋಟೆಲಲ್ಲಿ ಊಟ ಆಯ್ತು ಅಂತ ಹೇಳಿ ಒಂದು ಕ್ಷಣ ಕುಳ್ತು ಶಾಸ್ತ್ರ ಮಾಡಿ ಹೊರಟೇಬಿಟ್ಟ. 'ನೀವು ಸಾವುಕಾರ್‍ರು ನಮ್ಮಂಥೊರು ಕಣ್ಣಿಗೆ ಬೀಳಲ್ಲ. ಎರಡು ಮೂರು ವರ್ಷದಿಂದಲೂ ನಮ್ಮೂರ ಕಡೆ ತಲೆ ಹಾಕಿಲ್ಲ. ನಾನೆ ನಾಲ್ಕೈದು ಸಾರಿ ಬಂದು ಹೋದೆ. ನಮ್ಮ ಗೋಪಾಲನೊ ಅನೇಕ ಸಾರಿ ಬಂದಿದ್ದ.......ಹೋಗ್ಲಿ. ಮನಸ್ನಲ್ಲಿ ಇಲ್ಲದ ಅಭಿಮಾನ ತಂದ್ಕೊಳ್ಳಿ ಅಂದ್ರೆ ಬರುತ್ತಾ....?! ಏನಾದ್ರೂ ಸುಮ್ನೆ ಇನ್ನೂ ಇದೆ ಅದೇ ಅಭಿಮಾನ. ಇನ್ನು ಮುಂದೂ ಇರುತ್ತೆ ಅನ್ನಿ....' ಎಂದು ಹೊರಟೆಬಿಟ್ಟ ಮಗು. 'ನಾನು ಬಂದಿದ್ದೆ ಅಂತ ನಿಮ್ಮ ಮಗನಿಗೆ ತಿಳ್ಸಿಬಿಡಿ. ನಮ್ಮ ಗೋಪಾಲ ಕೋರ್ಟಿನ ಹತ್ತಿರ ಕಾಯ್ತಾ ಇರ್‍ತಾನೆ' ಬಾಗಿಲಿನ ಹತ್ತಿರಕ್ಕೆ ಹೋಗಿದ್ದ ಆಗ್ಲೆ.

"ರಾಮು ಸಿಟ್ಟಾಗಬೇಡಪ್ಪ....ಕಾಫಿನಾದ್ರೂ ಕುಡ್ದು ಹೋಗು.... ವೆಂಕಣ್ಣಾನು ಎರಡು ಮೂರು ಸಾರಿ ಹೋಗ್ಬೇಕಂತ ಇದ್ದ. ಎಲ್ಲೊ ಆಗಲಿಲ್ಲ. ಏನಾದ್ರೂ ಹಾಳುಕೆಲ್ಸ ಬಿದ್ದುಬಿಡ್ತಿತ್ತು. ಮೇಲಾಗಿ ಸರ್ಕಾರಿ ಚಾಕರಿ ಬೇರೆ....ರಜಾ ಎಲ್ಲಿ ಸಿಕ್ಕುತ್ತೆ ಹೇಳು....ಬಾ ಕೂತ್ಕೊ ಬಾ..."

ಎಂದು ನಾನು ಕರದೆ. 'ಗೋಪಾಲನ್ನೂ ಕರಕ್ಕೊಂಡು ಬರಬಹುದಾಗಿತ್ತಲ್ಲ' ಎಂದು ಸೀತನೂ ನುಡಿದಳು.

'ಅವನಿಗೆ ಅಲ್ಲಿ ಏನೊ ಕೆಲ್ಸ ಇತ್ತು ಬರಲಿಲ್ಲ. ಬಂದಿದ್ರೆ ಏನು ನಷ್ಟವಾಯ್ತು ಹೇಳಿ.' ಕಾಫಿಯನ್ನು ಒಂದೇ ಗುಟಕಿಗೆ ಕುಡಿದುಬಿಟ್ಟ.

'ಗೋಪಾಲನ್ನು ಕರ್ಕೊಂಡು ನೀವೂ ರಾತ್ರಿಗಾದ್ರೂ ಊಟಕ್ಕೆ ಬನ್ನಿ ಅಷ್ಟು ಹೊತ್ತಿಗೆ ಅವರೂ ಬರಬಹುದು' ಅಂತ ಸೀತ ಹೇಳಿದಳು. ನಾನೂ ಹಾಗೇ ಹೇಳ್ದೆ, ಆದ್ರೆ ಅವನು ಕೇಳಲಿಲ್ಲ. 'ಎಲ್ಲಿಬರ್‍ತಾರೆ ಇವತ್ತು. ಹೋದ ಕೆಲ್ಸ ಪೂರ್ತಿಯಾಗಿ ಆಗ್ಬೇಕೊ ಬೇಡ್ವೊ....ನೂತೂಕತ....!' ಏನನ್ನೊ ಮುಚ್ಚಿ ಮುಚ್ಚಿ ಮಾತ್ನಾಡ್ತಾ ಇದ್ದ. ಇದ್ಯಾಕೆ ಹೀಗೆ ಮಾತಾಡ್ತಾ ಇದ್ದಾನೆ ಅಂತ ನಂಗೆ ತುಂಬಾ ಹೊತ್ತು ಗೊತ್ತಾಗ್ಲೆ ಇಲ್ಲ. ನಿಂಗೂ ಅವನಿಗೂ ಏನೊ ಮನಸ್ತಾಪ ಬಂದಿರಬಹುದು ಅಂತ ಆಗ ಅಂದ್ಕೊಂಡೆ. ಆದ್ರೆ ಆಮೇಲೆ ಎಲ್ಲಾ ಅರ್ಥವಾಯ್ತು ಅನ್ನು." ಸುಮ್ಮನಾದರು ತಾಯಿ.

"ನೀವೂ ರಾಮುರಾಯನೊಡನೆ ಸರಿಯಾಗಿ ಯಾಕೆ ಮಾತ್ನಾಡಬಾರ್‍ದು. ಗೋಪಾಲನಿಗಿಂತ ಒಳ್ಳೆ ಹುಡ್ಗ ಇನ್ಯಾರಿದ್ದಾರೆ. ಹುಡ್ಗೀನೂ ಹತ್ತಿರ ಸೇರಿದಹಾಗೆ ಆಗುತ್ತೆ. ಅವರೂ ಮೊದಲ್ನಿಂದ್ಲೂ ಇದೇ ಆಸೆ ಇಟ್ಕೊಂಡಿದ್ದಾರೆ. ಅಮ್ಮನೂ ಇದನ್ನೆ ಹೇಳ್ತಾ ಇದ್ದಾರೆ...." ಸೀತಮ್ಮ ನುಡಿದಳು.

"ಏನು ಸುಬ್ಬಣ್ಣ ಬೇರೆ ಬಂದಿದ್ದನಂತ. ಎಲ್ಲಿ ಕಾಣಲೇ ಇಲ್ಲ. ಅವನೂ ಹೋಗಿದ್ದಾನೊ ವೆಂಕಟರಾಯನ ಜೊತೇಲಿ? ಎಂದು ರಾಮುರಾಯ ಕೇಳಿದಮೇಲೆ ನನಗೆ ಎಲ್ಲವೂ ಸಾಂಗವಾಗಿ ಅರ್ಥವಾಯ್ತು ಅನ್ನು. ಯಾರೊ ಅವನಿಗೆ ಹೇಳಿರಬೇಕು ನೀನು ಬೆಂಗಳೂರಿಗೆ ಹೋಗಿರೋದು ಸುಬ್ಬಣ್ಣನ ಪ್ರೇರಣೆ ಮೇಲೆ ಗಂಡು ನೋಡಲು ಅಂತ. ಅದಕ್ಕೇ ಅವನು ಅಷ್ಟು ರೇಗಾಡಿದ್ದು. ನಾನು ನೀನು ತಪ್ಪು ತಿಳಿದಿದ್ದಿ ಅಂತ ತುಂಬಾ ಹೇಳ್ದೆ. ಅವನಿಗೆ ನಂಬಿಕೆ ಆಗ್ಲಿಲ್ಲ ಅಂತ ಕಾಣುತ್ತೆ. ಕೂತ್ಕೊ ಅಂದ್ರು ಕೂತ್ಕೊಳ್ಲಿಲ್ಲ. 'ನಿಮ್ಗೆ ಹ್ಯಾಗೆ ಚೆನ್ನಾ ಅಂತ ಕಾಣುತ್ತೊ ಹಾಗೆ ಮಾಡಿ.' ಎಂದುಕೊಂಡು ಹೊರಟೇಹೋದ. ಅದ್ಯಾಕೆ ವೆಂಕಣ್ಣ ಊರಿಗೆ ಹೋಗಿ ಒಂದು ಮಾತು ನಿಗಧಿಯಾಗಿ ಮಾತ್ನಾಡಿಕೊಂಡು ಬರಬಾರ್‍ದು ಅಂತ....! ಊರಿಗೆ ಬಂದ್ದಾಗೂ ಆಯ್ತು ಮಾತ್ನಾಡಿದ ಹಾಗೂ ಆಯ್ತು. ನನ್ಗಂತೂ ಅದೇ ಇಷ್ಟ. ಅವರೂ ಮೊದಲಿಂದ್ಲೂ ಅದೇ ಹೇಳ್ತಾ ಇದ್ದಾರೆ. ಎಲ್ಲಾ ವಿಧದಲ್ಲೂ ಅವಳ ಆ ಊರಿಗೇ ಸೇರಿದ್ರೆ ಚೆನ್ನಾಗಿರುತ್ತೆ.

ವೆಂಕಟರಾಯರು ತಲೆತಗ್ಗಿಸಿ ಸುಮ್ಮನೆ ಕುಳಿತಿದ್ದರು.

"ನೋಡು ಆಗ಼್್ಲೆ ನಾನು ಪೂರ್ಣ ಮೆತ್ತಗಾಗಿ ಹೋದೆ. ನಿಂಗೂ ವಯಸ್ಸಾಗ್ತಾ ಬಂತು. ಹಾಳು ದೇವರು ನಿನಗೊಂದು ಗಂಡು ಸಂತಾನ ಕೊಟ್ಟಿದ್ರೆ ನೀನು ನಿನ್ನ ಮಗಳ್ನ ಯಾರಿಗಾದ್ರೂ ಕೊಟ್ಕೊ ಅನ್ನಬಹುದಾಗಿತ್ತು. ಈಗ ಹ್ಯಾಗೆ ಅನ್ನೋದಕ್ಕೆ ಆಗುತ್ತೆ ಹೇಳು. ನಾವು ರಾಮರಾಯರ ಮನೆಯೋರನ್ನ ಬಿಡೋಹಾಗಿಲ್ಲ. ಆದರೂ ನಮ್ಮನ್ನ ಬಿಡೋಹಾಗಿಲ್ಲ. ಗೋಪಾಲ ಒಳ್ಳೆ ಹುಡ್ಗ. ನಾವು ಮೊದಲ್ನಿಂದ ನೋಡಿರೊ ಹುಡ್ಗ. ಎಲ್ಲಾ ವಿಧದಲ್ಲೂ ಹುಡುಗೀಗೆ ವಾರಿಗೆ ಆಗಿದ್ದಾನೆ....ಇಷ್ಟರ ಮೇಲೆ ನಿನ್ನಿಷ್ಟ...." ತಾಯಿ ಹೇಳಿ ನೀರವರಾದರು.

"ನಂಗೇನೂ ಅವನಿಗೆ ಕೊಡಬಾರದೂಂತ ಇಲ್ಲಮ್ಮ. ನಂಗೂ ಅದೇ ಆಸೆಯಿತ್ತು...."

"ಹಾಗಾದ್ರೆ ಈಗ ಇಲ್ಲ ಅನ್ನು!" ಮಲಗಿದ್ದ ಸಾವಿತ್ರಮ್ಮ ಏಳಲು ಪ್ರಯತ್ನಿಸಿ ಆಗದೇ ಪುನಃ ಹಾಗೆಯೇ ಮಲಗಿದರು.

"ಗೋಪಾಲ ಓದಿಲ್ಲ. ಎಸ್.ಎಸ್.ಎಲ್.ಸಿ., ಮಾಡಿಕೊಂಡು ಊರಿನಲ್ಲಿ ಊಟಮಾಡ್ಕೊಂಡು ಸುಮ್ನೆ ಇದ್ದಾನೆ. ಇನ್ಯಾರಾದರೂ ಓದಿದೋನಿಗೆ ಕೊಟ್ಟು ಚೆನ್ನಾಗಿ ಮದ್ವೆ ಮಾಡ್ಬೇಕು ಅಂತ ನನ್ನಾಸೆ. ಇರೋಳು ಒಬ್ಬಳು ಮಗಳು. ಅವಳೇ ನನ್ನ ಪಾಲಿಗೆ ಮಗನೂ ಹೌದು...." ತಾಯಿ ಮೂಕರಾಗಿ ಮಗನ ಮುಖವನ್ನೇ ನೋಡುತ್ತಿದ್ದರು.

"ರಾಮರಾಯ ಆಗ಼್್ಲೆ ನಮ್ಮ ಆಸ್ತೀನೂ ಅವಂದೇ ಅಂತ ಹೇಳ್ತಾ ಇದ್ದಾನಂತೆ. "ಗಂಡು ಮಕ್ಕಳಿಲ್ಲ ಮರಿ ಇಲ್ಲ. ಇರೋ ಒಂದು ಹೆಣ್ಣು ಬೊಕೀನ ನನ್ನ ಮಗನಿಗೇ ತಂದ್ಕೋ ಅಂತ ನನ್ನ ಕಾಲು ಹಿಡಿಕೊಂಡು ಕೇಳ್ಕೋಬೇಕು ವೆಂಕಟರಾಯ. ಆಗ಼್್ಲೆ ನಾನು ಒಪ್ಕೋದು...." ಅಂತ ಆ ರಂಗಣ್ಣನ ಕೈಲಿ ಹೇಳಿಕೊಂಡನಂತೆ ಅವತ್ತೊಂದ್ಸಲ....!

ಅವನ ಕಾಲು ಹಿಡ್ಕೊಳ್ಳೋದೂ ಬೇಡ. ಅವನ ಮಗನೂ ಬೇಡ. ಇನ್ಯಾರೂ ಗತೀನೆ ಇಲ್ವೆ ನನ್ನ ಮಗಳನ್ನ ಮದ್ವೆ ಆಗೋಕೆ! ಯಾರಾದ್ರೂ ಕಾಲಿಗೆ ಬಿದ್ದು ಮದ್ವೆ ಮಾಡ್ಕೊಂಡು ಹೋಗ್ತಾರೆ....ನಮ್ಮ ಶಕುಂತಳನ್ನ. ಇವಳ್ನ ಮದ್ವೆ ಆಗೋನು ಪುಣ್ಯಮಾಡಿರಬೇಕು ..."

ವೆಂಕಣ್ಣ ಮಾತನ್ನ ನಿಲ್ಲಿಸಿದಾಗ ತಾಯಿ ಅವನ ಮುಖವನ್ನು ದಿಟ್ಟಿಸಿದರು. ಮಗನ ಕಣ್ಣು ಕೋಪದಿಂದ ಕಿಡಿಕಾರುತ್ತಿತ್ತು.

"ಇದೇನೊ ನೀನು ಹೇಳ್ತಾ ಇರೋದು...?!" ಆಶ್ಚರ್ಯದಿಂದ ಪ್ರಶ್ನಿಸಿದರು.

" ಈಗ ಮೊದಲ್ನಾಗೆ ಇಲ್ಲ ಅಮ್ಮ ರಾಮರಾಯ. ಬಹಳ ಬದಲಾಯ್ಸಿ ಹೋಗಿದ್ದಾನೆ. ನೀನೇ ಹೇಳ್ದೆ ಹುಚ್ಚಾಬಟ್ಟೆ ರೇಗಾಡಿ ಹೋದ ಅಂತ. ಅದ್ರಿಂದ್ಲೂ ಗೊತ್ತಾಗಿಲ್ವೆ ನಿಂಗೆ ಅವನು ಮೊದಲಿನ ರಾಮರಾಯ ಅಲ್ಲ ಅಂತ. ಆಸೆ ಅತಿಯಾಗಿ ಹೋಗಿದೆ. ಅದೇ ನಮ್ಮೂರ ಕೆರೆಗೆ ಇನ್ನೊಂದು ತೂಬನ್ನು ಕೊಟ್ಟಿದ್ದಾರೆ ಅಂತ ನಿಂಗೆ ಅವತ್ತೇ ಹೇಳಲಿಲ್ವೆ ನಾನು. ಆ ತೂಬಿನಿಂದ ರಾಯಗಾಲುವೆ ನಮ್ಮ ಹೊಲದೊಳಗೇ ಹಾದು ಹೋಗುವಂತೆ ಮಂಜೂರಾಗಿತ್ತು.

" ಆಗೋದೆಲ್ಲಿ ಬಂತು. ನಾನೇ ಮಾಡಿಸಿದ್ದೆ ಅನ್ನು. ಇನ್ನೇನು ಇಷ್ಟ್ರಲ್ಲೆ ಕೆಲ್ಸ ಪ್ರಾರಂಭವಾಗಬೇಕಾಗಿತ್ತು. ಇದಾದ್ರೇನಮ್ಮ ಹೊಲ ಇಲ್ವೆ ಕೆರೆ ಕೆಳಗೆ ಹತ್ತು ಎಕರೆ, ಅದೂ ಗದ್ದೆಯಾಗುತ್ತೆ. ಕೂತಕಡೆ ಇನ್ನು ಹೆಚ್ಚಾಗಿ ಐವತ್ತು ಪಲ್ಲ ಭತ್ತ ಹೆಚ್ಚಾಗಿ ಬರುತ್ತೆ. ಆದ್ರೆ ರಾಮರಾಯ ರಂಗಪ್ಪ ಗೌಡನ ಕೈಲಿ ವೆಂಕಟರಾಯರ ಹೊಲದಲ್ಲಿ ಹೋಗೋದು ಬೇಡ ರಾಯ ಗಾಲುವೆ. ಅವರಿಗೆ ಬೇಕಾದಷ್ಟು ಗದ್ದೆ ಇವೆ. ಪಾಪ ಬಡವರು ಬದುಕ್ಕೊಳ್ಳಿ. ಆ ಆದಿಕರ್ಣಾಟಕರು ...ಅಂದ್ರೆ ಮಾದಿಗರ ಇನಾಂತಿ ಇಲ್ವೆ, ನಮ್ಮ ಹೊಲದ ಕೆಳಗೆ ಅಲ್ಲಿ ಹೋಗ್ಲಿ ಹಾಗೆ ನೀನು ಡೆಪ್ಯುಟಿ ಕಮೀಷನರನ್ನು ಕಂಡು ಮಾಡಿಸಿ ಬಿಡು. ಅಸೆಂಬ್ಲಿ ಮೆಂಬರಾದ್ದಕ್ಕೆ ಸಾರ್ಥಕವಾಗುತ್ತೆ. ನಿನಗೂ ಹೆಸರು ಬರುತ್ತೆ. ಬಡವರೂ ಬದ್ಕಿಕೊಳ್ತಾರೆ ಅಂತ ಬಾಳ ಹೇಳಿದ್ನಂತೆ. ರಂಗಪ್ಪನೂ ' ಹೂಂ. ಆಗ್ಲಿ ' ಅಂತ ಹೇಳಿ ಸುಮ್ನಾದನಂತೆ ಅನ್ನು. ನನ್ನ ವಿರುದ್ಧ ಅವನು ಎಂದೂ ಕೆಲ್ಸ ಮಾಡೋಲ್ಲ....."

" ನಂಗೊಂದೂ ಅರ್ಥವಾಗ್ತಾ ಇಲ್ಲ...." ಅಡಿಗೆ ಮನೆ ಬಾಗಿಲಲ್ಲಿ ಕುಳಿತಿದ್ದ ಸೀತಮ್ಮ ಭಪ್ರವಾಗಿ ತಲೆಯನ್ನು ಹಿಡಿದುಕೊಂಡಳು. ತಲೆ ಸಿಡಿಯ ಹತ್ತಿತ್ತು.

" ಇವನಿಗ್ಯಾಕೆ ತಲೆ ಹರಟ ವಿದ್ಯಾ ಅಂತ...ಸುಮ್ನೆ ಇರಬೇಕೊ ಬೇಡವೋ....? ನಾವೇನಾದ್ರೂ ಹೋಗಿದ್ವಾ ಅವನ ಆಸ್ತಿಗೆ....? ಇನ್ನೂ ನಾವೇ ಅವನ ಸಂಬಂಧ ಬೆಳಸಬೇಕು ಅಂತ ಇರಬೇಕಾದ್ರೆ....?" ರಾಯರು ಪೂರ್ಣವಾಗಿ ಸಿಟ್ಟಾಗಿದ್ದರು.

" ಅದೂ ನಿಜ ಹೌದಲ್ಲೋ ಮಗು. ನಂಪ್ಗೆ ದೇವರು ಕೊಟ್ಟಾಗೆ ಬಿದ್ದಿದೆ ಗದ್ದೆ. ಒಂದು ವರ್ಷ ಭತ್ತ ಬಂದ್ರೆ ನಾಲ್ಕು ವರ್ಷಕ್ಕೆ ಆಗುತ್ತೆ. ಅಂತೋದ್ರಲ್ಲಿ ಇನ್ನೂ ಆಸೆ ಪಟ್ರೆ ಅದು ನಮ್ಮ ದುರಾಸೆ ಅಲ್ವೆನೋ ವೆಂಕಣ್ಣ ....? ರಾಮರಾಯ ಬಹುಶಃ ಹೇಳಿರಲಾರ. ಹೇಳಿದ್ರೂ ಅದ್ರಲ್ಲಿ ತಪ್ಪೇನು.

ಪಾಪ ಬಡವರು ಬದುಕ್ಕೊಳ್ಳಿ ಅಂತ ತಾನೆ ? ಅವಂದೇನೂ ಜಮೀನು ಇಲ್ವಲ್ಲ ಅಲ್ಲಿ ಸ್ವಾರ್ಥ ಅನ್ನೋಕೆ...." ತಾಯಿ ನುಡಿದು ಮಗನ ಮುಖವನ್ನು ನೋಡಿದರು.

"ನಿಮ್ಗೆ ಹೆಂಗ್ಸರಿಗೆ ಏನೂ ಗೊತ್ತಾಗಲ್ಲ. ಬೆಳ್ಳಗಿರೋದೆಲ್ಲಾ ಹಾಲು ಅಂತೀರಾ. ರಾಮರಾಯ ಮೇಲೆ ಕಾಣೊ ಹಾಗೆ ಒಳಗಿಲ್ಲ ಅಂತ ನನಗೆ ಈಗ ಗೊತ್ತಾಯ್ತು. ನಾನೂ ಇಷ್ಟು ದಿವಸ ಬಹಳ ಒಳ್ಳೆ ಮನುಷ್ಯ ಅಂತಲೇ ತಿಳಿದಿದ್ದೆ. ಈಗೀಗ ತಿಳೀತಾ ಇದೆ. ಆ ಮಾದಿಗರ ಜಮೀನಿನ ಕೆಳಗಡೆ ಇದ್ಯಲ್ಲ ಅದೇ ಈರನಾಯ್ಕನ ಹೊಲ ಹನ್ನೆರಡು ಎಕರೆ ಅದನ್ನು ರಾ ಮ ರಾ ಯ ಕೊಂಡುಕೊಳ್ಳಬೇಕೆಂದಿದ್ದಾನಂತೆ. ಮಾದಿಗರ ಹೊಲದಲ್ಲಿ ರಾಯಗಾಲುವೆ ಹೊದ್ರೆ ಆ ಹೊಲವೂ ಗದ್ದೆಯಾಗುತ್ತೆ. ಇದೇ ಅವನ ಹಂಚಿಕೆ. ಇದನ್ನು ಕೊಂಡುಕೊಳ್ಳೋಕೆ ಎಲ್ಲಾ ಮಾತೂ ಕತೆ ಮುಗಿದಿದೆಯಂತೆ. ಇದನ್ನು ಕೇಳ್ದಾಗಿನಿಂದ ನಂಗೆ ರೇಗಿ ಹೋಗಿದೆ. ನನ್ನ ಆಸ್ತಿ ಎಲ್ಲಾದ್ರೂ ಹಾಳಾಗಿ ಹೋಗ್ಲಿ. ಅವನಿಗೆ ದಕ್ಕಬಾರ್ದು ಅಂತ ಮಾಡಿದ್ದೇನೆ. ನನ್ನ ಮೇಲೆ ಪ್ರತಿಷ್ಠೆ ತೋರ್ಸಕ್ಕೆ ಹೋಗಿದ್ದಾನಲ್ಲ....!" ರಾಯರು ಕೋಪದಿಂದ ಇನ್ನೂ ಬುಸುಗುಟ್ಟುತ್ತಿದ್ದರು.

ಸೀತಮ್ಮ ಒಳಗೆ ಹೊರಟುಹೋದರು.

ಸಾವಿತ್ರಮ್ಮ ಸಿಟ್ಟುಸಿರುಬಿಟ್ಟರು.

ಶಕುಂತಲ ರೂಮಿನಿಂದ ಬಿರುಸಾಗಿ ಹೊರಗೆ ಹೊರಟುಹೋಳು.

"ಮಗೂ ನಿಂಗ್ಯಾಕೆ ಬಂತೊ ಇಂಥಾ ದುರ್ಬುದ್ಧಿ. ನಮ್ಮ ವಂಶದಲ್ಲಿ ಯಾರಿಗೂ ಇಂಥಾ ಕೆಟ್ಟ ಬುದ್ಧಿ ಬಂದಿರಲಿಲ್ಲ. ರಾಮರಾಯ ನಿಜವಾಗ್಩ಲೂ ಅಂತೋನಲ್ಲ. ನಾನು ಅವನ್ನ ಚೆನ್ನಾಗಿ ಬಲ್ಲೆ. ನಿಂಗೆ ಯಾರೋ ಏನೋ ಹೇಳಿ ಮನಸ್ಸು ಕೆಡ್ಸಿಬಿಟ್ಟಿದ್ದಾರೆ. ಯಾವ ಮನೆಮುರಕ ಈ ಹಾಳು ಕೆಲ್ಸ ಮಾಡಿದನೊ ಅವನ ಮನೆ ಹಾಳಾಗ....ಚೆನ್ನಾಗಿದ್ದ ನಮ್ಮ ಎರಡು ಮನೆ ಮುರಿಯೋಕ್ಕೆ ಹಂಚಿಕೆ ಹಾಕಿದ್ದಾರೋ ಯಾರೊ....! ಅಷ್ಟು ವರ್ಷದಿಂದ ರಾಮರಾಯನ್ನ ನೋಡಿದ್ದೀಯಾ....ಅವನ ಗುಣ ನಿಂಗೆ ಅರ್ಥವಾಗಿಲ್ಲ ವೇನೊ ?....ಎಂದೂ ಇಲ್ಲದ ಕೆಟ್ಟ ಬುದ್ಧೀನಾ ಈಗ ಕಲ್ತನೇನೋ ?...." ತಾಯಿಗೆ ದುಃಖದ ಜೊತೆಗೆ ಕೋಪ ಬಂದಿತ್ತು.

"ಹೌದು ಕಣಮ್ಮ. ಈಗೀಗ್ಲೆ ಅವನ ಬುದ್ಧಿ ಕೆಡ್ತಾ ಇರೋದು. ಮನೆ ಕಟ್ಟೋವಾಗ ಹಣ ಸಿಕ್ಕಿತಂತಲ್ಲ. ಆಗ್ಲಿಂದ ಬದಲಾಯ್ತು ಹೋಗಿದ್ದಾನೆ. ಹಣ ಹತ್ತಿರ ಸೇರಿದ ಮೇಲೇ ಕೆಟ್ಟ ಬುದ್ಧೀನೂ ಸೇರಬೇಕಾದ್ದೆ....."

“ಹೋಗೊ ನಿನ್ನ ಅನುಮಾನ ಬುದ್ಧಿಗಿಷ್ಟು ಬೆಂಕಿಹಾಕ. ಇಲ್ಲದ ಅನುಮಾನ ತಲೇಲಿ ತುಂಬಿಕೊಂಡು ಆಗಬಾರದ್ದನ್ನ ಮಾಡೋಕೆ ಹೊರ ಟಿದ್ದಿ....ಅವನಿಗಲ್ಲ ಬುದ್ಧಿ ಕೆಟ್ಟಿರೋದು ನಿಂಗೆ. ಹೇಳ್ಕೆಮಾತು ಕೇಳಿ ಕುಣೀತಾ ಇದಿಯಲ್ಲಾ ನೀನು ...ನಿಂಗೆ ನಿಜವಾಗ಼್ೂ ಬುದ್ಧಿ ಕೆಟ್ಟಿದೆ..... ಇದೆಲ್ಲಾ ಆ ಮನೆಹಾಳು ರಂಗಪ್ಪನ ಕೆಲ್ಸ ಅಂತ ಕಾಣ್ಸುತ್ತೆ. ಮುಂಚೆ ಇಂದ಼್ೂ ಅಷ್ಟೆ ಅವನ ಬುದ್ಧಿ....ಮನೆಹಾಳ ಬುದ್ಧಿ. ಈಗ ದೊಡ್ಡ ಮನುಷ್ಯ ಆಗಿ ಜೇರೆ ಕುಕ್ಕರಿಸ್ಕೊಂಡಿದ್ದಾನೆ. ಅವನ ಮಾತು ನಿಂಗೆ ವೇದವಾಕ್ಯ. ಹೆತ್ತ ತಾಯಿ ನೀನು ಹೇಳೋದು ಕೆಲ್ಸಕ್ಕೆ ಬಾರದ್ದು....ಸ್ವತಃ ಪರೀಕ್ಷೆ ಮಾಡ್ದೆ ಯಾವ್ದನ್ನು ದುಡುಕಿ ಮಾಡಬಾರದೋ ಮಗು....” ಕೆಮ್ಮು ಒತ್ತ ರಿಸಿ ಬಂತು. ಒಂದು ನಿಮಿಷ ಸುಧಾರಿಸಿಕೊಂಡು ಒಂದು ದಿನವೂ ಇಂಥ ಕೆಟ್ಟಮಾತ್ನ ಆಡವಿಲ್ಲೋನು ಹೇಗೆ ಆಡಿದೆಯೋ ಇವತ್ತು ...?! ಕಣ್ಣಲ್ಲಿ ಉಕ್ಕಿಬಂದ ಕಣ್ಣೀರನ್ನು ಸೆರಗಿನಿಂದ ಒರಸಿಕೊಂಡರು.

“ಹಾಸಿಗೆ ಹಿಡ್ದ ತಾಯೀನ ಆಳಿಸೋದು....ಚೆನ್ನಾಗಿದೆ....!” ಸೀತಮ್ಮನ ಮಾತಿನಲ್ಲಿ ಅಸಮಾಧಾನ, ಮತ್ತೆ ಕೋಪ ತುಳುಕಿತ್ತು.

“ನಾನೊಂದು ಯೋಚಿಸಿದ್ರೆ ದೇವರೊಂದು ನಡೆಸ್ತಾ ಇದ್ದಾನೆ.” ಜೋರಾಗಿ ಕೆಮ್ಮಿ ಹಾಸಿಗೆಯ ಮೇಲೆ ಮಲಗಿಬಿಟ್ಟರು. “ನೀನಂತೂ ಊರು ಸೇರಲಿಲ್ಲ. ಶಕುಂತಲಳಾದ್ರೂ ಊರು ಸೇರಿ ಹಿರೀರ ಹೆಸರು ಹೇಳ್ಕೊಂಡು ಗೂಡಿನಲ್ಲಿ ದೀಪ ಹಚ್ತಾಳೆ ಅಂತಿದ್ದೆ....” ಕತ್ತರಿಸುತ್ತಿದ್ದ ಕಾಲನ್ನು ನೀಳವಾಗಿ ನೀಡಿ ಒಮ್ಮೆ ನವರಿಕೊಂಡರು.

“ನಿನ್ನ ಮಗಳು ನಿಂಗೆ ಹ್ಯಾಗೆ ಬೇಕೊ ಹಾಗೆ ಮಾಡ್ಕೊ ಹೋಗಪ್ಪ ....ಅವಳ ಕಷ್ಟಾ ಸುಖಾನ ನಂಗಿಂತಾ ನೀನು ಚೆನ್ನಾಗಿ ಯೋಚಿಸಿದ್ದೀ ಯಂತ ಕಾಣುತ್ತೆ... !” ಸಾವಿತ್ರಮ್ಮ ನುಡಿಯುವಾಗ ಮನಸ್ಸಿನ ಉದ್ವೇಗ ಅತಿಯಾಗಿತ್ತು. ನೋವು ಹೆಚ್ಚಿತ್ತು. ಕಾಲಕೆಳಗೆ ಬಿದ್ದಿದ್ದ ರಗ್ಗನ್ನು ಮುಖ ಪೂರ್ತಿಯಾಗಿ ಹೊದ್ದುಕೊಂಡರು.

ಒಳಗೆ ಬಿಕ್ಕಿ ಬಿಕ್ಕಿ ಅಳುವ ಶಬ್ದ ಕೇಳಿಸುತ್ತಿತ್ತು.

“ನಿಂಮ್ಗೆ ಯಾಕೊ ಪೂರ್ತಿ ಬುದ್ಧಿ ಕೆಟ್ಟುಹೋಗಿದೆ....! ಅಮ್ಮಂಗಿಂತಾ ಗೊತ್ತೇನೊ ನಿಂಮ್ಗೆ....? ನಿಮ್ಮ ಹುಚ್ಚು ನಿಂಮ್ಗೇ ಸರಿ ...!!” ಅಡಿಗೇ ಮನೆಯಲ್ಲಿ ಗೊಣಗಿದಳು ಸೀತಮ್ಮ.

ವೆಂಕಟರಾಯರು ಅಡಿಗೆ ಮನೆಯ ಕಡೆಗೊಮ್ಮೆ ತಾಯಿಯ ಕಡೆ

ಗೊಮ್ಮೆ ನೋಡುತ್ತ ಸ್ವಲ್ಪಹೊತ್ತು ಕುಳಿತಿದ್ದರು. ಅನಂತ ಎದ್ದು ಹೊರಗೆ ಹೊರಟು ಹೋದರು.

ಮನಸ್ಸು ಬಹಳವಾಗಿ ಅಸ್ಥಿರಗೊಂಡಿತ್ತು.

ಈ ವಿರಸದಿಂದಾಗಿ ಮನೆಯಲ್ಲಿ ಎಂಟುದಿನ ಸಂಪೂರ್ಣವಾಗಿ ಭೀಕರ ಮೌನ ಕರಾಳವಾಗಿ ನರ್ತಿಸುತ್ತಿತ್ತು. ತಾಯಿ ಸಾವಿತ್ರಮ್ಮನ ಕಾಲಸೆಳೆತ ಎಷ್ಟು ಜಾಸ್ತಿಯಾದರೂ ಯಾರೊಡನೆಯೂ ಹೇಳದೆ ಸುಮ್ಮನೆ ಮಲಗಿಬಿಟ್ಟದ್ದರು. ನೋವು ಹೆಚ್ಚಾದಾಗ ತಾವೇ ಕಾಲು ಸವರಿಕೊಂಡು ಮುಸಕು ಹಾಕಿಕೊಂಡು ಅತ್ತುಬಿಡುತ್ತಿದ್ದರು. ಸೀತಮ್ಮ ಬಂದು ಬಹಳ ಬಲವಂತಮಾಡಿ ಕಣ್ಣೀರನ್ನು ಮಿಡಿದು ಅನ್ನವನ್ನು ತಿನ್ನಿರೆಂದು ಬಹಳ ಹೇಳಿದರೆ ಆಕೆಯ ಮನಸ್ಸನ್ನು ನೋಯಿಸ ಬಾರದೆಂದು ಸ್ವಲ್ಪ ಊಟ ಮಾಡಿದ ಶಾಸ್ತ್ರಮಾಡುತ್ತಿದ್ದರು. ಶಕುಂತಲ ತಲೆ ತಗ್ಗಿಸಿ ಅಜ್ಜಿಯ ಬಳಿಗೆ ಹೋಗಿ ಕಣ್ಣಿನಿಂದಲೇ ಖಾಯಲೆಯನ್ನು ವಿಚಾರಿಸಿ ಮೌನವಾಗಿಯೇ ತನ್ನ ದುಃಖವನ್ನು ತೋರಿಸಿದಾಗ ಅವಳನ್ನು ಬಿಗಿಯಾಗಿ ಅಪ್ಪಿಕೊಳ್ಳುತ್ತಿದ್ದರು. ತಲೆಯನ್ನು ನೇವರಿಸಿ ಕಣ್ಣೀರನ್ನು ಮಿಡಿಯುತ್ತಿದ್ದರು.

"ನಿಂಗಿನ್ನು ಎಂಥಾ ಕಷ್ಟ ಹಣೇಲಿ ಬರ್ದಿದೆಯೊ....?!....ಯಾರ ಮನೆ ಸೇರಬೇಕಾಗಿದ್ಯೊ...! ಆ ದೇವರೇಬಲ್ಲ...!!" ಎಂಟು ದಿನದಲ್ಲಿ ಅವರು ಹಲವು ಬಾರಿ ನುಡಿದಿದ್ದುದು ಇದೊಂದೆಮಾತು.

ತಂದೆ ಮನೆಗೆ ಬಂದಾಗ ಬಹುನಲ್ಮೆಯಿಂದ ಬಳಿಸಾರಿ ಸರಸವಾಗಿ ಹಿಡಿಸಿ ಟೇಪಿಗೆ, ಪೌಡರಿಗೆ, ದುಡ್ಡನ್ನು ಕಸಿದುಕೊಳ್ಳುತ್ತಿದ್ದ ಶಕುಂತಲ ಇಂದು ಮೌನವಾಗಿ ಅರ್ಧ ಕಣ್ಣನ್ನು ಮಾತ್ರ ತೆರದು ಏನೊ ಭಯದಿಂದ ನೋಡುತ್ತಾಳೆ. ತಂದೆ ಮನೆಯಲ್ಲಿ ಇರುವಷ್ಟು ಹೊತ್ತೂ ಹೊರಗೇ ಇರಲು ಬಹಳ ಯತ್ನಿಸುತ್ತಾಳೆ. ಇಲ್ಲವೇ ರೂಮಿನೊಳಗೆ ಬಾಗಿಲನ್ನು ಹಾಕಿಕೊಂಡು ಮಂಚದ ಮೇಲೆ ಮಲಗಿ ಮೇಲಿನ ತಾರಸಿಯನ್ನು ನೋಡುತ್ತ ಇರುತ್ತಾಳೆ.

ಸೀತಮ್ಮ ಗಂಡನಿಗೆ ಬಡಿಸುವಾಗಲೂ ಈ ಮೌನವೇ ನೆಲೆಸಿರುತ್ತಿತ್ತು ಮನೆಯಲ್ಲಿನ ಈ ಸಾಮೂಹಿಕ ಮೌನ ವ್ರತ ರಾಯರನ್ನು ಎಂಟು ದಿನದಲ್ಲಿ ಹಣ್ಣುಮಾಡಿಬಿಟ್ಟಿತು.

"ಯಾರ್ದಾರೂ ದೊಡ್ಡೋರ ಮಗನಿಗೆ ಓದಿದೋನಿಗೆ ಕೊಟ್ಟು ದೊಡ್ಡೋನು ಅನ್ನಿಸ್ಕೊ ವೆಂಕಟರಾಯಪ್ಪ. ಚಿಲ್ಲರೆ ಕಡೆ ಕೊಟ್ಟು ನಿನ್ನ ಗೌರವ ಕಳಕೊಳ್ಳಬೇಡ. ನಂದೂ ತಂದೂ ಅಂತ ಕೊಟ್ರೆ ಇರೋ ಗೌರ

ವವೂ ಹೊರ್ಟ್ಟು ಹೋಗುತ್ತೆ. ರಾಯರು ದೊಡ್ಡೋರು, ಸಾಹುಕಾರ್ರು ಅಂತ ಹತ್ತು ಜನ ಹೊಗಳಬೇಕಾದ್ರೆ ನಿನಗಿರೋದೊಂದೇ ದಾರಿ...." ರಂಗಣ್ಣ ಗೌಡ ಬೆಂಗಳೂರಿನಲ್ಲಿ ಸಾರಿ ಹೇಳಿದ್ದ ಮಾತು ಇಷ್ಟೊಂದು ಕೆಲಸವನ್ನು ಮಾಡಿತ್ತು.

ಹಿರಿದಾದ ಆಸೆ ಮನದಲ್ಲಿ ಮೂಡಿ ಬುದ್ಧಿಯನ್ನು ಮಂಕು ಮಾಡಿತ್ತು.

## ೧೦

ಹೇಳಿ ಹೋಗಿದ್ದಂತೆ ಎರಡು ದಿನಗಳ ನಂತರ ಹಿಂತಿರುಗಿದ ಸುಬ್ಬಣ್ಣ ಈ ಸಮಸ್ಯೆಯನ್ನು ಬಗೆ ಹರಿಸಿ ಮನೆಯಲ್ಲಿ ಮನೆ ಮಾಡಿದ್ದ ಕರಾಳ ಮೌನ ವನ್ನು ಅದರ ಕಾರಣವನ್ನೂ ತಿಳಿದು ದಿಗ್ಭ್ರಮೆಯಾಗಿಬಿಟ್ಟ ಮನುಷ್ಯ. ಎರಡು ದಿನ ಊಟ ನಿದ್ದೆಯನ್ನು ಬಿಟ್ಟು ನಂದೀ ಹಳ್ಳಿಗೂ ತುಮಕೂರಿಗೂ ಓಡಿಯಾಡಿದ. ಸುಬ್ಬಣ್ಣನದು ಅದೇನು ಕೈವಾಡವೋ! ವಿಸ್ಮಯವಾಗುವ ರೀತಿಯಲ್ಲಿ ಎರಡು ಕಡೆಯ ತೊಡರುಗಳನ್ನು ಪರಿಹರಿಸಿ ವ್ಯವಹಾರವನ್ನು ಒಂದು ದಾರಿಗೆ ತಂದ. ಇಷ್ಟು ಹತ್ತಿರದಲ್ಲೇ ವರನನ್ನಿಟ್ಟುಕೊಂಡು ಊರೂರು ಅಲೆದುದಾಯಿತಲ್ಲಾ ಎಂದು ಬೇಸರಪಟ್ಟುಕೊಂಡ.

" ನೀನಾದರೂ ಬಂದು ಸರಿಪಡ್ಸಿದೆಯಲ್ಲಾ....ಎಲ್ಲಾರೂ ಸರಿಯಾಗಿ ರಪ್ಪ...." ಸಾವಿತ್ರಮ್ಮನವರ ನುಡಿಯಲ್ಲಿ ತುಂಬು ಕೃತಜ್ಞತೆ ತುಳುಕುತ್ತಿತ್ತು.

" ನೀನು ಹೇಳ್ದಾಗೇ ರಂಗಣ್ಣಗೌಡ, ಮನೆ ಹಾಳು ಸೂಳೆಮಗ ಕಣಮ್ಮ. ನನ್ನ ಮೋಸ ಮಾಡಿದ್ದ." ರಾಯರು ತಲೆತಗ್ಗಿಸಿ ನುಡಿದರು. ಎದುರಿಗೆ ಕುಳಿತಿದ್ದ ತಾಯಿ ಕಣ್ಣಲ್ಲಿ ಶಾಂತಿ ನೆಲೆಸಿತ್ತು. ಮುಖದಲ್ಲಿ ತೃಪ್ತಿ ಕಾಣುತ್ತಿತ್ತು.

" ಈರನಾಯ್ಕನ ಹೊಲಾನ ಅವನೇ ತಗೋ ಬೇಕು ಅಂತ ಇದ್ನಂತೆ. ಮುಂಚೇನೆ ಸ್ವಲ್ಪ ಸಾಲ ಕೊಟ್ಟಿದ್ದ. ಬಡ್ಡಿ ಅಸಲಿನ ಎರಡರಷ್ಟಾಗಿತ್ತು. ಐನೂರೋ ಸಾವಿರವೊ ಕೊಟ್ಟು ಜಮೀನೆಲ್ಲಾ ಹಾರಿಸೋಣ ಅಂತಿದ್ದ. ಅನ್ಯಾಯವಾಗಿ ಮಕ್ಕಳಂದಿಗ ಈರನಾಯ್ಕ ಹಾಳಾಗಿ ಹೋಗ್ತಾನಲ್ಲ ಅಂತ ರಾಮರಾಯ ಈ ಗಲಾಟೆ ಮಾಡಿದನಂತೆ. ಹೊಲ, ಗದ್ದೆ ಆಗುತ್ತೆ ಅಂತ ಊರಿನಲ್ಲೆಲ್ಲಾ ಹರಡಿ ಹನ್ನೆರಡು ಎಕರೆಗೂ ಇಪ್ಪತ್ತು ಸಾವಿರ ತಾನೆ ಕೊಡು ವುದಾಗಿ ಕೇಳಿದೊರ ಕೈಯಲ್ಲಿ ಹೇಳಿದನಂತೆ. ಸರಿ ಬೆಲೆ ಏರಿಹೋಯ್ತು. ಎರಡು ಎಕರೆ ಮಾರಿ ಈರನಾಯ್ಕ ಸಾಲಾನೆಲ್ಲಾ ತೀರ್ಸಿಕೊಂಡನಂತೆ. ತನ್ನ ಕೈಯಲ್ಲಿದ್ದ ಒಬ್ಬ ಕುಳ ಕೈಬಿಟ್ಟು ಹೋದ್ನಲ್ಲಾ ಅಂತ ರಂಗಣ್ಣಗೌಡ ಅಷ್ಟು

ಪ್ರಚಾರ ಶುರುಮಾಡಿದ್ದಾನೆ...." ಸುಬ್ಬಣ್ಣ ಎಲ್ಲಾ ವಿಷಯವನ್ನೂ ಅರಿತು ನುಡಿದ.

ಅಭಿಮಾನದಿಂದ ಮೆಚ್ಚುಗೆಯ ನುಡಿಯಾಡಿದರು ಸಾವಿತ್ರಮ್ಮ.

"ನಿನ್ನ ಮನಸ್ಸು ಒಳ್ಳೇದು ನೀನು ಹಾಗೆ ತಿಳಿದಿದ್ದಿ ಅಷ್ಟೆ....! ಎಲ್ಲಾರೂ ಹೀಗೆ ಇಲ್ಲಮ್ಮ. ನನ್ನ ಜನ ಏನಂತಾರೆ ಗೊತ್ತೆ....?! ಮದ್ವೆ ಕಂಟ್ರಾಕ್ಟರ್....ದಳ್ಳಾಳಿ,....ಸುಬ್ಬಣ್ಣ ಅಂತ ಕೂಗ್ತಾರೆ. ಹೆಣ್ಣು ಗಂಡು ಎರಡೂ ಕಡೆಯೂ ದುಡ್ಡು ಗಿಟ್ಟಿಸ್ತೀನಂತೆ. ಅದ್ರಲ್ಲೇ ನನ್ನ ಜೀವನ ಸಾಗ್ಬೇಕಂತೆ. ನನ್ನ ಕಿವಿಯಾರ ಕೇಳಿದ್ದೇನಮ್ಮ....ಹೀಗೆ ಅನ್ನೋದನ್ನ...." ನುಡಿಯುವಾಗ ನಿಜವಾಗಿಯೂ ಕರಳು ಕತ್ತರಿಸುತ್ತಿತ್ತು.

"ಅನ್ನೋ ಬಾಯಿಗೆ ಹುಳ ಬೀಳುತ್ತೆ ಸುಮ್ನಿರು. ಆಡೋ ಬಾಯಿಗೆ ಬೀಗ ಹಾಕೊಕ್ಕೆ ಆಗೊಲ್ಲ....ಅಂದುಕೊಳ್ಳಿ ಬಿಡು. ಬೀದಿ ನಾಯಿ ಬಗುಳ್ದರೆ ದೇವಲೋಕ ಹಾಳಾಗಿ ಹೋಯ್ತೆ....?" ಸೀತಮ್ಮ ನುಡಿದಳು.

"ಊಟ ತಿಂಡಿ ಯಾವ್ದನ್ನೂ ನೋಡ್ದೆ ಇನ್ನೊಬ್ಬರಿಗೋಸ್ಕರ ದುಡೀ ತೀಯಲ್ಲ. ನಿನ್ನ ಆಡ್ಯಾವ ಬಾಯಲ್ಲಿ ಅಂತಾರೊ ಸುಬ್ಬಣ್ಣ....! ಹೀಗಾ ಗೋದಕ್ಕೆ ಇದನ್ನು ಕಲಿಗಾಲ ಅನ್ನೋದು. ಪುಟ್ಟ ತರಲೆ ರಂಗಣ್ಣನನ್ನು ವೆಂಕಣ್ಣ ತಿಳಿದಿರಲಿಲ್ವೆ....ಒಳ್ಳೇನು ನಿಸ್ವಾರ್ಥಿ ಅಂತ. ಅವನ ಮಾತಿಗೆ ಮರುಳಾಗಿ ಈಗ ಗೊತ್ತಾಗ್ಲಿಲ್ವೆ ಎಂಥಾ ಹಾವಿನಂಥಾ ಮನುಷ್ಯ ಅಂತ! ನಿನ್ನ ಗುಣವೂ ಅಷ್ಟೆ ಸುಬ್ಬಣ್ಣ. ಒಂದಲ್ಲ ಒಂದು ದಿನ ಗೊತ್ತಾಗುತ್ತೆ. ನೀನು ಎಷ್ಟು ದೊಡ್ಡೋನು ಅಂತ. ಅವತ್ತಾದ್ರೂ ತಿಳ್ಕೊತಾರೆ ಸುಬ್ಬಣ್ಣ. ನೀನ್ಯಾಕೆ ಇವನ್ನೆಲ್ಲಾ ಮನಸ್ಸಿಗೆ ಹಚ್ಚಿಕೊಳ್ತಿ ಹೇಳು...." ಸಾವಿತ್ರಮ್ಮ ಬಹು ಅನುಕಂಪದಿಂದ ನುಡಿದರು.

"ನಾನೇ ಮನಸ್ಸಿಗೆ ಹಚ್ಚಿಕೊಳ್ಳೋನು?! ಅದು ನನ್ನ ಜಾಯಮಾನಕ್ಕೇ ಬಂದಿಲ್ಲ. ಎದುರಿಗೇ ಚೆನ್ನಾಗಿ ಬೈದರೂ ಒಂದು ಘಳಿಗೇನೂ ಅದೆಲ್ಲಾ ಯೋಚಿಸೋಲ್ಲ. ಕೆಲ್ಸ ಮಾಡೋದು ನನ್ನ ಕೆಲ್ಸ. ಅದರ ಫಲಗಳೆಲ್ಲಾ ದೇವರಿಗೆ ಸೇರಿದ್ದು...." ಸುಬ್ಬಣ್ಣ ಕುಳಿತಿದ್ದವನು ಮೇಲಕ್ಕೆ ಎದ್ದ.

"ಶಕುಂತಲ ಏನು ಹೇಳ್ತಾಳೆ....? ಅವಳ್ಗೆ ಇಷ್ಟ ಇದೆ ತಾನೆ.... ನಾವೆಲ್ಲಾ ಇಷ್ಟೊಂದು ಒದ್ದಾಡಿ ಗೊತ್ತುಮಾಡೋದು ಅವಳ್ಗೆ ಇಷ್ಟ ಇಲ್ದೆ ಇರೋದು....!" ಅನುಮಾನ ಸೂಚಿಸಿದ. "ಶಕುಂತಲಾ....ಶಕುಂತಲಾ...." ಕೂಗಿದ.

"ಶಕುಂತಲ ಏನು ಹೇಳ್ತಾಳೆ. ಅವಳಿಗೆ ಇಷ್ಟವಿಲ್ಲದೆ ಏನು ?.... ಪೂರ್ಣವಾಗಿದೆ." ತಂದೆಯೇ ಮಗಳ ಪರವಾಗಿ ನುಡಿದರು. ಸುಬ್ಬಣ್ಣ ಶಕುಂತಲಳನ್ನು ಪುನಃ ಕೂಗಿದ. ರೂಮಿನೊಳಗೇ ಇದ್ದರೂ ಬರಲಿಲ್ಲ. ಅಜ್ಜಿ ಪುನಃ ಕೂಗಿದ ಮೇಲೆ

"ನಿಂಮ್ಗೆ ಇನ್ನೇನೂ ಮಾಡೋಕೆ ಕೆಲ್ಸ ಇಲ್ಲ ಅಂತ ಕಾಣುತ್ತೆ....! ಯಾವಾಗ಼್ೂ ಇದೇ ಮಾತೇ....!" ಒಳಗಿನಿಂದಲೇ ನುಡಿದಳು. ಸ್ವರದಲ್ಲಿ ಗೆಲುವಿತ್ತು.

"ನಿಮ್ಮಪ್ಪ ಗೋಪಾಲಿಗೆ ಕೊಡೋದು ಬೇಡ ಅಂದಾಗ ಯಾಕೆ ಸಪ್ಪೆವಾಗಿ ಹೋಗಿದ್ದಿ, ಸಾವಿತ್ರಮ್ಮ ಪ್ರಶ್ನಿಸಿದರು. ಶಕುಂತಲ ಒಳಗೇ ನಕ್ಕಳು. ಅವಳು ನಕ್ಕೇ ಇರಬೇಕೆಂದು ತೀರ್ಮಾನಿಸಿ ರಾಯರೂ, ಸುಬ್ಬಣ್ಣನೂ ನಕ್ಕರು.

"ರಾಮರಾಯ ನಾಡಿದ್ದು ಸೋಮವಾರ ಬಹುಶಃ ಬರ್‍ತಾನೆ. ಮನ ಸ್ತಾಪ ಬೆಳೀಬಾರ್‍ದು ಬಾ ಅಂತ ನಾನು ಹೇಳ್ದೆ. ಪಾಪ ಅವನೂ ಒಪ್ಪಿ ಕೊಂಡುಬಿಟ್ಟ. ಮೊದ್ಲು ಅವನೂ ನಿನ್ನ ಹಾಗೇ ಮೋಸ ಹೋಗಿದ್ದ. ನಾನು ಅಲ್ಲಿಗೆ ಹೋದ ತಕ್ಷಣ ನನ್ನಮೇಲೆ ಬಾಳ ರೇಗಾಡ್ದ. ನಾನು ನಗ್ತಾನೇ ಇದ್ದೆ. 'ಏನು ಸುಬ್ಬಣ ಬೆಂಗಳೂರಲ್ಲಿ ಯಾವ ಗಂಡನ್ನ ನೋಡಿ ಕೊಟ್ಟೆ....? ಗಂಡಿನೋರು ಎಷ್ಟು ಕೊಟ್ರು....? ಶೀನೂನೇ ಗೊತ್ತುಮಾಡಿ ಕೊಂಡು ಬಂದ್ರಂತೆ....' ಇನ್ನು ಏನೇನೊ ಪ್ರಶ್ನಿಸಿದ. ನಾನು ಅಂತೋನು.... ಇಂತೋನು ಅಂತ ಕೂಗಾಡ್ದ. ನಾನು ಎಲ್ಲಕ್ಕು ಮೌನವಾಗಿಯೇ ನಗ್ತಾ ಇದ್ದೆ. ಅವನಿಗೂ ರಂಗಣ್ಣಗೌಡನೇ ಅಂತೆ ಶೀನಿಯನ್ನು ರಾಯರು ಅಳಿಯನನ್ನಾಗಿ ಮಾಡಿಕೊಂಡು ತಮ್ಮ ಮನೇಲಿ ಇಟ್ಕೊ ಕೊಳ್ತಾರೆ ಅಂತ ಹೇಳಿದ್ದನಂತೆ." ಸುಬ್ಬಣ್ಣ ವಿವರಿಸಿದ.

"ಎರಡು ತಲೆ ಹಾವು ಅವನು. ಎರಡು ದಿನವೂ ನಂಗೆ ಬೆಂಗಳೂ ರಲ್ಲಿ ಸಿಕ್ಕಿದ್ದನಲ್ಲ. ಅದ್ಯಾವಾಗ ಅಲ್ಲಿಗೆ ಹೋಗಿ ಹೇಳ್ದ....!" ರಾಯರಿಗೆ ಆಶ್ಚರ್ಯವಾಗಿತ್ತು.

"ಹೋದ ಭಾನುವಾರ ರಾತ್ರೀನೆ ರಾಮರಾಯರ ಮನೆಗೆ ಹೋಗಿ ಹೇಳಿದನಂತೆ. ನೀನು ಏನೊ ಆಸೆ ಇಟ್ಕೊಂಡಿದ್ದೀಯಲ್ಲಾ ನೋಡು ಏನಾಯ್ತು ಈಗ. ಶೀನಿಗೂ ಶಕುಂತಲೆಗೂ ಮದ್ವೆ ಗೊತ್ತಾಗಿ ಹೋಗಿದೆ. ಇವತ್ತು ಸಾಯಂಕಾಲ ಕಬ್ಬನ್ ಪಾರ್ಕ್‌ಗೆ ವಾಕಿಂಗ್ ಬೇರೆ ಬಂದಿದ್ರು. ರಾಯರು ಇಬ್ಬರನ್ನ ಬಿಟ್ಕೊ ನನ್ನ ಹತ್ರ ಬಹಳಹೊತ್ತು ಮಾತ್ನಾಡ್ತಾ ಇದ್ರು

ನಂಗೆ ಅವರ ಹತ್ರ ಮಾತ್ನಾಡೋಕೆ ಇಷ್ಟವೇ ಇರಲಿಲ್ಲ. ಈ ಮಧ್ಯೆ ವಿಷಯವೇ ಹೇಳಿದ್ರು. ನಾನು ಇದ್ಯಾಕೆ ಸ್ವಾಮಿ ಗೋಪಾಲಂಗೆ ಕೊಡ್ತೀವಿ ಅಂತ ಹಿಂದಿನಿಂದ ಹೇಳ್ತಾ ಇದ್ರಲ್ಲ ಅಂದೆ. ಅದಕ್ಕೆ ರಾಯರು 'ಸರಿ .. ಸರಿ ಅವನಿಗೆ ಕೊಡೋಕೆ ಹೋಗು. ಹಳ್ಳೀಲಿ ಬೆಳೆದಿರೊ ಕಾಡುಮನುಷ್ಯನಿಗೆ....' ಅಂದ್ಯಂತೆ ನೀನು." ಸುಬ್ಬಣ್ಣ ಪ್ರಶ್ನಿಸಿದ.

"ಶಭಾಶ್! ರಂಗಣ್ಣ ಗೌಡ....ಅಸೆಂಬ್ಲಿ ಮೆಂಬರಾದ್ದಕ್ಕು ಸಾರ್ಥಕವಾಯ್ತು!" ರಾಯರು ಅಚ್ಚರಿಗೊಂಡರು. "ನನ್ನಕೈಲಿ ಮಾತ್ನಾಡಿ ಎಂಟೂವರೆ ಗಂಟೆಗೆಲ್ಲಾ ಎಲ್ಲೊ ಹೋಗ್ಬೇಕು ಅಂತ ಕಾರಿನಲ್ಲಿ ಹೊರಟು ಹೋದ. ಆಗ್ಲೆ ಊರಿಗೆ ಹೋಗಿಬಿಟ್ಟ ಅಂತ ಕಾಣುತ್ತೆ....ನಾನು ನಿಮ್ಮಪ್ಪಯ್ಯನ ಕೈಲಿ ಮಾತ್ನಾಡ್ತಾ ಇದ್ದು ಅಲ್ಲೇ ಊಟಮಾಡಿ ಮನೆಗೆ ಹೋದೆ... ರಂಗಣ್ಣ ಊರಿಗೆ ಹೋಗಿ ದೂರು ಹೇಳಿದ್ದಾನೆ..." ರಾಯರು ಹಿಂದಾದುದನ್ನು ಜ್ಞಾಪಿಸಿಕೊಂಡರು.

"ಹೀಗೆ ನಮ್ಮಿಬ್ಬರಿಗೆ ಮನಸ್ತಾಪ ತಂದಿಡೋದ್ರಲ್ಲಿ ಏನಿತ್ತೊ ಲಾಭ ಅವನಿಗೆ....?" ಇದು ಬಗೆಹರಿಯದ ಪ್ರಶ್ನೆಯಾಗಿತ್ತು, ರಾಯರಿಗೆ.

"ಲಾಭ ಇದ್ದೇ ಇರಬೇಕು ಅನ್ನೋದು ವ್ಯಾಪಾರದಲ್ಲಿ. ಇದ್ರಲ್ಲಿ ಇದ್ದೇ ಇರಬೇಕೂ ಅಂತ ಏನಿಲ್ಲ ರಾಯ್ರೆ. ಇಬ್ಬರು ಜಗಳವಾಡ್ತಾ ಇದ್ರೆ ನೋಡೋದ್ರಲ್ಲಿ ಒಂದು ತರಹ ಪ್ರೀತಿ..." ಅಂತಹ ಜನಗಳ ಮನಸ್ಸನ್ನು ಪೂರ್ಣ ಅರಿತಿದ್ದ ಸುಬ್ಬಣ್ಣ ಉತ್ತರ ಕೊಟ್ಟ.

"ಹೋಗ್ಲಿ ಇಷ್ಟರಲ್ಲೆ ಸರಿ ಹೋಯ್ತಲ್ಲ...." ಸೀತಮ್ಮ ಸಮಾಧಾನದ ಬಿಸಿಯುಸಿರನ್ನು ಬಿಟ್ಟಳು.

ಸಾವಿತ್ರಮ್ಮ ಏನನ್ನೊ ಜ್ಞಾಪಿಸಿಗೊಂಡು "ವೆಂಕಣ್ಣಾ" ಅಂದರು. ರಾಯರು ತಾಯಿಯ ಕಡೆಗೆ ತಿರುಗಿ ನೋಡಿದರು.

"ರಾಮರಾಯ ಹೆಣ್ಣು ಕೇಳೋಕೆ ಬರೋದು ಚೆನ್ನಾಗಿರೊಲ್ಲ. ಅದೂ ಅಲ್ದೆ ಸಂಪ್ರದಾಯವೂ ಅಲ್ಲ. ಹೆಣ್ಣೋರು ನಾವು ಹೋಗಿ ಅವರನ್ನು ಕೇಳಬೇಕು. ನೀನೂ ಸೀತಾ ಹೋಗಿ ಮಾತ್ನಾಡಿ ಕೊಂಡು ಬಂದುಬಿಡಿ. ಇನ್ನು ದಿನ ತಳ್ಳೋದು ಚೆನ್ನಾಗಿರಲ್ಲ.. ನಾಳೆ ಹಾಗೂ ಭಾನುವಾರ...." ಅಂದರು ಅಜ್ಜಿ.

"ನಿಂಗೆ ಯಾವಾದ್ರೂ ಜ್ಞಾಪಕಕ್ಕೆ ಬಂದ್ರೆ ಆಗೋಯ್ತು ಆ ತಕ್ಷಣ ಆಗಿಬಿಡಬೇಕು. ಹೊದ್ರಾಯ್ತು ಹೇಳು. ಮಾತಾಡೋದುತಾನೆ ಏನಿದೆ? ನಮ್ಮನೆಹೆಣ್ಣು ತಂದು ಕೊಳ್ಳೋಕೆ ಅವನಿಗೂ ಇಷ್ಟವಿದೆ. ಕೊಡೋಕ್ಕೆ

ನಾವೂ ಒಪ್ಪಿದ್ದಾಗೆ ಆಯ್ತು. ಹುಡಗಿ ಹುಡಗರಿಗೂ ಒಪ್ಗೆ ಇದ್ದೇಯಿದೆ. ಇನ್ನೇನಾಗಬೇಕಾಗಿದೆ. ಹೋಗಿ ಲಗ್ನಪತ್ರಿಕೆ ಒರೆಸೋದು ಒಂದು ತಾನೆ?...." ರಾಯರು ಉತ್ತರವಿತ್ತರು.

"ಇಂಥಾ ಶುಭ ಕೆಲ್ಸಗಳನ್ನ ವೃಥಾ ಮುಂದೆ ತಳ್ಳಬಾರ್ದು. ಶುಭಸ್ಯ ಶೀಘ್ರಂ ಅಂತ ಆಗಿಹೋಗಬೇಕು." ಸುಬ್ಬಣ್ಣನೂ ಸಾವಿತ್ರವ್ವನ ಮಾತಿಗೆ ಧ್ವನಿಗೂಡಿಸಿದ.

"ಸರಿ ಹಾಗೇ ಆಯ್ತು. ನೀವೆಲ್ಲಾ ಒಂದು ನಾನೊಬ್ಬನೇ ಒಂದು —ನನ್ನ ಮಾತು ಎಲ್ಲಿ ನಡೆಯುತ್ತೆ" ರಾಯರು ನುಡಿದರು.

"ಹಾಗೇ ಶಕುಂತಳನ್ನ ಕರಕೊಂಡು ಹೋಗೋದು ಉತ್ತಮ" ಸುಬ್ಬಣ್ಣ ಸೂಚಿಸಿದ. ರಾಯರು, ಸೀತಮ್ಮ, ಸಾವಿತ್ರಮ್ಮ ಎಲ್ಲರೂ ಘೊಳ್ಳನೆ ನಕ್ಕರು. "ಏನು ನಮ್ಮ ಹುಡ್ಗೀನಾ ನೋಡೇ ಇಲ್ವೆ ಗೋಪಾಲ ...?" ರಾಯರು ನಗೆಯಾಡಿದರು.

"ಹಾಗಲ್ಲ ಬೆಳೆದ ಹುಡುಗಿ ಹ್ಯಾಗಿದ್ದಾಳೊ ಅಂತ ನೋಡೋಕೆ ಆಸೆ ಇರಬಹುದು ಗೋಪಾಲಂಗೆ. ಅದೂ ತೀರಿದ ಹಾಗೂ ಆಗುತ್ತೆ. ಸಂಪ್ರದಾಯ ರೀತ್ಯಾ ನಿಷ್ಕರ್ಷೆ ಆಗೋವಾಗ ಹುಡುಗೀನ ಕರಕೊಂಡು ಹೋಗಬೇಕು. ಅದೂ ಅಲ್ದೆ ನಿನ್ನೆ ದಿನ ನಂದೀ ಹಳ್ಳಿನ ನೋಡಿ ಬಾಳ ದಿನ ಆಯ್ತು ಅಂತ ನನ್ನ ಕೈಲಿ ಹೇಳಿದಳು ಶಕುಂತಲ" ಸುಬ್ಬಣ್ಣ ಇನ್ನೂ ಮಾತನ್ನು ಪೂರ್ಣ ಮಾಡಿರಲಿಲ್ಲ. ಅಷ್ಟರಲ್ಲಿ ಇದುವರೆಗೂ ರೂಮಿನಲ್ಲಿ ಪುಸ್ತಕ ಹಿಡಿದು ಇವರ ಮಾತನ್ನು ಕೇಳುತ್ತಿದ್ದ ಶಕುಂತಲ "ನಿನ್ನ ಕೈಲಿ ಹೇಳ್ದೆ ಅಲ್ವಾ ಸುಬ್ಬಣ್ಣ ಮಾವ...." ಒಳಗಿನಿಂದ ಸಿಂಹಣಿಯಂತೆ ಗರ್ಜಿಸಿದಳು.

ಹೊರಗಡೆ ಎಲ್ಲರೂ ನಕ್ಕರು.

ಶಕುಂತಲ ಫಟಾರೆಂದು ಅರ್ಧ ತೆರದಿದ್ದ ರೂಮಿನ ಬಾಗಿಲನ್ನು ಮುಚ್ಚಿಕೊಂಡಳು.

ಶಕುಂತಲಳ ಪರೀಕ್ಷೆ ಹತ್ತಿರವಿದ್ದುದರಿಂದ ಅದನ್ನು ಮುಗಿಸಿಕೊಂಡು ಹೋಗಿ ಬರುವುದೆಂದು ರಾಯರು ಅಭಿಪ್ರಾಯ ಪಟ್ಟರು. ನಾಳೆಯೇ ಹೋಗಿ ಮಾತನಾಡಿಕೊಂಡು ಬರಬೇಕೆಂದೂ, ಬೇಕಾದರೆ ಶಕುಂತಲಳ ಪರೀಕ್ಷೆ ಮುಗಿದ ಮೇಲೆ ಅವಳನ್ನು ಕರೆದುಕೊಂಡು ಹೋಗಿ ಬರಬಹುದೆಂದೂ ಅಜ್ಜಿ ಸುಬ್ಬಣ್ಣ ಹಟಹಿಡಿದರು. ಕೊನೆಗೆ ಮಾರನೆ ದಿನ ರಾಯರೂ ಸುಬ್ಬಣ್ಣ ಹೋಗಿ ಬರುವುದೆಂದು ತೀರ್ಮಾನವಾಯಿತು. ಅಲ್ಲಿಗೆ ಮಾತು ಮುಗಿಸಿ ರಾಯರೂ ಸುಬ್ಬಣ್ಣ ಊಟಕ್ಕೆ ಎದ್ದರು.

ಸಾವಿತ್ರಮ್ಮ ಹಾಯಾಗಿ ಹಾಸಿಗೆಯ ಮೇಲೆ ಮಲಗಿ ಒಂದು ನಿಮಿಷ ದಲ್ಲಿ ಗೊರಕೆ ಹೊಡೆದರು.

ಹಿಂದಿನ ರಾತ್ರಿ ಇಬ್ಬರೇ ಹೋಗಬೇಕೆಂದು ತೀರ್ಮಾನವಾಗಿದ್ದುದು ಬೆಳಗ್ಗೆ ಎದ್ದು ರಾಯರೂ, ಸುಬ್ಬಣ್ಣ ಹೊರೆಡುವ ಹೊತ್ತಿಗೆ "ಸೀತಾನೂ ಹೋಗಿದ್ರೆ ಚೆನ್ನಾಗಿತ್ತು. ಹಾಗೇ ಲಗ್ನಪತ್ರಿಕೇನೂ ಮಾಡಿಸಿಕೊಂಡು ಬರ ಬಹುದಾಗಿತ್ತು." ಸಾವಿತ್ರಮ್ಮನವರು ಸೂಚಿಸಿದರು. ರಾಯರೂ ಇದಕ್ಕೆ ಒಪ್ಪಿದರು. ಸೀತಮ್ಮನೂ ಉತ್ಸುಕಳಾಗಿದ್ದಳು. ಒಂದು ನಿಮಿಷದಲ್ಲಿ ಮೈ ತೊಳೆದು ಬಂದು ಸೀರೆಯನ್ನು ಬದಲಾಯಿಸಿದಳು. ಅಷ್ಟು ಹೊತ್ತಿಗೆ ಸಾವಿತ್ರಮ್ಮನೇ ಕಾಫಿಯನ್ನು ಸಿದ್ಧಪಡಿಸಿದ್ದರು. ಸೀತಮ್ಮ ಗಂಡನಿಗೂ, ಸುಬ್ಬಣ್ಣನಿಗೂ ಕೊಟ್ಟು ತಾನೂ ತೆಗೆದುಕೊಂಡಳು. ಕಾಫಿಯನ್ನು ಕುಡಿ ಯುತ್ತಿದ್ದಾಗ ಇದ್ದಕ್ಕಿದ್ದಂತೆಯೇ ಜ್ಞಾಪಕಕ್ಕೆ ಬಂತು.

"ಮೂರು ಜನ ಆಗ್ತೀವಲ್ಲ....?" ಶಂಕೆಯನ್ನು ವ್ಯಕ್ತಪಡಿಸಿದಳು. ಅಜ್ಜಿ ಇದನ್ನು ಯೋಚಿಸಿಯೇ ಇರಲಿಲ್ಲ. "ಹೌದು ಮೂರು ಜನ ಆಗುತ್ತೆ" ರಾಯರೂ ಈಗ ನುಡಿದರು. ಹೊರಡುವ ಗಡಿಬಿಡಿಯಲ್ಲಿ ಇದು ಹೊಳದೇ ಇರಲಿಲ್ಲ. ಶಕುಂತಲಳಿಗೆ ಪರೀಕ್ಷೆ ಹತ್ತಿರವಿದ್ದುದರಿಂದ ಅವಳು ಹೋಗು ವಂತಿಲ್ಲ. ಸಾವಿತ್ರಮ್ಮನವರಂತು ಶುಭ ಕಾರ್ಯಕ್ಕೆ ಆಗದು.

"ನಾನು ಇಲ್ಲೇ ಇರ್ತೀನಿ. ನೀವು ಹೋಗಿಬನ್ನಿ...." ಸುಬ್ಬಣ್ಣ ನುಡಿದ.

"ನೀನಿಲ್ದೆ ಹೋದ್ರೆ ನಡಿಯೋಲ್ಲ, ಸುಬ್ಬಣ್ಣ. ವೆಂಕಣ್ಣನಿಗೆ ಸರಿ ಯಾಗಿ ಮಾತ್ನಾಡೊಕ್ಕೆ ಬರೊಲ್ಲ. ನೀನಿದ್ರೇ ಸರಿ." ಸಾವಿತ್ರಮ್ಮ ನುಡಿ ದರು.

"ನೀವೇ ಹೋಗಿಬನ್ನಿ...ಹೋಗ್ಲಿ" ಸೀತಮ್ಮ ನುಡಿಯುವಾಗ ಧ್ವನಿ ಕಂಪಿಸುತ್ತಿತ್ತು. ಅಜ್ಜಿ ಸೊಸೆಯನ್ನು ನೋಡಿದರು. ಅವಳ ಮನಸ್ಸಿನ ಆಂಧೋಳಣವನ್ನು ಅರಿತರು. ಆದರೆ ಈಗ ಏನನ್ನೂ ಮಾಡುವಂತಿರಲಿಲ್ಲ. "ಹೋಗ್ಲಿ ಸುಮ್ನಿರಮ್ಮ ಸೀತಮ್ಮ. ಅವರೇ ಹೋಗಿಬರ್ಲಿ. ಇನ್ನೊಂದು ಸಾರಿ ನೀನೂ ನಿನ್ನ ಗಂಡನೂ ಹೋಗಿ ಲಗ್ನಪತ್ರಿಕೆ ಬರ್ಸಿಕೊಂಡು ಬರೋ ವಂತ್ರಿ....ಇವರು ಹೋಗಿ ಎಲ್ಲಾ ಮಾತ್ನಾಡಿಕೊಂಡು ಬರ್ಲಿ..." ಸಾವಿತ್ರಮ್ಮ ಪುನಃ ನುಡಿದರು.

"ಸುಮ್ನೆ ಇದ್ದ ನಿನ್ನನ್ನು ನಾನೇ ಹೊರಡಿಸಿದೆ. ಹಾಳುಮುಂಡೆ ನಂಗೆ ಇಷ್ಟು ಜ್ಞಾಪ್ಕ ಬರಬೇಡ್ವೆ...." ಸಾವಿತ್ರಮ್ಮ ತಮ್ಮನ್ನು ತಾವೇ ಶಪಿಸಿ ಕೊಂಡರು.

"ಈಗ ಆದ್ದು ತಾನೇ ಏನು ಹೇಳಿ. ಸುಮ್ನೆ ಶುಭಕಾರ್ಯಕ್ಕೆ ಹೊರಟಾಗ ನಿಮ್ಮನ್ನೇ ಯಾಕೆ ಬಯ್ಕೊಳ್ತೀರಾ ಸುಮ್ನಿರಿ...." ಸೀತಮ್ಮನೇ ಅತ್ತಿಗೆ ಸಮಾಧಾನವನ್ನು ನುಡಿದಳು.

"ಹೋಗಿ ಎಲ್ಲಾ ಸರಿಯಾಗಿ ಮಾತ್ನಾಡಿಕೊಂಡು ಬಂದುಬಿಡಿ. ಲಗ್ನಾನೂ ನಿಗದಿ ಮಾಡಿಕೊಂಡು ಬಂದುಬಿಡಿ. ಆಮೇಲೆ ವೆಂಕಣ್ಣನೂ ಸೀತಾನೂ ಹೋಗಿ ಲಗ್ನಾ ಕಟ್ಟಿಸಿಕೊಂಡು ಬರ್‍ತಾರೆ...." ಸೀತಮ್ಮ ನುಡಿದರು.

ಸುಬ್ಬಣ್ಣ ರಾಯರು ಬಸ್ ಸ್ಟ್ಯಾಂಡಿನ ಕಡೆ ನಡೆದರು.

ಅಪರೂಪವಾಗಿ ಇದ್ದಕ್ಕಿದ್ದಂತೆಯೇ ಬಂದ ವೆಂಕಟರಾಯರನ್ನೂ ಸುಬ್ಬಣ್ಣನನ್ನೂ ಕಂಡು ಆಶ್ಚರ್ಯವಾದರೂ ತೀರ ಅನಿರೀಕ್ಷಿತವಾಗಿಯೇನೂ ಇರಲಿಲ್ಲ. ಇಬ್ಬರಿಗೂ ಎಲ್ಲಿಲ್ಲದ ಸ್ವಾಗತ ದೊರೆಯಿತು. ಉಪಹಾರವಾದ ಮೇಲೆ ಮಾತನಾಡಬಹುದೆಂದು ರಾಮರಾಯರು ಸೂಚಿಸಿದರೂ ಮದುವೆ ನಿಷ್ಕರ್ಷೆಗಾಗಿ ಬಂದವರು ಉಪಹಾರವನ್ನು ತೆಗೆದುಕೊಳ್ಳಕೂಡದೆಂಬುದು ಸಂಪ್ರದಾಯವೆಂದು ಸುಬ್ಬಣ್ಣ ಹೇಳಿದುದರಿಂದ ಅವರು ಸುಮ್ಮನಾಗಲೇ ಬೇಕಾಯಿತು.

"ರಾಮರಾಯ ಹಿಂದೆ ಆದ ವಿಷಯಾನೆಲ್ಲಾ ಮರ್‍ತುಬಿಡಪ್ಪ...." ರಾಯರೇ ಬಹುವಾಗಿ ಮನಸ್ಸನ್ನು ಬಿಗಿಹಿಡಿದು ನುಡಿದರು.

"ನೀನೂ ಅಷ್ಟೇ ವೆಂಕಣ್ಣ....ಏನೇನೋ ನಿಮ್ಮ ಮನೆಗೆ ಬಂದು ಅಂದುಬಿಟ್ಟೆ ಅಂತ ಕಾಣುತ್ತೆ. ಅದನ್ನೆಲ್ಲಾ ಮರ್‍ತುಬಿಡು. ಅದೊಂದು ವಿಷಗಳಿಗೆ ಏನೇನೋ ಆಗಿಹೋಯ್ತು." ರಾಯರ ಕೈಯನ್ನು ಹಿಡಿದು ಕೊಂಡ ರಾಮರಾಯ.

ಜೋಯಿಸರು ಬಂದರು. ಮದುವೆ ನಿಷ್ಕರ್ಷೆಯಾಗಿ ಹೋಯಿತು. ಜೇಷ್ಠ ಬಹುಳ ತ್ರಯೋದಶಿ ಸೂರ್ಯೋದಯಾದಿ ನಂತರ ೮॥ ಗಳಿಗೆಗೆ ಸಲ್ಲುವ ಶುಭ ಕರ್ಕಾಟಕ ಲಗ್ನದಲ್ಲಿ ಗೋಪಾಲ ಶಕುಂತಲೆಯವರ ವಿವಾಹ ನಡೆಯುವಂತೆ ತೀರ್ಮಾನವಾಗಿಹೋಯಿತು.

ಮದುವೆಯ ಮಾತು ಮುಗಿಯುವ ಹೊತ್ತಿಗೆ ಭರ್ಜರಿ ಊಟ ಸಿದ್ಧವಾಗಿತ್ತು. ಮದುವೆ ಮಾತಿಗಾಗಿ ಬಂದವರು ಊಟ ಮಾಡುವುದು ಸಂಪ್ರದಾಯವಲ್ಲದಿದ್ದರೂ ಮದುವೆ ಮಾತು ಮುಗಿದಮೇಲೆ, ಅದಲ್ಲದೆ ವೆಂಕಟರಾಯರು ಬೇರೆಯವರಲ್ಲದ್ದರಿಂದ ಊಟ ಮಾಡುವುದು ಶಾಸ್ತ್ರವಿರುದ್ಧವಲ್ಲವೆಂದು ಜೋಯಿಸರಿಂದ ರಿಯಾಯಿತಿಯನ್ನು ರಾಮರಾಯರು ದೊರಕಿಸಿ

ಕೊಟ್ಟಿದ್ದರಿಂದ ವೆಂಕಟರಾಯರೂ, ಸುಬ್ಬಣ್ಣನೂ ಊಟವನ್ನು ಮಾಡಲೇ ಬೇಕಾಯಿತು. ಊಟ ಮುಗಿದ ಮೇಲೆ ಸ್ವಲ್ಪ ಹೊತ್ತು ವಿಶ್ರಾಂತಿಯನ್ನು ತೆಗೆದುಕೊಂಡು ಕಾಫಿಯನ್ನು ಸೇವಿಸಿ ಊರಿಗೆ ಸಾಯಂಕಾಲದ ಹೊತ್ತಿಗೆ ಹೊರಟುಬಿಟ್ಟರು.

ಬಸ್ಸಿನ ಹತ್ತಿರ ಇವರನ್ನು ಬಿಟ್ಟು ಬರಲು ರಾಮರಾಯರೂ, ಗೋಪಾಲ ಇಬ್ಬರೂ ಹೊರಟರು. ಆದರೆ ದಾರಿಯಲ್ಲಿ ಯಾರೊ ರಾಮರಾಯರನ್ನು ಮಾತಿನಾಡಿಸುತ್ತ ನಿಲ್ಲಿಸಿಕೊಂಡರು. "ನೀವು ಹೋಗ್ತಾ ಇರ್ರಿ ...ನಾನು ಬರ್ತೀನಿ...." ಹೇಳಿ ನಿಲ್ಲಲೇಬೇಕಾಯಿತು.

ವೆಂಕಟರಾಯರೂ, ಸುಬ್ಬಣ್ಣ ಬಸ್ಸು ಹತ್ತಿದಾಗ ಹಿಂದಿನಿಂದ ರಾಮರಾಯರು ಓಡಿಬರುತ್ತಿದ್ದರು.

"ಬಾರಪ್ಪ ಗೋಪಾಲ ಮನೆಗೆ ...ನೀನಂತೂ ಬಂದು ಎಷ್ಟೋ ದಿನ ಆಗಿಹೋಯ್ತು. ಇಷ್ಟರಲ್ಲೇ ಬಾ." ಅಂದರು ರಾಯರು. "ನಿನ್ನೇ ಜ್ಞಾಪಿಸಿಕೊಳ್ತಾ ಇರ್ತಾಳೆ ಶಕುಂತಲೆ..." ಸುಬ್ಬಣ್ಣ ಸೌಮ್ಯವಾಗಿಯೇ ನುಡಿದರೂ ಗೋಪಾಲನಿಗೆ ನಗು ಬಂದುಬಿಟ್ಟಿತು.

ಬಸ್ಸು ಹೊರಟುಬಿಟ್ಟಿತು. ಹತ್ತು ಮಾರು ದೂರದಲ್ಲಿಯೇ ರಾಮರಾಯರು ಕೈಯನ್ನು ಅಲುಗಾಡಿಸಿ ಸುಖಪ್ರಯಾಣವನ್ನು ಬಯಸಿದರು. ವೆಂಕಟರಾಯರೂ ಕಿಟಕಿಯ ಹೊರಗೆ ಕೈಯನ್ನು ತೂರಿಸಿ ಉತ್ತರವಾಗಿ ಅಲುಗಾಡಿಸಲು ಹೋದಾಗ, ಕಂಡೆಕ್ಟರು ಕಿಟಕಿಯ ಹೊರಗೆ ಕೈಯನ್ನು ತೂರಿಸಬಾರದೆಂದು ಹೇಳಿದುದರಿಂದ ತಲೆಯನ್ನೇ ಅಲುಗಾಡಿಸಿ ಹಲ್ಲು ಕಿರಿದರು.

ಗೋಪಾಲ ಸುಬ್ಬಣ್ಣ ಹೇಳಿದ ಮಾತನ್ನೇ ಮೆಲಕು ಹಾಕುತ್ತಿದ್ದ. ನಗು ಮಾಯವಾಗಿರಲಿಲ್ಲ.

ಬಸ್ಸು ಧೂಳನ್ನು ಎಬ್ಬಿಸಿ ಒಂದು ಕ್ಷಣದಲ್ಲಿ ಕಾಣದಂತಾಯಿತು.

## ೧೧

ರಾಮರಾಯರ ಮನೆಯ ಸಡಗರವನ್ನು ಹೇಳತೀರದು. ಹೆಣ್ಣಿನ ಮನೆಯವರಿಗಿಂತ ಅತಿಯಾಗಿದೆ. ಲಗ್ನ ನಿಷ್ಕರ್ಷೆಯಾದ ಮಾರನೇ ದಿನವೇ ಲಕ್ಷ್ಮೀದೇವಮ್ಮ ತನ್ನ ತಾಯಿಗೆ, ಹಿರೇ ಮಗಳು ಗೌರಿಗೆ ಕಾಗದ ಬರೆಸಿ ಹಾಕಿದರು. ಅವಲಕ್ಕಿಗೆಂದು ಅಂದೇ ಒಂದು ಒಕ್ಕಣ ಭತ್ತವನ್ನು ನೆನೆ ಹಾಕಿದಳು. ಸೊಂಡಿಗೆಗೆಂದು ಬಹಳ ದಿನಗಳಿಂದ ನೆಲುವಿಗೆ ಕಟ್ಟಿದ್ದ ಬೂದಗುಂಬಳಕಾಯನ್ನು ನಿಧಾನವಾಗಿ ಕೆಳಗೆ ಇಳಿಸಿ ಗಂಡ ಬಂದೊಡನೆ

ಒಡೆಸಿದರು. ಭೈರನನ್ನು ಕಳುಹಿಸಿ ಊರಿನ ಪ್ರತಿಯೊಂದು ಮನೆಗೂ ಮುಂದಿನ ಸೋಮವಾರ ಎಲ್ಲರೂ ಭತ್ತವನ್ನು ಕುಟ್ಟಿ ಅಕ್ಕಿಯನ್ನು ಮಾಡಲು ಬರಬೇಕೆಂದು ಹೇಳಿ ಕಳುಹಿಸಿದರು.

ರಾಮರಾಯರ ಮಗನ ಮದುವೆ ಎಂದು ಊರಿಗೇ ಒಂದು ಹೊಸ ಉತ್ಸಾಹ ಬಂದಿತ್ತು. ಹಳ್ಳಿಯ ವಾಡಿಕೆಯಂತೆ ಊರಿನಲ್ಲಿ ಯಾರ ಮನೆಯಲ್ಲಿ ಮದುವೆಯಾದರೂ ಸಾಮೂಹಿಕವಾಗಿ ಸಹಕರಿಸುವುದು ವಾಡಿಕೆ. ಹಪ್ಪಳ ಒತ್ತುವುದಾದರೆ ಮನೆಗೊಬ್ಬಳು ಹೆಂಗಸು ಬಂದು ಹಪ್ಪಳ ಒತ್ತಬೇಕು. ಮೆಣಸಿನ ಪುಡಿ ಕುಟ್ಟಬೇಕು. ಭತ್ತವನ್ನು ಕಟ್ಟಿ ಅಕ್ಕಿಯನ್ನು ಮಾಡಬೇಕು. ಇವಕ್ಕೆ ಎಲ್ಲರೂ ಸಹಕರಿಸಿ ತಮ್ಮ ಮನೆಯ ಕೆಲಸವೆಂದು ಮಾಡುತ್ತಾರೆ. ಬಹಳ ಜನ ಇದೇ ಸಮಯವೆಂದು ಒಂದು ವರ್ಷಕ್ಕೆ ಆಗುವ ಸೌದೆಯನ್ನು ಒಡೆಸಿಕೊಳ್ಳುತ್ತಾರೆ. ಪಲ್ಲಗಟ್ಟಲೆ ಭತ್ತವನ್ನು ಕುಟ್ಟಿಸಿ ಮಾಡಿಸಿ ತುಂಬಿಕೊಳ್ಳುತ್ತಾರೆ.

ಕಾಗದ ತಲುಪಿದ ನಾಲ್ಕೈದು ದಿನಗಳಲ್ಲಿ ಲಕ್ಷ್ಮೀದೇವಮ್ಮನ ತಾಯಿ ಬಂದರು. ಅತ್ತೆಯನ್ನು ಅಂದೇ ವಿಚಾರಿಸಿ ಮದುವೆಗೆ ಬೇಕಾಗುವ ಸಾಮಾನುಗಳನ್ನೆಲ್ಲಾ ಗಾಡಿ ಹೊಡೆಸಿಕೊಂಡು ಹೋಗಿ ತೆಗೆಸಿಕೊಂಡು ಬಂದರು. ನಿಧಾನವಾಗಿ ಆಗಬೇಕಾದ ಹಪ್ಪಳ, ಸೊಂಡಿಗೆ, ಉಪ್ಪಿನಕಾಯಿ, ಶಾವಿಗೆ ಒಂದೊಂದಾಗಿ ಸಿದ್ಧವಾಗತೊಡಗಿದವು.

ರಾಮರಾಯರ ಮನೆಯಲ್ಲಿ ಹಿಂದಿನಿಂದ ನಡೆದು ಬಂದಂತೆ ಯಾವುದಾದರೂ ಶುಭಕಾರ್ಯ ನಡೆಯುವ ಮುನ್ನ ಹೂವೀಳ್ಯ ನಡೆಸುವುದು ಪದ್ಧತಿ. ಆದ್ದರಿಂದ ಹೂವೀಳ್ಯಕ್ಕೆ ಸೀತಮ್ಮನನ್ನು ಆಹ್ವಾನಿಸಬೇಕೆಂದು ಪಾರ್ವತಮ್ಮ, ಲಕ್ಷ್ಮೀದೇವಮ್ಮನ ತಾಯಿ ಅಭಿಪ್ರಾಯ ಪಟ್ಟರು. ಮದುವೆ ಇನ್ನು ಹದಿನೈದು ದಿನಗಳು ಇವೆ ಎನ್ನುವಾಗ ಹೂವೀಳ್ಯವನ್ನು ನಡೆಸುವುದಾಗಿ ತೀರ್ಮಾನಿಸಿ ಅದಕ್ಕಾಗಿ ರಾಮರಾಯರು ತುಮಕೂರಿಗೆ ಸ್ವತಃ ಹೋಗಿ ಆಹ್ವಾನಿಸಿ ಬಂದರು. "ಬರುವಾಗ ಶಕುಂತಲೆಯನ್ನು ಕರೆದುಕೊಂಡು ಬರಬೇಕೆಂದರು ಬಂದರೆ ಉತ್ತಮ. ನಮ್ಮತ್ತೆ ನೋಡಬೇಕು ಅಂತಿದ್ರು" ಎಂದು ಹೇಳಿ ಹೋದರು. ಸಾವಿತ್ರಮ್ಮ ಅನುಮಾನಿಸಿ ಅನುಮಾನಿಸಿ ಆಗಲಿ ಅಂದರು.

ಮದುವೆಯ ದಿನ ಹತ್ತಿರ ಬಂದಂತೆಲ್ಲಾ ರಾಮರಾಯರ ಮನೆ ಬಳಗದಿಂದ ತುಂಬುತ್ತಿತ್ತು.

ವೆಂಕಟರಾಯರ ಮನೆಯ ಸಡಗರವನ್ನಂತೂ ಹೇಳತೀರದು. ಮದುವೆ ಇನ್ನೂ ಹದಿನೈದು ಇರುವಾಗಲೇ ಸಿದ್ಧತೆಗಳೆಲ್ಲಾ ಮುಗಿದಂತಿತ್ತು. ನಾಲ್ಕೇ

ಜನವಿದ್ದ ರಾಯರ ಮನೆಯಿಂದ ಈಗೀಗ ನಲ್ವತ್ತು ಎಲೆಗಳು ಎಂಜಲಾಗಿ ಹೊರಗೆ ತೊಟ್ಟಿಯಲ್ಲಿ ಬೀಳುತ್ತಿದ್ದವು. ಸಾವಿತ್ರಮ್ಮನವರಿಗೆ ಯವ್ವನ ಬಂದಿತ್ತು. ಶಕುಂತಲಳಿಗೆ ಉತ್ಸಾಹವಿದ್ದರೂ ಮೌನಿಯಾಗಿದ್ದಳು.

ರಾಮರಾಯರ ಮನೆಗೆ ಹೂವೀಳ್ಯಕ್ಕೆ ಹೋಗಬೇಕಾಗಿದ್ದ ದಿನದ ಹಿಂದಿನ ರಾತ್ರೆ ಬಹಳ ಹೊತ್ತು ಚರ್ಚೆ ನಡೆಯಿತು. " ಮದುವೆ ಗೊತ್ತಾದ ಮೇಲೆ ಹುಡ್ಗೀನಾ ಯಾಕೆ ಗಂಡಿನ ಮನೆಗೆ ಕರಕೊಂಡು ಹೋಗಬೇಕು....? ಇದು ಅಷ್ಟು ಚೆನ್ನಾಗಿಲ್ಲ." ಮನೆಗೆ ಬಂದಿದ್ದವರಲ್ಲಿ ಯಾರೊ ಅಸಮಾಧಾನ ಸೂಚಿಸಿದರು.

" ಆಡಿಕೊಳ್ಳೋದು ಏನು ಬರ್ಬೇಕು ಇದ್ರಲ್ಲಿ ಲಕ್ಷ್ಮೀದೇವಮ್ಮ ಅಷ್ಟು ವಿಧದಲ್ಲಿ ಹೇಳಿ ಕಳ್ಸಿದ್ದಾಳೆ. ಅದೂ ಅಲ್ದೆ ಶಾಸ್ತ್ರೋಕ್ತವಾಗಿ ಲಗ್ನಪತ್ರಿಕೇನೂ ಇನ್ನು ಮಾಡ್ಸಿಲ್ಲವಲ್ಲ. ಅದೂ ಮಾಡಿಕೊಂಡು ಬಂದ ಹಾಗಾಗುತ್ತೆ. ಲಗ್ನ ಕಟ್ಟಿಸುವಾಗ ಹುಡ್ಗೀನಾ ಕರಕೊಂಡು ಹೋಗೋದು ತಪ್ಪೇನಿಲ್ಲ...." ಸಾವಿತ್ರಮ್ಮ ಅಸಮಾಧಾನ ಸೂಚಿಸಿದ ಬಾಯನ್ನು ಮುಚ್ಚಿಸಿದರು. " ಪಾಪ ಆಸೆ ...ಗಂಡನ್ನ ನೋಡ್ಬೇಕು ಅಂತ....! ಕರಕೊಂಡು ಹೋಗೇ ಅವಳನ್ನು ....ನನ್ನ ಹತ್ರ ಹೇಳಿದ್ಲು....ನಂದೀ ಹಳ್ಳಿಗೆ ಹೋಗ್ತೀನಿ ಅಂತ" ರೂಮಿನಿಂದ ಹೊರಗೆ ಬಂದ ಶಕುಂತಳನ್ನು ನೋಡಿ ನುಡಿದರು ಅಜ್ಜಿ.

" ನಂದೀ ಹಳ್ಳಿಗೆ ಹೋಗ್ಬೇಕು ಅಂತ ನಿನ್ನ ಕೈಲಿ ಹೇಳಿದ್ನೇನಜ್ಜಿ.... ನಾನು...." ಎಲ್ಲಿಲ್ಲದ ಸಿಟ್ಟು ಬಂದಿತ್ತು ಶಕುಂತಲಳಿಗೆ.

" ಅವರ ಮೇಲೆ ಯಾಕೆ ನೀನು ರೇಗೋದು ...?....ನನ್ನ ಹತ್ರ ಹೇಳಿದ್ದು ಸುಳ್ಳೇನೆ....? ನಿನ್ನೆ ರಾತ್ರೆ ..." ಸುಬ್ಬಣ್ಣ ನಗೆಯಾಡಿದ.

" ನಾಕು ಸುಮ್ನಿರು ಸುಬ್ಬಣ್ಣಮಾವ...ನಿನ್ಹತ್ರ ಹೇಳಿಕೊಳ್ಳೋಕೆ ಬಂದಿದ್ದೆ ನಾನು....! ನಂದೀಹಳ್ಳಿಗೆ ಹೋಗ್ಬೇಕು...! ಗೋಪಾಲನ್ನ ನೋಡ್ಬೇಕು ಅಂತ...." ಹೇಳಿ ಪುನಃ ರೂಮಿಗೆ ಓಡಿಹೋದಳು.

ಅಲ್ಲಿದ್ದ ಜನವೆಲ್ಲಾ ನಕ್ಕರು. ನೆನೆದು ನೆನೆದು ಬಹಳ ಹೊತ್ತು ನಗುತ್ತಲೇ ಇದ್ದರು.

ಶಕುಂತಲಳಿಗೆ ಇವರ ನಗು ಬಹು ಹೊತ್ತು ಅರ್ಥವಾಗಲಿಲ್ಲ. ಕೊನೆಗೆ ಅರ್ಥಮಾಡಿಕೊಂಡಾಗ ತುಟಿಗಳ ಮಧ್ಯದಲ್ಲಿ ನಗೆಮಲ್ಲಿಗೆಯೊಂದು ಅರಳಿತು. ಬಹು ಹೊತ್ತು ಬಾಡಲಿಲ್ಲ.

" ಗೋಪಾಲ..." ಭಾವಿಪತಿಯ ಹೆಸರನ್ನು ಹೇಳಿಬಿಟ್ಟಿದ್ದಳು, ಅದೂ

ಏಕವಚನದಲ್ಲಿ ಕೂಗಿದ್ದಳು. ಇದನ್ನು ನೆನೆದಾಗ ನಾಲಿಗೆಯನ್ನು ಕಚ್ಚಿಕೊಂಡಳು.

ಬೆಳಿಗ್ಗೆ ತಾಯಿಯ ಜೊತೆಯಲ್ಲಿ ಶಕುಂತಲಳೂ ಹೋಗುವುದು ತೀರ್ಮಾನವಾಗಿಹೋಯಿತು.

ಮೊದಲನೇ ಬಸ್ಸಿನಲ್ಲೇ ಹೊರಟು ಭೈರಣ್ಣ ತಂದಿದ್ದ ಗಾಡಿಯಲ್ಲಿ ಕುಳಿತು ರಸ್ತೆಯಿಂದ ಮನೆಯನ್ನು ತಲುಪುವ ಹೊತ್ತಿಗೆ ಹತ್ತುಗಂಟೆ ಆಗಿ ಹೋಗಿತ್ತು. ಮನೆಯಲ್ಲಿ ಹೂವೀಳ್ಯದ ಸಿದ್ಧತೆಗಳು ಭರದಿಂದ ನಾಗಿದ್ದವು. ಲಕ್ಷ್ಮೀದೇವಮ್ಮ ಇವರ ಬರುವನ್ನೇ ನಿರೀಕ್ಷಿಸುತ್ತಿದ್ದರು. ಶಕುಂತಲ ಬರುವ ನಂಬಿಕೆ ಗೋಪಾಲನಿಗೆ ಇಲ್ಲದ್ದರಿಂದ ಆತ ಬಹು ಹೊತ್ತಿನ ಮೇಲೆ ಮನೆಗೆ ನಿಧಾನವಾಗಿ ಹಿಂತಿರುಗಿದ. ಶಕುಂತಲ ಮಹಡಿಯ ಮೇಲಿನ ಬಿಸಲು ಮಚ್ಚಿನ ಮೇಲೆ ನಿಂತು ಸುತ್ತಲಿನ ರಮ್ಯ ನಿಸರ್ಗವನ್ನು ನೋಡುವುದರಲ್ಲಿ ತನ್ಮಯಳಾಗಿದ್ದಳು. ದೂರದಲ್ಲಿ ಬರುವಾಗಲೇ ಇವಳನ್ನು ಕಂಡು ಹಿರಿಹಿರಿ ಹಿಗ್ಗಿದ. ಮನೆಯ ಹತ್ತಿರ ಬಂದು ಎತ್ತಲೋ ನೋಡುತ್ತಿದ್ದ ಶಕುಂತಲಳ ದೃಷ್ಟಿಯನ್ನು ತನ್ನತ್ತ ಹರಿಸಲು ಒಮ್ಮೆ ಕೆಮ್ಮಿದ. ಶಕುಂತಲ ಕೆಳಗೆ ನೋಡಿದಳು. ಗೋಪಾಲ ನಗುತ್ತ ನಿಂತಿದ್ದ. ಶಕುಂತಲಳೂ ಒಮ್ಮೆ ತೆಳುವಾಗಿ ನಕ್ಕು ಅನಂತರ ಯಾರಾದರೂ ನೋಡಿಯಾರೆಂದು ಹಿಂದೆ ಸರಿದಳು. ಒಳಕ್ಕೆ ಹೋಗಿ ಹಾಲಿನಲ್ಲಿ ಹಾಸಿದ್ದ ಚಾಪೆಯ ಮೇಲೆ ಸುಮ್ಮನೆ ಕುಳಿತಳು. ಗೋಪಾಲ ಮೇಲೆ ಬರುವನೆಂಬ ನಂಬಿಕೆ ಆಕೆಗೆ ಸಂಪೂರ್ಣವಾಗಿತ್ತು.

ಗೋಪಾಲನೊಡನೆ ವ್ಯವಹರಿಸುವುದು ಹೇಗೆ ಎಂಬುದು ಒಂದು ಸಮಸ್ಯೆ! ಇಲ್ಲಿಯವರೆವಿಗೂ ಎಂದೂ ಈ ಸಮಸ್ಯೆ ಅವಳನ್ನು ಕಾಡಿರಲಿಲ್ಲ.

ಇಂದು ಅವನ ನೆನಪಿನಲ್ಲೆ ಯಾವುದೊ ಮಾದಕವಸ್ತುವಿದೆ ಎನ್ನಿಸಿತು. ಶಕುಂತಲಳಿಗೆ ಎಂದೂ ಆಗದ ಭಾವವಿಕಾರ ಇಂದಾಗಿತ್ತು. ಕಾರಣವಿಲ್ಲದೆ ಹೃದಯದ ಬಡಿತದ ವೇಗ ಹೆಚ್ಚುತ್ತಿತ್ತು. ಮೈ ಪುಳಕಿತಗೊಂಡಿತ್ತು.

ಕಾರಣ ...?!

ತನ್ನಲ್ಲೂ ಏನೂ ಬದಲಾವಣೆಯಾಗಿಲ್ಲ. ಅವನಲ್ಲೂ ಏನೂ ಆಗಿರಲಿಲ್ಲ. ಆದರೆ ಇಂದು ಅವನೊಡನೆ ಮಾತನಾಡಲು ಬಾಯಿ ಮೊದಲಿನಂತೆಯೇ ಸರಾಗವಾಗಿ ನುಡಿಯುತ್ತದೆ ಎಂಬ ಧೈರ್ಯವಿದ್ದರೂ ಮಾತನಾಡಲು ಏಕೊ ಎಲ್ಲಿಲ್ಲದ ನಾಚಿಕೆ ...

ಗಂಡ ...! ಇದೇ ಪದ ನಾಚಿಕೆಗೆ ಕಾರಣವೆ?

....ಉತ್ತರ ಹೊಳೆಯಲಿಲ್ಲ.

" ಬಂದ್ಯಲ್ಲ ಶಕುಂತಲ....! ನೀನು ಬರ್ತೀಯೋ ಇಲ್ವೋ ಅಂತಿದ್ದೆ...." ತೀರ ಸನಿಹದಲ್ಲಿ ನಿಂತು ನುಡಿದ ಗೋಪಾಲ. ನುಡಿದು ಏದು ಉಬ್ಬಸ ಪಡುತ್ತಿದ್ದ.

ತನ್ನಂತೆಯೇ ಅವನೂ ಜೋರಾಗಿ ಉಸಿರಾಡುತ್ತಿದ್ದಾನೆ... ಕಾರಣ! ಎಷ್ಟೋ ಸಾರಿ ಗಂಟೆಗಟ್ಟಲೆ ಮಾತನಾಡಿಲ್ಲವೆ ...?

" ನಿನ್ನ ನೋಡಿ ಬಾಳ ದಿನ ಆಗಿ ಹೋಗಿತ್ತು. ಯಾವಾಗ ನೋಡ್ತೀನೊ ಅಂತಿದ್ದೆ....ಸಧ್ಯ ಬಂದ್ಯಲ್ಲ...." ಹತ್ತಿರ ಬಂದು ಕುಳಿತು ಕೊಂಡ.

ಶಕುಂತಲ ಎದ್ದು ನಿಂತಳು.

ಎದ್ದು ನಿಂತ ಅವಳಿಗೆ ಏತಕ್ಕೆ ಎದ್ದು ನಿಂತೆ ಅನ್ನಿಸಿತು.

" ಕೂತ್ಕೊ ಶಂಕುಂತಳ...."ಗೋಪಾಲ ಬಹು ನಲ್ಮೆಯಿಂದ ಕೂಗಿದ. ಬೆರಳ ತುದಿಯನ್ನು ಹಿಡಿದು ಎಳೆದ.

ಕೂಡಬೇಕೆನ್ನಿಸಿದರೂ ಕೂಡಲಾಗಲಿಲ್ಲ. ಕಣ್ಣಿನ ಕೊನೆಯಲ್ಲಿ ಒಮ್ಮೆ ನೋಡಿದಳು. ನಗಬೇಕೆಂದು ಮನಸ್ಸು ಮಾಡಿಲ್ಲದೆ ಇದ್ದರೂ ತುಟಿ ಗಳು ಅರಳಿದವು. ಕಣ್ಣು ವಿಕಸಿತವಾಗಿತ್ತು.

ಗೋಪಾಲ ಎದ್ದು ನಿಂತ. ಇವಳ ಮುಂದೆ ನಿಂತು ಇವಳ ಮುಖ ವನ್ನೇ ಬಹಳ ಹೊತ್ತು ದಿಟ್ಟಿಸಿದ. ಶಕುಂತಲಳಿಗೆ ಏಕೊ ತಲೆ ಎತ್ತುವ ಧೈರ್ಯ ಬಂದಿರಲಿಲ್ಲ. ಹಲವು ಬಾರಿ ಪ್ರಯತ್ನಿಸಿ ನಿರಾಶಳಾದಳು.

ಶಕುಂತಲಳಿಗೆ ತನ್ನ ಮೇಲೆ ತನಗೇ ಸಿಟ್ಟು ಬರುತ್ತಿತ್ತು.

ಊರಿಗೆ ಬರುವ ಮುನ್ನ ಏನೇನೊ ಮಾತನಾಡಬೇಕೆಂದು ಬಹಳ ಯೋಚಿಸಿದ್ದಳು. ಆದರೆ ಯೋಚನೆಯ ಮೂಲವೇ ಒಣಗಿಹೋಗಿತ್ತು,

" ಅಣ್ಣಂಗೂ, ನಿಮ್ಮ ತಂಪೆಗೂ ಮನಸ್ತಾಪ ಬಂದಿವೆ ಅಂತ ತಿಳಿದು ನಂಗೆ ತುಂಬಾ ಬೇಜಾರು ಆಗಿಹೋಗಿತ್ತು... ಮದ್ವೆ ಆಗುತ್ತೊ ಇಲ್ವೊ ಅಂತ ಬಾಳ ಅನುಮಾನವಾಗಿತ್ತು ಶಕುಂತಲ...." ಇವಳ ಮುಖವನ್ನು ದಿಟ್ಟಿಸುತ್ತಲೇ ಇದ್ದ. ಪಕ್ಕದಲ್ಲಿ ನಿಂತು ಆತ ಬಿಡುತ್ತಿದ್ದ ಬಿಸಿಯುಸಿರು ಶಕುಂತಲೆಯ ಮುಂಗುರುಳನ್ನು ಚಂಚಲಗೊಳಿಸುತ್ತಿತ್ತು.

ಈ ಸಾರಿ ಮಾತನಾಡಬೇಕೆಂದು ಬಹಳ ಧೈರ್ಯ ಮಾಡಿಕೊಂಡು ಇವ ನತ್ತ ತಿರುಗಿದಳು. ತುಟಿಗಳೂ ಚಲಿಸಿದವು. " ನಂಗೂ ಅಷ್ಟೇ ..." ನುಡಿದಿದ್ದೇನೆ ಅಂದುಕೊಂಡಳು. ಆದರೆ ಏನನ್ನೂ ನುಡಿದಿರಲಿಲ್ಲ.

" ನೀನು ಬಹಳ ಚೆನ್ನಾಗಿ ನಗುತ್ತಿ...." ಆತ ನುಡಿದ. ' ನನ್ನ

ಮಾತು ಆವನಿಗೆ ನಗುವೆ !' ಅವಳಿಗೆ ಆಶ್ಚರ್ಯವಾಯಿತು.

ಸ್ವಲ್ಪ ಹೊತ್ತು ನಲ್ಮೆಯ ಮೌನ ಇಬ್ಬರ ಮಧ್ಯೆ ನೆಲಸಿತ್ತು.

ನಾಲಿಗೆಗಿಂತ ಕಣ್ಣು ಸ್ವಲ್ಪ ಧೈರ್ಯಶಾಲಿ ಅನ್ನಿಸಿತು ಅವಳಿಗೆ. ಎರಡು ಮೂರು ಬಾರಿ ಅವನ ಮುಖವನ್ನು ನೋಡಿತ್ತು.

" ನಿನ್ನ ಯಾವಾಗ ನೋಡ್ತೀನೊ ಅನ್ನಿಸಿತ್ತು, ಶಕುಂತಲ....? ನಿನ್ನ ನೋಡಿ ಬಹಳ ದಿನ ಆಗಿಹೋಗಿತ್ತು. ಎಷ್ಟುದ್ದ ಬೆಳೆದು ಬಿಟ್ಟಿದ್ದಿ....! ಮೊದಲಿಗಿಂತ ಸ್ವಲ್ಪ ಕೆಂಪಾಗಿದ್ದಿ....ಏನೊ ಒಂದು ಕಳೆ ಬಂದುಬಿಟ್ಟಿದೆ.... ಬಹಳ ಚೆನ್ನಾಗಿದ್ದಿ ಈಗ..." ಗೋಪಾಲ ಬಹುಹೊತ್ತು ನಿರೀಕ್ಷಿಸಿದ ಫಲ ವಾಗಿ ನುಡಿದ.

" ಗೋಪಾಲನ್ನ ನೋಡ್ಬೇಕು ಅಂತ ನನ್ಹತ್ರ ಹೇಳ್ಳಿಲ್ವೇನೆ...." ಸುಬ್ಬಣ್ಣ ನಗೆಯಾಡಿದ್ದ ಮಾತು ಜ್ಞಾಪಕಕ್ಕೆ ಬಂತು. ಹ್ಞೂ! ನಿನ್ಹತ್ರ ಹೇಳೋಕೆ ಬಂದಿದ್ದೆ....!" ಮುಖ ಸಿಂಡರಿಸಿ ನುಡಿದಿದ್ದಳು.

ಸುಬ್ಬಣ್ಣ ಆಡಿದ್ದ ಮಾತು ಸಂಪೂರ್ಣವಾಗಿ ಸುಳ್ಳಾಗಿದ್ದರೂ ತನ್ನ ಹೃದಯದ ಮಾತೇ ಅದಾಗಿತ್ತು ಅನ್ನಿಸಿತು ಈಗ. " ನೋಡಬೇಕು." ಅಂತ ಹೇಳಬೇಕೆಂದು ಮನುಸ್ಸು ತಳಹಳಿಸಿದ್ದರೂ ಹೇಳಲಾಗಿರಲಿಲ್ಲ. ನಾಲಿಗೆ ಬಿಗಿಹಿಡಿದಿತ್ತು. ಮುಷ್ಕರ ಹೂಡಿತ್ತು. ಇವತ್ತು ಮಾತನಾಡು ವುದಿಲ್ಲವೆಂದು ಪಣತೊಟ್ಟಂತಿದೆ ಮನಸ್ಸಿನ ಭಾವ ಉಕ್ಕಿ ಗಂಟಲಹತ್ತಿರ ಬಂದು ಹಾಗೇ ಹಿಂತಿರುಗಿತು. ಅವಳ ನಾಲಿಗೆಯೂ ಸಹಕಾರಿಯಾಗಿ ಮೌನ ತಾಳಿದ್ದಕ್ಕೆ ಇನ್ನಷ್ಟು ಸಿಟ್ಟು ಬಂತು.

" ನಿನ್ನ ಪಡೆಯೋಕೆ ನಾನು ಪುಣ್ಯ ಮಾಡಿದ್ದೆ....ಶಕುಂತಲ...." ಕೈಯನ್ನು ಹಿಡಿದುಕೊಂಡ.

" ನಾನೂ ಪುಣ್ಯ ಮಾಡಿದ್ದೆ ನಿಮ್ಮನ್ನು ಪಡೆಯೋಕ್ಕೆ." ಅನ್ನಬೇಕೆಂದು ಅನ್ನಿಸಿತು. ಆದರೆ ಅನ್ನಲಿಲ್ಲ.

ಮೌನವಾಗಿ ನಕ್ಕಳು ಮಾತ್ರ

ಗೋಪಾಲ ಏನನ್ನು ಅರ್ಥಮಾಡಿಕೊಂಡನೊ ಏನೊ ಅವನೂ ಜೋರಾಗಿ ನಕ್ಕುಬಿಟ್ಟ.

" ಗೋಪಾಲ ...ಗೋಪಾಲ...." ಕೆಳಗೆ ಲಕ್ಷ್ಮೀದೇವಮ್ಮ ಕೂಗಿದರು. ಗೋಪಾಲನಿಗೆ ಇಳಿದು ಹೋಗಲು ಮನಸ್ಸಿರಲಿಲ್ಲ. ಕೇಳದವನಂತೆ ಹಾಗೆಯೇ ಸುಮ್ಮನೆ ನಿಂತಿದ್ದ.

" ಹೋಗಿ ಮಾಡ್ತಾರೆ .. ನಿಮ್ಮಮ್ಮ...." ಶಕುಂತಲ ನುಡಿದಳು. ಅವಳ

ಬಾಯಿ ನುಡಿದುದನ್ನು ಕಂಡು ಅವಳಿಗೇ ಆಶ್ಚರ್ಯವಾಯಿತು. 'ಹೋಗು' ಎನ್ನುವುದಕ್ಕೆ ಬದಲಾಗಿ 'ಹೋಗಿ' ಅಂದಿದ್ದಳು.

" ಹೂಂ ! ಆಗ಼್ೆ ಗೌರವ ಬಂದುಬಿಟ್ಟಿದೆ...." ಗೋಪಾಲ ನಕ್ಕು ಮನಸ್ಸಿಲ್ಲದೆ ಕಾಲನ್ನು ಎಳೆದುಕೊಂಡು ಕೆಳಗೆ ಇಳಿದು ಹೋದ. ಶಕುಂತಲಳೂ ಅತ್ತಲೇ ತಿರುಗಿ ನೋಡಿದಳು.

" ಹೋಗಿ ಕೂಗ್ತಾರೆ" ಈಗ ತಾನು ಹೇಳಬಾರದಾಗಿತ್ತು ಅನ್ನಿಸಿತು ಶಕುಂತಳಿಗೆ.

" ಏತಕ್ಕೆ ಹೋಗಬಾರದು? ಅವರ ತಾಯಿ ಕೂಗಿದರೆ ಹೋಗಬಾರದೆ?!" ಉತ್ತರ ಹೊಳೆಯಲಿಲ್ಲ. ಅಂತೂ ಹೋಗದೆ ಇನ್ನು ಇದ್ದಿದ್ದರೆ ಚೆನ್ನಾಗಿತ್ತು ಅನ್ನಿಸುತ್ತಿತ್ತು ಅವಳಿಗೆ.

ಏತಕ್ಕೆ ಹಾಗೆನಿಸಿದ್ದು?

ಹಿಂದೆ ಆಡುತ್ತಿದ್ದಾಗ ಹೀಗೆ ಎಂದಾದರೂ ಅನ್ನಿಸಿತ್ತೆ....? ಇಲ್ಲವೆನ್ನಿಸಿತು ಅವಳಿಗೆ.

ಮಾತಾಡಲು ಬಾಯಿ ನುಡಿದಿರಲಿಲ್ಲ .. !

ಹಿಂದೆ ಬೇಕಾದಷ್ಟು ಸಾರಿ ನೋಡಿದ್ದರೂ ಕಣ್ಣು ಕದ್ದು ನೋಡಿತ್ತು....!

ಅವನು ಒಳಗೆ ಇದ್ದಾಗ ಮೈ ರೋಮಾಂಚನಗೊಂಡಿತ್ತು....!

ಅವನು ಹೊರಗೆ ಹೋದಾಗ ಹೋಗಬಾರದೆನಿಸಿತ್ತು....!

ಇವೆಲ್ಲ ಬದಲಾವಣೆಗೆ 'ಕಾರಣ'.... ? ? ?

ಮನಸ್ಸಿನ ಮೂಲೆಯಲ್ಲೆಲ್ಲೊ ಕಲ್ಪನೆ ಮೂಡಿದಾಗ ಕಂಪಿಸಿದಳು.

ಮುಖ ಬೆವರಿತು.

" ಯಾರ ಕೈಲಿ ಮಾತ್ನಾಡ್ತಾ ಇದ್ದೆಯೊ ? ನಾನು ಕೂಗಿದ್ರೂ ಕೇಳ್ಸದಹಾಗೆ....ಹೋಗಿ ತೋಟದಲ್ಲಿ ನಿಮ್ಮ ತಂದೆ ಇರಬಹುದು ಕೂಗಿ ಬಾ ..." ಲಕ್ಷ್ಮೀದೇವಮ್ಮ ನುಡಿದರು.

" ಏನು ಶಕುಂತಲ ಇದ್ದಳೇನೊ ?...." ಪುನಃ ಅನುಮಾನಿಸಿ ಪ್ರಶ್ನಿಸಿದರು. ಗೋಪಾಲ ಉತ್ತರ ಕೊಡದೆ ಹೊರಗೆ ಹೊರಟು ಹೋದ ಶಬ್ದ ಕೇಳಿಸಿತು ಶಕುಂತಲಳಿಗೆ. ತಾಯಿ ಮಾತು ಮುಗಿಸಿದಾಗ ಗೋಪಾಲ ಹುಸಿಯಾಗಿ ನಕ್ಕಿರಬೇಕೆಂದು ಯೋಚಿಸಿದಳು. ಆಗ ಅವಳಿಗೂ ನಗು ಬಂದಿತ್ತು. "ನಾನೊಬ್ಬಳು ಮಂಕು...." ತಾಯಿ ಪುನಃ ಜೋರಾಗಿಯೇ ನುಡಿದರು.

ಹೌದೆನ್ನಿಸಿತು ಇವಳಿಗೆ.

ತಂದೆಯನ್ನು ಕರೆಯಲು ತೋಟಕ್ಕೆ ಹೋದ ಗೋಪಾಲ ಅಲ್ಲಿ ಅವರನ್ನು ಕಾಣದೆ ಕಣಕ್ಕೆ ಹೋಗಬೇಕಾಯಿತು.

"ನೀನು ಇಲ್ಲೇ ಇರು. ನಾನು ಮನೆಗೆ ಹೋಗಿ ಬರ್ತೀನಿ. ಭತ್ತ ಕದ್ದು ಬಿಡ್ತಾರೆ ಸರಿಯಾಗಿ ನೋಡ್ತಾ ಇರು...." ತಂದೆ ನುಡಿದು ಪುನಃ ಅವನತ್ತ ನೋಡದೆ ಹೊರಟು ಹೋದರು. ಗೋಪಾಲನಿಗೆ ಇಂದು ಕೆಲಸದ ಮೇಲ್ವಿಚಾರಣೆಯಲ್ಲಿ ಸ್ವಲ್ಪವೂ ಆಸಕ್ತಿ ಯಿರಲಿಲ್ಲ. ಹಲಸಿನ ಮರದ ಕೆಳಗೆ ಸುಮ್ಮನೆ ಕಾಲು ಚಾಚಿ ದೂರದ ದಿಗಂತವನ್ನು ನೋಡುತ್ತ ಕುಳಿತು ಬಿಟ್ಟ.

ಮನೆಗೆ ಹೋದ ರಾಯರು ಬಹು ಹೊತ್ತಿನ ಮೇಲೆ ಹಿಂತಿರುಗಿದರು.

"ನೀನು ಮನೆಗೆ ಹೋಗು ಗೋಪಾಲ...ಊಟ ಮಾಡಿಕೊಂಡು ಬಾ...ನಾನು ಆಮೇಲೆ ಹೋಗ್ತೀನಿ" ಅಂದರು.

"ನೀನು ಊಟಮಾಡಿಕೊಂಡು ಒಟ್ಟಿಗೇ ಬಂದು ಬಿಟ್ಟಿದ್ರೆ ಚೆನ್ನಾಗಿತ್ತು." ಹಾಗಾಗಿದ್ದರೆ ಬಹು ಹೊತ್ತು ಮನೆಯಲ್ಲಿ ನಿಲ್ಲ ಬಹುದಾಗಿತ್ತಲ್ಲಾ ಎಂಬ ಆಸೆಯಿಂದ ನುಡಿದ.

"ಪಾಪ ನೀನು ಹಸ್ದು ಕೂತಿದ್ದೀಯಲ್ಲಾ....ನೀನೇ ಹೋಗಿ ಊಟ ಮಾಡಿ ಬರ್ಲಿ ಅಂತ ನಾನು ಸ್ವಲ್ಪ ತಿಂಡಿ ತಿಂದು ಬಂದೆ." ತಂದೆ ಮಗನ ಮೇಲಿನ ಪ್ರೀತಿಯಿಂದ ನುಡಿದರು.

ಗೋಪಾಲ ಕಣದ ಹೊರಗಡೆ ಬಿಟ್ಟಿದ್ದ ಚಪ್ಪಲಿಯನ್ನು ಹಾಕಿಕೊಂಡು ಮನೆಯ ಕಡೆಗೆ ವೇಗವಾಗಿ ನಡೆದ.

ಗೋಪಾಲ ಮನೆಗೆ ಬರುವ ಹೊತ್ತಿಗೆ ಎಲೆಯನ್ನು ಹಾಕಿ ನೀರನ್ನು ಇಟ್ಟು ಬಡಿಸುತ್ತಿದ್ದರು. ಕೈಕಾಲು ತೊಳೆದು ಬರುವಷ್ಟರಲ್ಲಿ ಬಡಿಸಿದ್ದುದು ಎಲ್ಲಾ ಪೂರೈಸಿತ್ತು. ಎಲೆಯ ಮುಂದೆ ಕುಳಿತು ನಿಧಾನವಾಗಿ ಊಟ ಮಾಡಿದ. ನಡುಮನೆಯಲ್ಲಿ ಶಕುಂತಲಳೂ ಊಟಕ್ಕೆ ಕುಳಿತಿದ್ದುದರಿಂದ ಅವಾಂತರ ಪಡುವ ಹಾಗೆಯೇ ಇರಲಿಲ್ಲ. ತಂದೆ ಹಸಿದು ಕುಳಿತಿದ್ದಾರೆಂಬುದು ಜ್ಞಾಪಕಕ್ಕೆ ಬಂದರೂ ಬೇರೆ ಮಾತಿನಲ್ಲಿ ಲೀನವಾಗಿ ಅದನ್ನು ಮರೆಯಲು ಯತ್ನಿಸುತ್ತಿದ್ದ. ಊಟದ ಮಧ್ಯದಲ್ಲಿ ಗೋಪಾಲ, ಶಕುಂತಲರ ಮಾತೇ ಪ್ರಾಧಾನ್ಯವಾಗಿಟ್ಟುಕೊಂಡು ಎಲ್ಲರೂ ಮಾತನಾಡುತ್ತಿದ್ದುದರಿಂದ ಹೊತ್ತು ಹೋದುದು ತಿಳಿಯುವ ಹಾಗೇ ಇರಲಿಲ್ಲ. ದಿನಕ್ಕಿಂತಲೂ ಜಾಸ್ತಿಯಾಗಿಯೇ ಹೊಟ್ಟೆಗೆ ಸೇರಿಸಿದ್ದ ಗೋಪಾಲ. ಉಂಡು ಭಾರವಾದ ಹೊಟ್ಟೆಯಲ್ಲಿ ಕಣಕ್ಕೆ ಹೋಗಲು ಮನಸ್ಸಿಲ್ಲದೆ ಇದ್ದರೂ ತಾಯಿ

ಎರಡು ಬಾರಿ ಎಚ್ಚರಿಸಿದ ಮೇಲೆ ಹೋಗಲೇ ಬೇಕಾಯಿತು.

ಕಣಕ್ಕೆ ಹೋದ ಗೋಪಾಲ ಮರದ ಕೆಳಗೆ ಹಾಕಿದ್ದ ಹುಲ್ಲಿನ ರಾಶಿಯ ಮೇಲೆ ಮಲಗಿಬಿಟ್ಟ. ಕಂಠಪೂರ್ತಿಯಾಗಿ ತಿಂದ ದೇಹ ನಿದ್ದೆಯನ್ನು ಬಯಸಿತ್ತು.

ಆಳುಗಳು ಒಕ್ಕಿದ ಭತ್ತವನ್ನು ರಾಶಿ ಮಾಡಿ ಹೊರಟು ಹೋದರು. ಭೈರಣ್ಣ, ಕಣವನ್ನು ಗುಡಿಸಿ ಗುಡ್ಡೆಮಾಡುತ್ತಿದ್ದ. ಕರಿಯಣ್ಣ,—ಇನ್ನೊಬ್ಬ ಆಳು ಅದನ್ನು ತೂರುವ ಮಣೆಯ ಮೇಲೆ ನಿಂತು ತೂರುತ್ತಿದ್ದ. ಕೆಳಗೆ ಇನ್ನೊಬ್ಬ ಕುಳಿತು ಜೊಳ್ಳು ಕಾಳನ್ನು ಪೊರಕೆಯಿಂದ ಗುಡಿಸಿ ಬೇರ್ಪಡಿಸುತ್ತಿದ್ದ.

ಸೂರ್ಯ ಆಗಲೇ ಪಶ್ಚಿಮದಿಗಂತದೆಡೆಗೆ ಸಾರಿ ಕೆಂಪಾಗಿ ನಿಂತಿದ್ದ. ಆಗ ಕಣ್ಣುಜ್ಜಿ ಸುತ್ತಲೂ ನೋಡಿ ಆಕಳಿಸಿ ಮೇಲಕ್ಕೆ ಎದ್ದ ಗೋಪಾಲ.

"ಇದೇನು ಸಾಮಿ. ಇಟ್ಟೊತ್ತು ನಿದ್ದೆಮಾಡಿಬಿಟ್ರಲ್ಲ. ಮದ್ವೆ ಗೊತ್ತಾಗುತ್ಲೆ ಯೋಚ್ನೆ ಎಲ್ಲಾ ಹೋಯ್ತು ಅಂತ ಕಾಣ್ಸುತ್ತೆ...." ಭೈರಣ್ಣ ನಗೆಯಾಡಿದ. "ಸಾಮಿ ನಿಮ್ಮ್ಕಣ್ಣಿಯೋರು ಚೆಂದಾಕವ್ರೆ....ನಾನು ಇವತ್ತು ನೋಡ್ದೆ...." ಕರಿಯಣ್ಣ ನುಡಿದ.

ಗೋಪಾಲ ಹುಸಿಯಾಗಿ ನಕ್ಕ.

ಅವ್ ನೀವು ಇದನ್ನು ತೂರಿದ್ದಾದಮೇಲೆ ಹುಲ್ಲು ಹೊರೆ ಹೊತ್ತುಕೊಂಡು ಮನೆಗೆ ಹೋಗಿ ದನಕರು ಕಟ್ಟಿಹಾಕಿ. ನಾನು ಇಲ್ಲೇ ಇರ್ತೀನಿ...." ಗೋಪಾಲ ಕರಿಯಣ್ಣ ಮತ್ತು ಇನ್ನೊಬ್ಬನಿಗೆ ಆಜ್ಞಾಪಿಸಿದ. ಅವರು ಕಾಳನ್ನು ತೂರಿ ಜೊಳ್ಳನ್ನು ಹೊರಗೆ ಹೊತ್ತುಹಾಕಿ ಒಂದೊಂದು ಹೊರೆ ಹುಲ್ಲನ್ನು ಹೊತ್ತುಕೊಂಡು ಹೊರಟು ಹೋದರು. ಬಾಯಲ್ಲಿ ಒಂದು ಹುಲ್ಲು ಕಡ್ಡಿಯನ್ನು ಕಚ್ಚಿಕೊಂಡು ಅರ್ಧ ಮಲಗಿ ಮರದ ಸಂದಿನಿಂದ ತೂರಿ ಬರುತ್ತಿದ್ದ ಬಿಸಿಲಿಗೆ ತನ್ನ ಕೈಯನ್ನು ಅಡ್ಡ ಹಿಡಿದು ಮರವನ್ನು ದೃಷ್ಟಿಸುತ್ತಿದ್ದ.

ಭೈರಣ್ಣ ಕಣವನ್ನೆಲ್ಲಾ ಗುಡಿಸಿಯಾದಮೇಲೆ ಕೊಂಗನ್ನು ಹಿಡಿದು ಮೇಟಿಯ ಬುಡದಲ್ಲಿದ್ದ ದೊಡ್ಡ ರಾಶಿಗೆ ಬಗ್ಗಿ ಸುತ್ತುಗಟ್ಟಿ ಪೂರ್ವ ದಿಕ್ಕಿಗೆ ಮೂರು ಗೆರೆಯನ್ನು ರಾಶಿಯ ಮೇಲೆ ಎಳೆದು ಕೈಮುಗಿದ. ಹುಲ್ಲನ್ನು ತಂದು ಅದರಸುತ್ತ ಕವಿಚಿದ. ಇನ್ನೂ ನಾಲ್ಕಾರು ಅಲ್ಲಲ್ಲಿ ಅರ್ಧ ಚೊಕ್ಕಟವಾಗಿದ್ದ ರಾಶಿಗಳಿದ್ದವು. ಅವುಗಳಿಗೂ ಹೀಗೆಯೇ ಸುತ್ತು ಕಟ್ಟಿದ. ಕೊಂಗನ್ನು ರಾಗಿಯ ಮೆದೆಯ ಕೆಳಗೆ ಇಟ್ಟು ಬಂದು ಗೋಪಾಲನ ಹತ್ತಿರ ನಿಂತುಕೊಂಡ.

"ಏನು ಸ್ವಾಮಿ ಅಷ್ಟೊಂದು ಯೋಚ್ನೆ ಮಾಡ್ತಾ ಇದ್ದೀರಾ ?" ಪ್ರಶ್ನಿಸಿದ. "ಅಲ್ನೋಡಿ ಸಾಮಿ....ಚಿಕ್ಕಮ್ಮಾವ್ರು ಅಂತ ಕಾಣ್ಸುತ್ತೆ. ಬರ್‍ತಾ ಅವ್ರೆ...." ಬೆಟ್ಟು ಮಾಡಿ ತೋರಿಸಿದ.

ಮನೆಯ ಆಳಾದರೂ ಹಾಸ್ಯ ಮಾಡುವುದು ಅವನ ಪ್ರಕೃತಿಯಾದ್ದರಿಂದ ಅತ್ತ ಗೋಪಾಲ ಗಮನ ಕೊಡಲಿಲ್ಲ.

ವೆಂಕಟರಾಯರ ತಂದೆ ಸತ್ತು ಅವರು ತುಮಕೂರನ್ನು ಸೇರಿದ ಮೇಲೆ ರಾಮರಾಯರ ಊಳಿಗಕ್ಕೆ ಸೇರಿದ ಇವನು ಬಹಳ ಮನಸ್ಸಿಟ್ಟು ಸ್ವಾಮಿ ಭಕ್ತಿಯಿಂದ ಕೆಲಸವನ್ನು ಮಾಡುತ್ತಿದ್ದುದರಿಂದ ಯಾರೂ ಅವನನ್ನು ಆಳೆಂದು ಕೀಳಾಗಿ ಕಾಣುತ್ತಿರಲಿಲ್ಲ. ರಾಮರಾಯರು ಹಿರಿಯವನೆಂಬ ಗೌರವವನ್ನಿಟ್ಟಿದ್ದರು. ಅನೇಕ ವಿಷಯಗಳಲ್ಲಿ ಅವನ ಸಲಹೆಯನ್ನೇ ತೆಗೆದುಕೊಳ್ಳುತ್ತಿದ್ದರು. ಗೋಪಾಲ ಅವನ ಮೇಲೆ ಬಹು ಅಭಿಮಾನವನ್ನಿಟ್ಟಿದ್ದ. ಬಾಲ್ಯದಿಂದಲೂ ಎತ್ತಿ ಆಡಿಸಿದ್ದ ಭೈರಣ್ಣನಿಗೂ ಗೋಪಾಲನನ್ನು ಕಂಡರೆ ಯಜಮಾನರೆಂಬ ಗೌರವವಿದ್ದರೂ ಇದಕ್ಕೆ ಮಿಗಿಲಾಗಿ ಪುತ್ರ ವಾತ್ಸಲ್ಯವಿತ್ತು.

"ಹೂಂ ! ಬರ್‍ತಾಳೆ.?!" ಅನ್ಯಮನಸ್ಕನಾಗಿ ಹೇಳಿದರೂ ಮನಸ್ಸಿನ ಆಸೆ ಓರಗಣ್ಣಿನಲ್ಲಿ ಅತ್ತ ನೋಡುವಂತೆ ಮಾಡಿತು.

"ನಾನು ಮನೆಗೆ ಹೋಗಿ ಉಂಡು ಬರ್‍ತೀನಿ ..... ಅಷ್ಟೋತನ್ಕ ಇರ್‍ತಿರಿತಾನೆ ?" ಉತ್ತರವನ್ನು ನಿರೀಕ್ಷಿಸದೆ ಅಲ್ಲೇ ಕಣದ ಹೊರಗೆ ಹೊಲದಲ್ಲಿ ಕಟ್ಟಿಹಾಕಿದ್ದ ಒಂದು ಜೊತೆ ಹೋರಿಗಳನ್ನು ಹೊಡೆದುಕೊಂಡು ಹೊರಟು ಹೋದ.

ಶಕುಂತಲ ಒಬ್ಬಳೇ ಇತ್ತ ಬರುತ್ತಿದ್ದಳು. ತಿಳಿ ಗಾಳಿ ಸುಳಿಯುತ್ತಿತ್ತು. ಸೂರ್ಯ ಮುಳುಗಿ ಹೋಗಿದ್ದ. ಸಂಜೆಬೆಳಕು ಆಕೆಯ ಮುಖದ ಮೇಲೆ ಚಿತ್ರ ಕಳೆಯಿಂದ ನಲಿಯುತ್ತಿತು. ಹಸಿರು ಪತ್ತಲ ಉಟ್ಟು ಬಳುಕುತ್ತ ಬರುತ್ತಿದ್ದ ಆಕೆ ಅವನ ಭಾಗ್ಯಲಕ್ಷ್ಮಿಯಾಗಿ ಕಂಡಳು.

ನಡಿಗೆಯಲ್ಲಿನ ಗಾಂಭೀರ್ಯಕ್ಕೆ ಆ ಬಳುಕುವಾಟ ಹಿನ್ನೆಲೆಯೊ ಅಥವ ಗಾಳಿಯ ತಿಳಿ ಸುಳಿತದ ಪ್ರತಿಫಲವಾಗಿ ತೆಳವು ದೇಹ ಮಿಡಿಯುತ್ತಿದೆಯೊ ? ಉದ್ಭವಿಸಿದ ಈ ಪ್ರಶ್ನೆ ಅವನನ್ನು ಬಹುವಾಗಿ ಚಂಚಲಗೊಳಿಸಿತು.

ಶಕುಂತಲ ಹತ್ತಿರ ಬಂದು ನಿಂತಳು.

ಮಾತನಾಡದೆ ಅವಳನ್ನು ನುಂಗುವಂತೆ ನೋಡಿದ.

"ಇದೇನು ಎಂದೂ ನೋಡದ ಹಾಗೆ ನೋಡ್ತಾ ಇದ್ದೀರಿ...." ಬಹು

ಧೈರ್ಯವನ್ನು ತಂದುಕೊಂಡು ನುಡಿದಳು. ಬೆಳಗಿನ ಸೋಲು ಈಗಿನ ಜಯವನ್ನಾಗಿ ಮಾರ್ಪಡಿಸಲು ತೀರ್ಮಾನಿಸಿದಳು. ಬೆಳಗ್ಗೆ ಗೋಪಾಲನೇ ಮುಂದಾಗಿ ಮಾತನಾಡಿಸಿದ್ದ. ಈಗ ಶಕುಂತಲಳೇ ಮಾತನಾಡಿಸಿದಳು. ಇನ್ನೂ ಸನಿಹಕ್ಕೆ ಬಂದಳು.

"ಸುಮ್ನಿರು ಶಕುಂತಲ....ಈಗ ಮಾತನಾಡ ಬೇಡ.. ನಾನು ನಿನ್ನ ನೋಡಬೇಕು. ಎಂದೂ ನಿನ್ನನ್ನು ಸರಿಯಾಗಿ ನಾನು ನೋಡಿರಲಿಲ್ಲ...."

ಹುಲ್ಲಿನ ಮೇಲೆ ಸ್ವಲ್ಪ ದೂರದಲ್ಲಿ ಅವಳು ಕುಳಿತುಕೊಂಡಳು.

"ನೋಡಿದ್ದು ಪೂರ್ತಿಯಾಯ್ತೆ...." ಸ್ವಲ್ಪ ಹೊತ್ತಿನ ನಂತರ ಅವಳೇ ಪ್ರಶ್ನಿಸಿದಳು.

"ಇವತ್ತು ಒಂದು ಘಳಿಗೆ ನೋಡಿದ್ರೆ ಎಲ್ಲಿ ತೃಪ್ತಿಯಾಗಬೇಕು ಶಕುಂತಲ. ಆಜೀವ ಪರ್ಯಂತ ನೋಡ್ತಾ ಇದ್ದರೂ ತೃಪ್ತಿ ಲಭಿಸುತ್ತೊ ಇಲ್ವೊ....ಅನುಮಾನ...." ಬಾಯಲ್ಲಿ ಕಚ್ಚುತ್ತಿದ್ದ ಹುಲ್ಲನ್ನು ಎಸೆದು ಬೇರೊಂದು ಹುಲ್ಲನ್ನು ಕಚ್ಚಿಕೊಂಡ.

"ಅದ್ಯಾಕೆ ಏನು ನಾನು ಅಷ್ಟು ಚೆನ್ನಾಗಿದ್ದೀನಾ....?" ಪ್ರಶ್ನಿಸಿದಳು. ಬೆಳಗ್ಗೇನೆ ಇದನ್ನು ಪ್ರಶ್ನಿಸಬೇಕೆಂದಿದ್ದಳು. ಆಗ ಕೇಳಲಾಗಿರಲಿಲ್ಲ.

ತಾನು ಚೆನ್ನಾಗಿದ್ದೇನೆ ಎಂಬ ಆತ್ಮಾಭಿಮಾನ ಸಂಪೂರ್ಣವಾಗಿದ್ದರೂ ಬೇಕೆಂದೇ ಪ್ರಶ್ನಿಸಿದಳು.

"ನಾನು ನಿನ್ನ ಪಡೆಯೋಕ್ಕೆ ಬಾಳ ಪುಣ್ಯ ಮಾಡಿದ್ದೆ...." ಆತ ನುಡಿದ. ಬೆಳಗ್ಗೆಯೂ ನುಡಿದಿದ್ದ. ಗೋಪಾಲನಿಗೂ ಏನು ಮಾತನಾಡಬೇಕೆಂಬುದೇ ತೋಚದಾಗಿತ್ತು. ಹುಲ್ಲಿನ ಮೇಲೆ ಬಿದ್ದಿದ್ದ ಅವಳ ಕೈಯನ್ನು ಹಿಡಿದುಕೊಂಡ.

"ಇದಕ್ಕೂ ಪುಣ್ಯಕ್ಕೂ ಏನು ಸಂಬಂಧ....! ಋಣಾನುಬಂಧವಿತ್ತು. ಮದ್ವೆ ಗೊತ್ತಾಯ್ತು. ನಾನು ಸಿಗ್ದೆ ಇದ್ರೆ ಇನ್ನೊಬ್ಬಳು ಸಿಕ್ತಾ ಇದ್ದಳು." ನುಡಿದು ಒಂದು ಹುಲ್ಲುಕಡ್ಡಿಯನ್ನು ತಾನೂ ಕಚ್ಚಿಕೊಂಡಳು. ಬೆಳಗ್ಗೆ ಮುಷ್ಕರ ಹೂಡಿದ್ದ ಬಾಯಿ ಈಗ ಸಂಪೂರ್ಣವಾಗಿ ಸೋಲನ್ನು ಒಪ್ಪಿಕೊಂಡಿತ್ತು.

"ನನಗೆ ನೀನು ಬೇಕಾಗಿತ್ತೆ ಹೊರತು ಇನ್ಯಾರೂ ಬೇಕಾಗಿರಲಿಲ್ಲ. ಮೊದಲ್ನಿಂದ್ಲೂ ನಿಂದೇ ನಂಗೆ ಹುಚ್ಚು. ಈಗ ಹುಚ್ಚು ಮಿತಿಮೀರಿದೆ. ನೀನು ಒಪ್ದೆ ಹೋಗಿದ್ರೆ....ಮದ್ವೆ ಆಗ್ದೆ ಹೋಗಿದ್ರೆ....? ಆಗ್ದೆ ಹೋಗಿದ್ರೆ....!" ಗೋಪಾಲ ಇಲ್ಲಿಂದ ಮುಂದೆ ಯೋಚಿಸಿರಲಿಲ್ಲ. ಆಗ್ದೆಹೋಗಿದ್ರೆ....??... ?

ಏನಾಗುತ್ತಿದ್ದೆ....? ವಿಕಟವಾದ ಪ್ರಶ್ನೆ. ಈ ಪ್ರಶ್ನೆ ಅವನ ಜೀವನದಲ್ಲಿ ಒಮ್ಮೆ ಮಸುಕಾಗಿ ಸುಳಿದು ಚಂಚಲ ಗೊಳಿಸಿದ್ದರೂ ಬಹು ಬೇಗ ಇತ್ಯರ್ಥ ವಾದುದರಿಂದ ಅವನು ಇದನ್ನು ಯೋಚಿಸಿರಲಿಲ್ಲ.

"ಆಗ್ದೆ....ಹೋಗಿದ್ರೆ....?....ಆಗ್ದೆ ಹೋದ್ರೆ...." ಕಂಪಿಸಿದ ಗೋಪಾಲ

"ಆಗ್ದೆ ಹೋಗಿದ್ರೆ....?!" ಶಕುಂತಲ ನಗುತ್ತ ಪ್ರಶ್ನಿಸಿದಳು. ಆಕೆಯ ಪ್ರಶ್ನೆಯಲ್ಲಿ ಕುತೂಹಲವಿತ್ತು. 'ಮುಂದೂ ಆಗ್ದೆ ಹೋದ್ರೆ?' ಕೆಣಕಿದಳು. ಗೋಪಾಲ ಚಂಗನೆ ಎದ್ದು ಕುಳಿತ. ಅವಳ ಕೈಯನ್ನು ಭದ್ರವಾಗಿ ಹಿಡಿದು ಕೊಂಡ.

"ಸುಮ್ನಿರು....ಶಕುಂತಲ....ಹಾಗೆಲ್ಲಾ ನುಡಿಬೇಡ....ಆಗ್ದೆ ಎಂದೂ ಹೋಗಲ್ಲ...." ನುಡಿದ ಗೋಪಾಲ.

ಶಕುಂತಲ ನಕ್ಕಳು.

"ನೀನು ನನ್ನ ಹೆಂಡ್ತಿ ಆದ್ರೆ ನನ್ನ ಜೀವನ ಸಾರ್ಥಕ ಅಂತ ತಿಳಿದಿದ್ದೆ. ಅದೇ ಸಾರ್ಥಕವಾಯ್ತು...." ಕೆಟ್ಟ ಯೋಚನೆಯನ್ನು ದೂಡಿ ನುಡಿದ ಗೋಪಾಲ.

"ಇನ್ನು....ಎಲ್ಲಿ. ಇನ್ನೂ ಹದಿನೈದು ದಿನಕ್ಕೆ...." ಶಕುಂತಲ ಆಕಾಶ ದತ್ತ ನೋಡಿದಳು. ಚಂದ್ರ ಇದೇತಾನೆ ಆಕಾಶದಲ್ಲಿ ಬೆಳ್ಳಗೆ ಬೆಳ್ಳಿಯಂತೆ ಹೊಳೆಯುತ್ತ ಮೇಲಕ್ಕೆ ಏಳುತ್ತಿದ್ದ.

"ಹೌದು. ..! ಇವತ್ತು ತದಿಗೆ. ಇನ್ನು ಹದಿನೈದು ದಿನಕ್ಕೆ....ಇದೇ ತದಿಗೆ...ಇಷ್ಟು ಹೊತ್ತಿಗಾಗಲೇ...." ಮುಂದಿನ ಸವಿನೆಯ ಕಲ್ಪನೆ ಬಂದು ಮುಖ ಅರಳಿತು. ಹಿಡಿದಿದ್ದ ಕೈಯನ್ನು ಸ್ವಲ್ಪ ಅದುಮಿದ.

ಶಕುಂತಲ ಕೈಯನ್ನು ಕೊಡವಿಕೊಂಡು ಬಿಡಿಸಿಕೊಂಡಳು. ಅವಳ ಮುಖ ಕೆಂಪಾಗಿತ್ತು.

ಸ್ವಲ್ಪ ಹೊತ್ತು ಮೌನ ಆವರಿಸಿತು.

"ಶಕುಂತಲಾ ..." ಕೂಗಿದ ಗೋಪಾಲ.

"ಏನು ..." ತಲೆ ಎತ್ತಿ ಪ್ರಶ್ನಿಸಿದಳು.

"ನಿನಗೆ ನನ್ನ ಮೇಲೆ ಪ್ರೀತಿ ಇದೆಯೇ....? ನನ್ನ ಲಗ್ನವಾಗುವುದು ಇಷ್ಟವಿದೆಯೇ....?"

"..................."

"ಏನು ಹೇಳು ಶಕುಂತಲ." ಅರ್ಧ ಮಲಗಿದ್ದವನು ಸರಿಯಾಗಿ ಎದ್ದು ಕುಳಿತ. ಶಕುಂತಲ ಹುಲ್ಲಿನ ಮೇಲೆ ಕುಳಿತಿದ್ದವಳು ಇವನತ್ತ ನೋಡಿದಳು. ಏನೂ ನುಡಿಯಲಿಲ್ಲ.

"ನಾನು ನಿನ್ನನ್ನು ಆತ್ಮಪೂರ್ವಕವಾಗಿ ಪ್ರೀತಿಸ್ತೇನಿ....ನಿನಗೂ.... ನನ್ನಲ್ಲಿ ಇದೆಯೋ ಹೇಳು....ಶಕುಂತಲ....ಬಲವಂತ ಪ್ರಶ್ನೆಯಲ್ಲ ಇದು.... ಹೇಳು ಶಕುಂತಲ...."

ಉತ್ತರವಾಗಿ ನಕ್ಕಳು ಶಕುಂತಲ. ಒಂದು ಹಿಡಿ ಹುಲ್ಲನ್ನು ಕೈಯಲ್ಲಿ ಹಿಡಿದು ಅವನತ್ತ ಎಸೆದಳು. ಅವನ ಮುಖದ ಮೇಲೆಲ್ಲಾ ಹುಲ್ಲುಬಿತ್ತು. ಗೋಪಾಲ ಹುಲ್ಲನ್ನು ಕೈಯಿಂದ ಸರಿಸಿ ನಕ್ಕ. ಏನೋ ಅರ್ಥವಾಗಿತ್ತು ಅವನಿಗೆ.

ಶಕುಂತಲ ಹುಲ್ಲಿನ ಬಣವೆಯಿಂದ ಕೆಳಗೆ ಇಳಿದಳು. "ಯಾರಾರೂ ನೋಡಿದ್ರೆ ಗಂಡು ಬೀರಿ ಅಂತಾರೆ...." ಬೆಳದಿಂಗಳಿನಲ್ಲಿ ನಾಲ್ಕು ಹೆಜ್ಜೆ ಮುಂದೆ ಹೋಗಿ ಸುತ್ತಲೂ ನೋಡಿದಳು.

"ಎಲ್ಲಿ ಹೋಗ್ತಿಯಾ ಸುಮ್ನಿರು. ನಾನೂ ಬರ್ತೇನಿ. ಭೈರಣ್ಣ ಬರ್‍ಲಿ...." ಮೆದೆಯಿಂದ ಕೆಳಗೆ ಹಾರಿದ. ಹೊರಡುತ್ತೇನೆಂದು ಹೇಳಿದ ಶಕುಂತಲ ಪುನಃ ನೆಲದ ಮೇಲೆ ಕುಳಿತಳು.

ದೂರದಲ್ಲಿ ಲಾಂದ್ರ ಹಿಡಿದು ಭೈರಣ್ಣ ಬರುತ್ತಿದ್ದ.

"ಅಮ್ಮ ಬೈತಾಳೋ ಏನೋ. ನಾನು ಸುಮ್ನೆ ಮನೇಲಿ ಕೂತು ಬೇಜಾರು ಆಯ್ತು ಅಂತ ತೋಟಕ್ಕೆ ಹೋಗಿ ಬರ್‍ತೀನಂತಾ ಹೇಳಿ ಅಲ್ಲಿ ಹೋಗಿ ಸ್ವಲ್ಪ ಹೊತ್ತಿದ್ದೆ. ಬೇಜಾರು ಹೋಗ್ಲಿಲ್ಲ. ಹಾಗೆ ಸುತ್ತಾಡಿ ಕೊಂಡು ಬರೋಣಾ ಅಂತ, ಕಣಾನೂ ನೋಡ್ದಾಗೆ ಆಗುತ್ತೆ ಅಂತ ಬಂದೆ ....ಕಣಾನೇ ನೋಡ್ಲಿಲ್ಲ....ಆಗ್ಲೆ ಕತ್ತಲಾಗಿ ಹೋಯ್ತು...." ಹುಲ್ಲು ಬಣವೆ ಸುತ್ತಿ ಕಣದ ಒಳಗೆ ಬಂದಳು.

ಬೃಹದಾಕಾರ ತಾಳಿ ಸುಮಾರು ಹತ್ತು ಮಾರಿನ ಎರಡು ಮೆದೆಗಳು ಒಂದರ ಪಕ್ಕದಲ್ಲೊಂದು ನಿಂತಿದ್ದವು. ಇವುಗಳನ್ನು ಒಮ್ಮೆ ಸುತ್ತಿದಳು. ಕಣದ ಒಳಗೆ ಅಲ್ಲಲ್ಲಿ ಬಿದ್ದಿದ್ದ ಸಣ್ಣ ರಾಶಿಗಳನ್ನು ನೋಡಿದಳು. ಮೇಟಿಯ ಬಳಿಯಲ್ಲಿ ಬಿದ್ದಿದ್ದ ರಾಶಿಯನ್ನು ನೋಡಿ ಬೆಚ್ಚಿದಳು. ಹುಟ್ಟಿದಂದಿನಿಂದ ಅಷ್ಟು ದೊಡ್ಡ ರಾಶಿಯನ್ನು ನೋಡಿರಲಿಲ್ಲ. "ಎಷ್ಟು ದೊಡ್ಡ ರಾಶಿ....!" ಅಂದಳು ಶಕುಂತಲ.

"ಹಾಗೆಲ್ಲಾ ಅನ್ನಬಾರ್ದು...." ಹೇಳುವಾಗ ಗೋಪಾಲನಿಗೆ ನಿಜ ವಾಗಿಯೂ ಸಿಟ್ಟು ಬಂದಿತ್ತು. "ಅದಕ್ಕೇ ಕಣಕ್ಕೆ ಹೊಸ ಹೆಂಗ್ಸರನ್ನು ಸೇರಿಸೋಲ್ಲ...."

"ಏನು ರಾಶಿ ಕಡೆ ಯಾಗಿಹೋಯ್ತಾ, ಅಷ್ಟೊಂದು ಅನ್ನುತ್ತು?"

ಗೊಪಾಲನಿಗೂ ಇದು ಗೊತ್ತಿತ್ತು ಏನೆಂದರೂ ಇರುವ ರಾಶಿ ಇರುವ ಹಾಗೆಯೆ ಇರುತ್ತೆಂದು. ಆದರೆ ಅಂದು ಬಹಳ ದಿನಗಳ ಹಿಂದೆ ಅವನು ಹೀಗೆಯೇ ನುಡಿದಿದ್ದಾಗ ತಂದೆ ಕಿವಿ ಹಿಂಡಿ ಬೆನ್ನಿನಮೇಲೆ ಹೊಡೆದಿದ್ದರು. ಬಹಳ ದಿನ ಕಣದ ಹತ್ತಿರವೇ ಸೇರಿಸಿರಲಿಲ್ಲ. ಈ ಘಟನೆ ಈಗ ಜ್ಞಾಪಕಕ್ಕೆ ಬಂತು.

"ಧಾನ್ಯಲಕ್ಷ್ಮಿ ಇರ್‍ತಾಳೆ ಇಲ್ಲಿ. ಅವಳಮುಂದೆ ಇಷ್ಟೊಂದು! ದೊಡ್ಡ ರಾಶಿ! ಅಂತ ಅನ್ನಬಾರ್‍ದು." ಹುಸಿಯಾಗಿ ನಗುತ್ತ ಉತ್ತರವಿತ್ತ.

"ಯಾತಕ್ಕೆ ಅನ್ನಬಾರ್‍ದು...." ಪುನಃ ನಕ್ಕು ಪ್ರಶ್ನಿಸಿದಳು.

ಯಾತಕ್ಕೆ ಅನ್ನಬಾರದು? ಇವನಿಗೂ ಗೊತ್ತಿರಲಿಲ್ಲ. ಶಕುಂತಲಳ ಕಿವಿಯನ್ನು ಹಿಂಡಿದ.

ಭೈರಣ್ಣ ದೀಪದೊಡನೆ ಒಳಗೆ ಬಂದ.

"ಮನ್ಗೆ ಹೋಗಿ ಅಮ್ಮಣ್ಣಿ....ನಿಮ್ಮ ಅವ್ವ ಅವ್ರು ಎಲ್ಲಿ ಹೋದ್ಲು ಅಂತ ಹುಡುಕ್ತಾ ಇದ್ರು. ನಾನು ಕಣದ ತಾವೆ ಇರ್‍ಬೋದು ಅಂತ ಅಂದೆ. ಹೋಗಿತಾಯಿ....ಹೋಗಿ ಗೋಪಾಲಪ್ಪ–ನಾನು ಇಲ್ಲೇ ಇರ್‍ತೇನಿ...." ಭೈರಣ್ಣ ನುಡಿದ.

"ಆಗ್ಲೆ ಹೋಗ್ತೀನಿ ಅಂದಳು. ಒಬ್ಬಳೇ ಹೋಗ್ಬೇಕಲ್ಲ ಅಂತ ನೀನು ಬರ್‍ಲಿ ಇಬ್ಬರೂ ಹೋಗೋಣಾ ಅಂದೆ....ಕಣದಕಡೆ ಜೋಪಾನ. ನಾವು....ಬರ್‍ತೇವಿ...." ಇಬ್ಬರೂ ಮನೆಯಕಡೆ ಹೊರಟರು.

ಭೈರಣ್ಣ ಬೆಳದಿಂಗಳ ಬೆಳಕು ಸಾಲದೆಂಬಂತೆ ಲಾಂದ್ರವನ್ನು ಎತ್ತಿ ಹಿಡಿದ. "ಅಮ್ಮಣ್ಣಿಯೋರ ಕಾಲ್ನಲ್ಲಿ ಎಕ್ಕಡಾನೂ ಇಲ್ಲ...ಮುಳ್ಳು ಚುಚ್ಚ್ಯಾವು..." ಎಚ್ಚರಿಸಿದ.

"ಭೈರಣ್ಣ ಒಳ್ಳೆ ಮನುಷ್ಯ" ಶಕುಂತಲ ನುಡಿದಳು. ಗೋಪಾಲ ನಕ್ಕ.

ಮನೆಯ ಬಾಗಿಲಿಗೆ ಬಂದಾಗ ಸೀತಮ್ಮ, ಲಕ್ಷ್ಮೀದೇವಮ್ಮ ಇಬ್ಬರೂ ನಿಂತಿದ್ದರೂ ಯಾರೂ ಏನೂ ಹೇಳಲಿಲ್ಲ. ಒಬ್ಬರ ಮುಖವನ್ನೊಬ್ಬರು ನೋಡಿ ನಕ್ಕರು ಮಾತ್ರ.

"ಕೈಕಾಲು ತೊಳಕೊಂಡು ಹೋಗಿ ಊಟಮಾಡಿ." ಲಕ್ಷ್ಮೀದೇವಮ್ಮ ನುಡಿದರು.

"ಅಮ್ಮಾ ಕಣದ ಹತ್ರ ಹೋಗಿದ್ದೆ, ನಾನು ನೋಡೇ ಇರಲಿಲ್ಲ. ಬೆಟ್ಟದ ಹಾಗೆ ರಾಗಿ ಮೆದೆ ಬಿದ್ದಿದೆ. ಕಣದ ತುಂಬಾ ಮನೆ ಗಾತ್ರದ

ಭತ್ತದ ರಾಶಿ....!" ಶಕುಂತಲ ಇನ್ನೂ ಹೇಳುವುದರಲ್ಲಿದ್ದಳು.

"ಇವಳ್ಗೆ ಏನೂ ಗೊತ್ತಾಗಲ್ಲ ಅತ್ತೆ....ಅಲ್ಲಿ ಬಂದು ಎಷ್ಟು ದೊಡ್ಡ ರಾಶಿ! ಅಂತಾಳೆ—ಅನ್ನಬಾರ್ದು ಅಂದ್ರೆ, ಅಂದ್ರೆ ಏನಾಗುತ್ತೆ ಅಂತ ಪ್ರಶ್ನಿಸ್ತಾಳೆ." ಒಳಗೆ ಹೋಗುತ್ತಿದ್ದವನು ಬಾಗಿಲ ಬಳಿಯಲ್ಲಿ ನಿಂತು ನುಡಿದ.

"ಹಾಗೆಲ್ಲಾ ನುಡಿಬಾರ್ದು....ಪಾಪ! ಗೊತ್ತಿಲ್ಲ." ಲಕ್ಷ್ಮೀದೇವಮ್ಮ ಬಡಿಸಲು ಅಡಿಗೆ ಮನೆಯೊಳಗೆ ಹೋದರು. "ಬಾಮ್ಮ....ಎಲೆ ಹಾಕ್ತೀನಿ...." ಹೋಗುತ್ತ ಪುನಃ ಕರೆದರು.

"ನಿಂಮ ಊಟ ಆಯ್ತೇನಮ್ಮ...." ಶಕುಂತಲ ತಾಯನ್ನ ಪ್ರಶ್ನಿಸಿ ಕಾಲನ್ನು ತೊಳೆಯಲು ಒಳಗೆ ಹೊರಟಳು. "ಇಲ್ಲ....ನಾನೂ ಬರ್ತೀನಿ.... ನೀನು ನಡೆ ಒಳಗೆ." ತಾಯಿ ನುಡಿದು ಮಡಿ ಉಟ್ಟುಕೊಂಡು ಬರಲು ಹೋದಳು.

"ಬೀಗಿತ್ತಿ ಜೊತೇಲಿ ನೀನೂ ಕೂತ್ಕೊ ಇವತ್ತಾದ್ರೂ...." ಲಕ್ಷ್ಮೀದೇವಮ್ಮನನ್ನು ಬಡಿಸಲು ಬಿಡದೆ ಅವಳನ್ನು ಎಲೆ ಹಾಕಿ ಕೂಡಿಸಿ ಅವರ ತಾಯಿಯೇ ಬಡಿಸಿದರು.

"ನಾಳೆ ಹೊರಡ್ತೇವೆ. ಬೇಕಾದಷ್ಟು ಕೆಲ್ಸ ಬಿದ್ದಿದೆ. ಇನ್ನೂ ಒಂದಾದ್ರೂ ಒಂದು ಮದ್ವೆ ಸಾಮಾನು ಆಗೇ ಇಲ್ಲ...."ಸೀತಮ್ಮ ಹೊರಡುವ ಮಾತು ತೆಗೆದಳು.

ಲಕ್ಷ್ಮೀದೇವಮ್ಮ ಅವರ ತಾಯಿ ಇನ್ನೂ ಒಂದೆರಡು ದಿನ ಇದ್ದು ಹೋಗಿರೆಂದು ಬಹಳ ಹೇಳಿದರು.

ಸೀತಮ್ಮ ಇರಲು ಸಾಧ್ಯವಿಲ್ಲದ ಅನೇಕ ಅನಿವಾರ್ಯಗಳನ್ನು ಹೇಳಿದಳು. ಇದರಲ್ಲಿ ತನಗೆ ಸಂಬಂಧ ಇಲ್ಲವೆಂಬಂತೆ ಊಟ ಮುಗಿದಿದ್ದರೂ ಸುಮ್ಮನೆ ಕುಳಿತಿದ್ದಳು ಶಕುಂತಲ. ಗೋಪಾಲ ಮಧ್ಯದಲ್ಲಿ ನುಡಿಯುವ ಧೈರ್ಯ ಮಾಡದೇ ಇದ್ದರೂ ತೀರ್ಮಾನ ಏನು ಆಗುತ್ತೊ ಅಂತ ಉಂಡ ಎಲೆಯನ್ನು ಬಳಿದು ನಾಲಿಗೆಗೆ ಸೊರೆದುಕೊಳ್ಳುತ್ತಿದ್ದ.

"ಹೋಗ್ಲಿ ನಾಳೆ ಮಧ್ಯಾನ್ಹ ಊಟ ಮಾಡಿಕೊಂಡು ಹೋಗಿ ಬನ್ನಿ.... ಪಾಪ ನಿಮಗೂ ಕೆಲ್ಸ ಇದೆ ಒಪ್ಪಿಕೊಳ್ತೀನಿ...." ಲಕ್ಷ್ಮೀದೇವಮ್ಮ ನುಡಿದ ಮೇಲೆ ಇದಕ್ಕೆ ಪ್ರತಿಯಾಗಿ ಸೀತಮ್ಮ ನುಡಿದಳು.

"ಮಾತೆಲ್ಲಾ ಮುಗಿದಿದೆ. ಇನ್ನೇನು ಲಗ್ನಪತ್ರಿಕೇನಾ ಯಾವಾಗ ಬರ್ಸಿದರೂ ಆಯ್ತು...." ಲಕ್ಷ್ಮೀದೇವಮ್ಮನೇ ಪುನಃ ನುಡಿದಳು. ಬೆಳಿಗ್ಗೆ ರಾಮರಾಯರೂ ಇದೇ ಅಭಿಪ್ರಾಯವನ್ನು ಸೂಚಿಸಿದ್ದರು. "ಶಾಸ್ತ್ರದ

ಲಗ್ನಪತ್ರಿಕೆ ತಾನೇ....? ಬರ್ಸಿದ್ರೆ ಆಯ್ತು. ನಂಗೂ ಈಗ ಪುರಸೊತ್ತಿಲ್ಲ. ಕಣದ ಕೆಲ್ಸ ಒಂದು ಹೊರೆ ಬಿದ್ದಿದೆ....ಮದ್ವೆ ಹಿಂದಿನ ದಿನವೇ ಬರೆಸಿದ ಶಾಸ್ತ್ರ ಮಾಡಿದರಾಯ್ತು. ಅದ್ರಿಂದ ಏನೂ ಕೆಲ್ಸ ನಿಂತುಹೋಗಲ್ವಲ್ಲ...." ರಾಮರಾಯರು ಹೆಂಡತಿಯ ಹತ್ತಿರ ಇದನ್ನು ನುಡಿಯುತ್ತಿದ್ದಾಗ ನಡುಮನೆ ಯಲ್ಲಿದ್ದ ಸೀತಮ್ಮನೂ ಕೇಳಿಸಿಕೊಂಡಿದ್ದಳು. ಆದರಿಂದ ಪುನಃ ಈ ಮಾತನ್ನು ಆಕೆಯೂ ಎತ್ತಲಿಲ್ಲ. ಅವಳಿಗೂ ಹಾಗೆಯೇ ಆದರಾಯ್ತು ಅನ್ನಿಸಿತ್ತು.

ಮಾರನೆ ದಿನ ಔತಣದ ಊಟವನ್ನು ತೀರಿಸಿಕೊಂಡು ಸೀತಮ್ಮ ಶಕುಂತಲ ಹೊರಟು ನಿಂತರು. ಲಕ್ಷ್ಮೀದೇವಮ್ಮ ತೆಂಗಿನಕಾಯನ್ನು ಇಟ್ಟು ಅಡಕೆಲೆ ಕೊಡಲು ಉಗ್ರಾಣಕ್ಕೆ ಹೋಗಿ ನೋಡಿದಾಗ ತೆಂಗಿನಕಾಯಿ ಮುಗಿದುಹೋಗಿತ್ತು.

ರಾಮರಾಯರು ಭೈರನಿಗೆ ಗಾಡಿಯನ್ನು ಸಿದ್ಧಪಡಿಸಲು ಆಜ್ಞಾಪಿಸಿ, ಮಗನಿಗೆ ರಸ್ತೆಯ ವರೆವಿಗೂ ಹೋಗಿ ಕಳುಹಿಸಿ ಬರುವಂತೆ ಹೇಳಿ ಕಣದ ಹತ್ತಿರಕ್ಕೆ ಹೊರಟುಹೋಗಿದ್ದರು.

ಸೀತಮ್ಮ ಊರಿಗೆ ಹೊರಡಲು ಬೇರೆ ಸೀರೆ ಉಟ್ಟು ಸಿದ್ಧವಾಗು ತ್ತಿದ್ದಳು.

"ಲೇ! ಗೋಪಾಲ" ತಾಯಿ ಕರೆದರು.

"ಏನಮ್ಮ" ಅಂದ ಗೋಪಾಲ "ನೋಡು ಗೋಪಾಲ. ನಾಲ್ಕು ತೆಂಗಿನ ಕಾಯಿ ಬೇಕು. ಒಳಗೆ ಒಂದಾದ್ರೂ ಇಲ್ಲ. ತೋಟದಲ್ಲಿ ಯಾರಾದ್ರೂ ಇದ್ರೆ ಕೀಳ್ಸಿಕೊಂಡು ಬಾ ಹೋಗು...." ಲಕ್ಷ್ಮೀದೇವಮ್ಮ ಹೇಳಿದರು.

"ಯಾರಿದ್ದಾರೆ ಈಗ? ಎಲ್ಲಾ ಕಣಕ್ಕೆ ಹೋಗಿದ್ದಾರೆ. ಭೈರಣ್ಣ ಒಬ್ಬ ಗಾಡಿಗೆ ಹುಲ್ಲು ಹಾಕಿ ಸಿದ್ಧಮಾಡ್ತಾ ಇದ್ದಾನೆ....ನಾನೇ ಕೀಳ ಬೇಕು ಅಷ್ಟೆ...." ಗೋಪಾಲ ನುಡಿದ.

"ಭೈರಣ್ಣನಿಗೆ ಎಲ್ಲಾರೂ ರೋಟಿಗಳ ತಂದು ನಾಲ್ಕು ತೆಂಗಿನಕಾಯಿ ಕೀಳು ಅನ್ನು."

"ಈ ಅವಾಂತ್ರದಲ್ಲಿ ರೋಟಿಗೆ ಊರೆಲ್ಲಾ ಅಲೆಸು? ಊರಲ್ಲಿ ಯಾರಿ ದ್ದಾರೆ....ಎಲ್ಲಾ ಕಣಕ್ಕೆ ಹೋಗಿರ್ತಾರೆ. ನಾನೇ ಹತ್ತಿ ಕೀಳ್ತೇನಿ" ಶಕುಂತಲ ಎದುರಿಗಿದ್ದುದರಿಂದ ತನಗೆ ಮರ ಹತ್ತುವುದೂ ಬರುತ್ತದೆ ಎಂಬುದನ್ನು ತೋರಿಸಬೇಕೆಂಬ ಆಸೆಯಿಂದ ನುಡಿದ.

"ಏನುಮಹಾ! ತೆಂಗಿನ ಮರ ಹತ್ತದೆ. ನಮ್ಮ ಪಕ್ಕದ ಮನೆ

ನಾಣಿ ಹತ್ತು ವರ್ಷ ಒಳ್ಳೆ ಕೋತಿ ಹತ್ತಿದ್ಹಾಗೆ ಹತ್ತಿ ಚಂಗ್ ಅಂತ ಗರಿಯಿಂದ ಗರಿಗೆ ಹಾರಾಡ್ತಾನೆ ...” ಶಕುಂತಲ ನುಡಿದಳು.

ತಕ್ಷಣವೇ ನುಡಿಯಬಾರದಾಗಿತ್ತು ಎನ್ನಿಸಿತು ಅವಳ ಮನಸ್ಸಿಗೆ.

“ನಮ್ಮ ಗೋಪಾಲ ಯಾವ ಮರ ಬೇಕಾದ್ರೂ ಒಂದು ಕ್ಷಣಕ್ಕೆ ಹತ್ತಿಬಿಡ್ತಾನೆ....” ತಾಯಿ ಹೆಮ್ಮೆಯಿಂದ ನುಡಿದರು.

“ನಮ್ಮ ಶಕುಂತಲ ನೋಡಿ ಲಕ್ಷ್ಮೀದೇವಮ್ಮ ತುಮಕೂರಿನಲ್ಲಿ ಸಂಪಿಗೇ ಮರಾನ ಒಂದು ಕ್ಷಣದಲ್ಲಿ ಹತ್ತಿ ಸುಳೀಲಿರೊ ಹೂವನ್ನು ಕಿತ್ತುಬಿಡ್ತಾಳೆ. ಹೂವು ಅಂದ್ರೆ ಏನು ಆಸೇನೊಅವಳ್ಗೆ.” ಮಗಳ ವಿಷಯವನ್ನು ಹೇಳದೆ ಇದ್ದರೆ ಗೌರವಕ್ಕೆ ಕುಂದೆಂದು ನುಡಿದಳು.

“ಯಾರನ್ನೂ ಕರೆಯೋದು ಬೇಡ....ಏನೂ ಬೇಡ. ಇನ್ನೊಂದು ಕ್ಷಣದಲ್ಲಿ ನಾನೇ ಕಿತ್ತುಕೊಂಡು ಬರ್ತೀನಿ ...” ಉತ್ಸಾಹದಿಂದ ಶಕುಂತಲಳ ಕಡೆಗೊಮ್ಮೆ ನೋಡಿ ಹೊರಗೆ ಹೊರಟ.

“ತೋಟಿಲೇ ಕೇಳೊ ...ಸುಮ್ನೆಯಾಕೆ ಮರ ಹತ್ತುತ್ತಿ.... ಜೋಪಾನ ಕಣೋ....” ತಾಯಿ ಎಚ್ಚರಿಸಿದರು.

ಗೋಪಾಲ ಹುಸಿಯಾಗಿ ನಕ್ಕ.

“ನಾನೂ ಹೋಗಿ ಹೂವು ಕಿತ್ತುಕೊಂಡು ಬರ್ತೀನಿ” ಶಕುಂತಲ ನುಡಿದು ಹಿಂದೆ ಹೊರಟಳು. ಸೀತಮ್ಮ ಲಕ್ಷ್ಮೀದೇವಮ್ಮ ಇಬ್ಬರೂ ಕಿಸಿಕಿಸನೆ ನಕ್ಕರು.

“ಯಾವುದಾದ್ರೂ ಕೆಲ್ಸಕ್ಕೆ ಹೊರಟಾಗ ಹಾಗೆಲ್ಲಾ ಅನ್ನಬಾರದು.” ಲಕ್ಷ್ಮೀದೇವಮ್ಮನ ತಾಯಿ ನುಡಿದರು.

“ಏನು ಸಾಮಿ ಅಮ್ಮಾವ್ರಿಗೆ ಹೂವು ಕಿತ್ತು ಕೊಡೋಕೆ ಹೋಗ್ತಾ ಇದ್ದೀರಾ....?” ಹೊರಗಡೆ ಭೈರಣ್ಣ ಗೋಪಾಲನನ್ನು ಪ್ರಶ್ನಿಸಿದ. “ಇಲ್ಲ ಭೈರಣ್ಣ. ಅಮ್ಮನಿಗೆ ತೆಂಗಿನ ಕಾಯಿ ಬೇಕಂತೆ ಕಿತ್ತುಕೊಂಡು ಬರ್ತೀನಿ.” ಹಿಂದೆ ತಿರುಗಿ ನೋಡದೆ ಹೊರಟುಬಿಟ್ಟ. “ರೋಟಿ ಗಳಾ ತರ್ಲಾ ?” ಪ್ರಶ್ನಿಸಿದ ಭೈರಣ್ಣ.

ಗೋಪಾಲ ಬೇಡವೆಂದು ಕೈಯನ್ನಾಡಿಸಿದ.

ಗೋಪಾಲ ಬೇಡವೆಂದರೂ ಭೈರಣ್ಣ ಕಲ್ಲೆ ಗೌಡರ ಮನೆಯಿಂದ ರೋಟಿಯನ್ನು ತೆಗೆದುಕೊಂಡು ತೋಟಕ್ಕೆ ಬರುವಲ್ಲಿ ಗೋಪಾಲ ಒಂದು ದೊಡ್ಡ ತೆಂಗಿನ ಮರವನ್ನು ಹತ್ತುತಿದ್ದ. ಶಕುಂತಲ ಮರದ ಕೆಳಗೆ ನಿಂತು ಮೇಲೆ ಮುಖ ಎತ್ತಿ ಅವನು ಹತ್ತುವುದನ್ನೇ ನೋಡುತ್ತ ನಿಂತುಕೊಂಡಿ

ದ್ದಳು. ಭೈರಣ್ಣನೂ ಸುಮ್ಮನೆ ನೋಡುತ್ತ ನಿಂತುಕೊಂಡ.

"ನೋಡಿ ಅಮ್ಮಾವ್ರೆ ಐನೋರು ಹ್ಯಂಗೆ ಮರ ಹತ್ತಾರೆ...." ಭೈರಣ್ಣ ಹೊಗಳಿದ.

ಶಕುಂತಲಳ ತೆಳವು ತುಟಿಗಳು ಸ್ವಲ್ಪ ಬಿರಿದು ಬಿಳಿಯ ಹಲ್ಲುಗಳು ಕಂಡವು.

ಗೋಪಾಲ ಇಷ್ಟು ಹೊತ್ತಿಗೆ ಬಹು ಮೇಲೆ ಏರಿ ಹೋಗಿದ್ದ. ತಾನು ಮರದ ಶಿಖರವನ್ನು ತಲುಪಿದೆ ಎಂದು ಶಕುಂತಲೆಗೆ ತಿಳಿಸಲು ಒಣಗಿ ನಿಂತಿದ್ದ ಒಂದು ಹೆಡೆಮಟ್ಟೆಯನ್ನು ಕಿತ್ತು ಹಾಕಿದ. ಕಾಲಲ್ಲಿ ಮರವನ್ನು ಕಚ್ಚಿಕೊಂಡು ಇನ್ನೊಂದು ಕೈಯಲ್ಲಿ ಒಂದು ಗರಿಯನ್ನು ಭದ್ರವಾಗಿ ಹಿಡಿದು ನೀಳವಾಗಿ ಇಳಿಬಿದ್ದಿದ್ದ ಒಂದು ಗೊನೆಯಲ್ಲಿ ಕೆಳಗಿನ ಐದಾರು ಕಾಯಿಗಳನ್ನು ಕಿತ್ತು ಹಾಕಿದ.

ಗರಿಯನ್ನು ಹಿಡಿದಿದ್ದ ಕೈಯಮೇಲೆ ಇಲಿ ಓಡಿತು.

ಇನ್ನೊಂದು ಕೈಯಲ್ಲಿ ಗುದಿಯಲ್ಲಿನ ಒಂದು ಕಾಯನ್ನು ಹಿಡಿದಿದ್ದ.

ಇಲಿ ಓಡಾಡಲು ಗಾಭರಿಯಿಂದ ಅನೈಚ್ಛಕವಾಗಿ ಗರಿಯ ದಂಡಿನಿಂದ ಕೈ ಜಾರಿ ಗರಿಯಮೇಲೆ ಬಿದ್ದು ಕೆಳಗೆ ಇಳಿಯಿತು.

ಮರ ಹಿಡಿದಿದ್ದ ಕಾಲು ಆಯ ತಪ್ಪಿ ಅತ್ತ ಸರಿಯಿತು. ಕೈಯಲ್ಲಿ ಕಾಯನ್ನು ಹಿಡಿದಿದ್ದವನು ಹಾಗೆಯೇ ಇಳೀ ಬಿದ್ದ.

"ಅಯ್ಯೋ...." ಕಿರಚಿದಳು ಶಕುಂತಲ.

ಕಾಯಿ ಭಾರಕ್ಕೆ ತೊಟ್ಟು ಕಳಚಿತು.

"ಅಯ್ಯೋ ....! ಶಕುಂತಲ ...!" ಅರಚಿ ಕೆಳಗೆ ಬಿದ್ದುಬಿಟ್ಟ.

ಭೈರಣ್ಣ ಹಿಡಿದುಕೊಳ್ಳಲು ಓಡಿದ.

ಗೋಪಾಲ ಮೇಲಿನಿಂದ ಕೆಳಗೆ ಬೀಳುವಾಗ ವಿಳ್ಳೆಯದೆಲೆಯ ಹಂಬಿಗೆ ಕಾಲು ತಗುಲಿ ತಲೆ ಕೆಳಗಾಗಿ ಬಿದ್ದ.

ತಲೆಯಲ್ಲಿ ರಕ್ತ ಕಿತ್ತುಕೊಂಡಿತು.

"ಅಯ್ಯೋ....!" ಕಿರಚಿ ಶಕುಂತಲ ನೆಲದ ಮೇಲೆ ಬಿದ್ದುಬಿಟ್ಟಳು. ಭೈರಣ್ಣ ಓಡಿಹೋಗಿ ಗೋಪಾಲನನ್ನು ಬಾಚಿ ತಬ್ಬಿಕೊಂಡ.

ತಲೆಯ ಚಿಪ್ಪು ಒಡೆದು ಹೋಗಿತ್ತು. ಕಾಲು ಮುರಿದಿತ್ತು.

ಜ್ಞಾನವಿಲ್ಲ.

ಭೈರಣ್ಣನಿಗೆ ಏನು ಮಾಡಬೇಕೆಂಬುದು ತೋಚಲಿಲ್ಲ. ತನ್ನ ಬಲವನ್ನೆಲ್ಲಾ ಬಿಟ್ಟು ಕಿರಚಿಕೊಂಡ. ಉಟ್ಟಿದ್ದ ಪಂಚೆಯನ್ನು ಕಿತ್ತು ಸುರಿ

ಯುತ್ತಿದ್ದ ರಕ್ತವನ್ನು ವರಿಸಿದ. ಆದಷ್ಟೇ ಒದ್ದೆ ಮಾಡಿ ತಲೆಗೆ ಬಿಗಿಯಾಗಿ ಸುತ್ತಿದ್ದ.

ಒಂದು ಬೊಗಸೆ ನೀರನ್ನು ತಂದು ಶಕುಂತಲಳ ಮುಖದ ಮೇಲೆ ಚುಮುಕಿಸಿದ.

ಇನ್ನೇನೂ ಮಾಡಲು ತೋಚದೆ ಹುಚ್ಚನಂತಾಗಿ ಲಂಗೋಟಿ ಒಂದರಲ್ಲಿ ತೋಟದ ಹೊರಗೆ ಹೋಗಿ ಅರಚಿಕೊಂಡ. ಉಸಿರು ಉಡುಗಿಹೋಗಿದ್ದರೂ ನರಳುವ ಗೊಗ್ಗರು ಧ್ವನಿಯಲ್ಲಿ ವಿಕಾರವಾಗಿ ನರಳಿದ.

ಐದು ನಿಮಿಷದಲ್ಲಿ ಎಲ್ಲರೂ ಬಂದರು.

ಲಕ್ಷ್ಮೀದೇವಮ್ಮ ಮಗನನ್ನು ತಬ್ಬಿಕೊಂಡು ಗೋಳೋ ಎಂದು ಅತ್ತಳು. ಹುಚ್ಚಳಂತಾಗಿ ಎದೆಬಡಿದುಕೊಂಡಳು. ತೋಟದಲ್ಲಿ ಹೊರಳಿದಳು.

ರಾಮರಾಯರು ಮೂಕರಾಗಿ ತಲೆಯಮೇಲೆ ಕೈಯನ್ನು ಹೊತ್ತು ಮೇಲಿನ ಶೂನ್ಯವನ್ನು ದಿಟ್ಟಿಸುತ್ತ ಕುಳಿತುಬಿಟ್ಟರು. ಕಣ್ಣೀರ ಕೋಡಿ ಹರಿದಿತ್ತು.

ಸೀತಮ್ಮ ಶಕುಂತಲ, ಗೋಪಾಲರ ಮಧ್ಯದಲ್ಲಿ ಸೆರಗಿನಿಂದ ಮುಖ ಮುಚ್ಚಿ ಕುಳಿತುಬಿಟ್ಟರು.

ಕರಾಳವಿಧಿ ವಿಕಾರ ರೂಪ ತಾಳಿ ವಿಕಟಾಟ್ಟಹಾಸ ಮಾಡಿ ರುದ್ರವಾಗಿ ಕೆನೆದಿದ್ದ.

## ೧೨

ಗೋಪಾಲನನ್ನು ತಕ್ಷಣ ಗಾಡಿಯಲ್ಲಿ ತುಮಕೂರಿಗೆ ಸಾಗಿಸಿದರು.

"ನಮ್ಮ ಹುಡುಗನನ್ನು ಬದುಕಿಸಿಕೊಡಿ. ನೀವು ಕೇಳಿದಷ್ಟು ಹಣ ಕೊಡ್ತೀನಿ..." ರಾಮರಾಯರು ಡಾಕ್ಟರನ್ನು ಬೇಡಿಕೊಂಡರು.

"ಇರೋನು ಇವನೊಬ್ಬನೇ ಮಗ ಡಾಕ್ಟರೆ....ಹೇಗಾದರೂ ಮಾಡಿ ಬದುಕಿಸಿಕೊಟ್ಟು ಪುಣ್ಯ ಕಟ್ಟಿಕೊಳ್ಳಿ....ನಾನು ಸಾಯೋತನ್ಕ ನಿಮ್ಮ ಹೆಸರು ಹೇಳ್ತಾ ಇರ್ತೀನಿ...." ಲಕ್ಷ್ಮೀದೇವಮ್ಮ ಡಾಕ್ಟರ ಕಾಲನ್ನು ಹಿಡಿದುಕೊಂಡರು.

ಆಸ್ಪತ್ರೆಯ ಡಾಕ್ಟರ ಚಿಕಿತ್ಸೆ ಸಾಲದೆಂದು ಇಬ್ಬರು ಖಾಸಗಿ ವೈದ್ಯರನ್ನು ಕರೆದುಕೊಂಡು ಬಂದರು ವೆಂಕಟರಾಯರು.

"ಶನಿ....ಮುಂಡೆ ಯಾವ ಗಳಿಗೇಲಿ ನಮ್ಮನೆಗೆ ಕಾಲಿಟ್ಟಳೊ....!" ಲಕ್ಷ್ಮೀದೇವಮ್ಮನ ತಾಯಿ ಶಕುಂತಲೆಯನ್ನು ಶಪಿಸಿದರು.

" ನೀನಾರೂ ಸತ್ತು ಅವನಾದ್ರೂ ಉಳಕೊಳ್ಳಬಾರದಾಗಿತ್ತೇನೆ....?" ತಾಯಿ ಸೀತಮ್ಮ ಸುತ್ತಲಿನ ದುಃಖವನ್ನು ನೋಡಲಾರದೆ ಕಣ್ಣೀರು ಸುರಿಸಿ ನುಡಿದರು.

" ಅಯ್ಯೋ ! ಶಕುಂತಲ....! ಏನು ಪಾಪೀನೆ...." ತಂದೆ ನುಡಿದರು.

" ಸಧ್ಯ ಇನ್ನೂ ಮದ್ವೆ ಆಗಿರಲಿಲ್ವಲ್ಲಾ...." ಯಾರೊ ಗುಂಪಿನಲ್ಲಿ ನುಡಿದಾಗ ಸಾವಿತ್ರಮ್ಮ ಕಣ್ಣೀರು ಸುರಿಯುತ್ತಿದ್ದ ಕಣ್ಣನ್ನು ಕೆಂಪಗೆ ಮಾಡಿ ಕೊಂಡು ಅತ್ತ ನೋಡಿದರು.

" ನಾನು ಸತ್ತಿದ್ರೇ ಚೆನ್ನಾಗಿತ್ತು...." ಶಕುಂತಲಳ ಬಾಯಿ ನುಡಿ ದಾಗ ಸಾವಿತ್ರಮ್ಮ ಮೊಮ್ಮಗಳನ್ನು ಬಾಚಿ ತಬ್ಬಿಕೊಂಡರು.

" ಸುಮ್ನಿರೆ....ಶಕುಂತಲ....! ಯಾವ ಘಳಿಗೆ ಹ್ಯಾಗಿರುತ್ತೊ...." ಅವಳ ಬಾಯನ್ನು ಮುಚ್ಚಿ ಮೈದಡವಿದರು.

ಬಹು ಹೊತ್ತಿನ ಮೇಲೆ ಎಚ್ಚರಾದ ಗೋಪಾಲ ಕ್ಷೀಣವಾಗಿ ಕಣ್ಣನ್ನು ಬಿಟ್ಟು ಸುತ್ತಲೂ ನೋಡಿದ. ಕಣ್ಣು ಹನಿದುಂಬಿತು. ಪುನಃ ಕಣ್ಣನ್ನು ಸುತ್ತಲೂ ಹರಿಸಿದ. ಸಾವಿತ್ರಮ್ಮನ ಮಡಿಲಲ್ಲಿ ಮಗುವಾಗಿ ಕುಳಿತಿದ್ದ ಶಕುಂತಲಳತ್ತ ಅವನ ದೃಷ್ಟಿ ಹರಿದು ಅಲ್ಲಿ ಜಡವಾಗಿ ನಿಂತಿತು.

ರಾಮರಾಯರು ಶಕುಂತಲಳನ್ನು ಹತ್ತಿರ ಕರೆದರು. ಗೋಪಾಲ ಕಣ್ಣನ್ನು ಅಗಲಿಸಿ ಅತ್ತ ನೋಡಿದ. ಕಣ್ಣಿನ ಆಲಿಗಳು ವಿಚಿತ್ರವಾಗಿ ಚಲಿಸಿ ನೆಲೆಗೆ ಬಂದಾಗ ಕಣ್ಣಿನ ಕೊನೆಯಲ್ಲಿ ನೀರು ಸುರಿಯಿತು. ಜಡವಾಗಿ ಬಿದ್ದಿದ್ದ ಕೈ ಅತ್ತ ಇತ್ತ ಸ್ವಲ್ಪ ಸರಿದಾಡಿತು. ನಿಂತಿದ್ದ ಶಕುಂತಲ ಹಾಗೆಯೇ ಕುಕ್ಕುರುಬಿದ್ದಳು.

" ನನ್ನ ಕ್ಷಮಿಸು ಗೋಪಾಲ....ನಾನು ಮೃತ್ಯುವಾದೆ ನಿನಗೆ...." ಅವನ ಕೈಯನ್ನು ಕಣ್ಣಿಗೆ ಒತ್ತಿಕೊಂಡಳು.

' ನನ್ನಿಂದಲೇ ಅವನು ಸತ್ತಿದ್ದು.' ಮನಸ್ಸು ತಿವಿದು ಹೇಳಿತು.

' ನೀನೇ ಅವನ ಕೊಲೆಪಾತಕಿ ' ಬುದ್ಧಿ ಅರುಚಿತು.

' ನೀನೇ ಅವನು ಮರ ಹತ್ತಲು ಪ್ರೇರೇಪಿಸಿದ್ದು.' ಹೃದಯ ಆರ್ಭಟಿ ಸಿತು.

" ನಾನು....ಪಾಪಿ....ನಾನೇ ಅವನನ್ನು ಕೊಂದದ್ದು...." ಶಕುಂತಲಳ ಬಾಯಿ ನುಡಿದಾಗ ದೇಹ ಬೆವರಿ ಬಳಲಿ ಬವಳಿಬಂದು ಬಿದ್ದುಬಿಟ್ಟಳು.

ಗೋಪಾಲನ ತುಟಿಗಳು ಅಲುಗಾಡಿದವು. ಮಾತು ಕೇಳಿಸಲಿಲ್ಲ. ವೆಂಕಟರಾಯರು ಅವನ ತುಟ್ಟಿಯ ಹತ್ತಿರ ಕಿವಿಯನ್ನು ಇಟ್ಟರು. " ಅಳ

ಬೇಡ....ಶಕುಂತಲ....ಸು....ಖ....ವಾ....ಗಿರು....ನಂಗೆ ಅದೃಷ್ಟ....ವಿ....ರ ....ಲಿ....ಲ್ಲ...." ಮಾತು ಅಂತ್ಯಗೊಳ್ಳುವಾಗ ಸ್ವರ ಬಹು ಕ್ಷೀಣವಾಗಿತ್ತು.

"ಅಯ್ಯೋ!....ನೀನು ಮನುಷ್ಯನಲ್ಲಪ್ಪ....! ದೇವರು....!" ರಾಯರು ಅವನ ಎದೆಯ ಮೇಲೆ ಮುಖ ಇಟ್ಟು ಗೊಳ್ಳೆಂದು ಅತ್ತರು.

ಗೋಪಾಲ ಇನ್ನೊಮ್ಮೆ ಕಾಂತಿಹೀನ ಕಣ್ಣನ್ನು ಸುತ್ತಲೂ ಹರಿಸಿದ. ತಾಯಿಯ ಕಡೆ ನೆಲೆಯಾಗಿ ನಿಂತಿತು.

ಮತ್ತೆ ಕದಲಲೇ ಇಲ್ಲ.

ಬಿರಿದಿದ್ದ ತುಟಿಗಳು ಪುನಃ ಮುಚ್ಚಲಿಲ್ಲ.

ಕತ್ತು ವಾಲಿತು.

ಎಲ್ಲವನ್ನೂ ನೋಡುತ್ತಿದ್ದ ಡಾಕ್ಟರು ಕಣ್ಣನ್ನು ಮುಚ್ಚಿ ಮುಖದ ತುಂಬಾ ಬಟ್ಟೆಯನ್ನು ಹೊದೆಸಿದರು.

ಡಾಕ್ಟರ ಔಷಧಿಯಾಗಲಿ, ತಾಯಿ, ಶಕುಂತಲಳ ಮೌನ ಪ್ರಾರ್ಥನೆಯಾಗಲಿ ಕರಾಳ ವಿಧಿಯ ವಿಕೃತ ಇಚ್ಛೆಯ ವಿರುದ್ಧವಾಗಿ ಬದುಕಿಸಿಕೊಳ್ಳಲಾಗಲಿಲ್ಲ.

ನಡೆಯಬೇಕಾದ ಕಾರ್ಯಗಳೆಲ್ಲಾ ನಡೆದುಹೋಯಿತು.

"ಮದುವೆಗಾಗಿ ಸಿದ್ಧವಾಗಿದ್ದ ಸಾಮಾನು ಮಗನ ತಿಥಿಗಾಯಿತು." ಕರಾಳವಾಗಿ ನುಡಿದಾಗ ರಾಮರಾಯರ ಪಕ್ಕದಲ್ಲಿದ್ದವರು ತತ್ತರಿಸಿದರು.

## ೧೩

ಮಗನೊಡನೆ ರಾಮರಾಯರ ಸುಖವೂ ಹೊರಟು ಹೋಯಿತು. ಲಕ್ಷ್ಮೀದೇವಮ್ಮ ಮೊದಲಿನಿಂದಲೂ ಮಾತನಾಡುವುದು ಕಡಿಮೆ. ಈಗಂತೂ ಸಂಪೂರ್ಣ ಮೌನಿಯಾದರು.

ವೆಂಕಟರಾಯರು ಎಂಟು ದಿನಗಳ ರಜವನ್ನು ತೆಗೆದುಕೊಂಡು ಮನೆಯನ್ನು ಸೇರಿದರು.

ಶಕುಂತಲ ರೂಮನ್ನು ಬಿಟ್ಟು ಹೊರಗೆ ಬರುವುದನ್ನು ಸಂಪೂರ್ಣವಾಗಿ ನಿಲ್ಲಿಸಿದಳು. ಕಣ್ಣೀರನ್ನು ಸುರಿಸುವುದರಲ್ಲಿ ಬೆಳಗು ರಾತ್ರಿಗಳ ಅರಿವೇ ಆಗುತ್ತಿರಲಿಲ್ಲ.

ಅಜ್ಜಿ ಸಾವಿತ್ರಮ್ಮ ಒಳಗೆ ಎಷ್ಟೇ ದುಃಖವಿದ್ದರೂ ಎಲ್ಲವನ್ನೂ ಅಡಗಿಸಿಕೊಂಡು ಎಲ್ಲರನ್ನೂ ಸಮಾಧಾನ ಮಾಡಬೇಕಾಗಿತ್ತು.

"ಸುಮ್ನೆ ಇರು ವೆಂಕಟರಾಯ. ಅತ್ತರೇನು ಸಾರ್ಥಕ. ಹೋದೋನು

ಪುನಃ ಬರೋದಾದ್ರೆ ಇನ್ನೂ ಬೇಕಾದಷ್ಟು ಅಳೋಣ... ಹೀಗೆ ಊಟ ತಿಂಡಿ ಬಿಟ್ಟು ಅತ್ತರ ಏನು ಪ್ರಯೋಜನ ಮಗು....ಅವನು ಬದುಕಿದ್ರೆ ಚೆನ್ನಾಗಿತ್ತು ....ನಾನು ಏನೋನೋ ಆಸೆ ಇಟ್ಕೊಂಡಿದ್ದೆ. ದೇವರಿಗೆ ಅದು ಬೇಕಿರಲಿಲ್ಲ ಅಂತ ಕಾಣ್ಸುತ್ತೆ....ಅದಕ್ಕೇ ಹಾಗಾಯ್ತು....ಏಳು ಮಗು....ನೀನು ಮನೆ ಯಜಮಾನನಾಗಿ ಅಳ್ತ ಕೂತ್ರೆ ಇನ್ಯಾರು ಸಮಾಧಾನ ಮಾಡಬೇಕು ಹೇಳು" ಹೇಳಿದರು ಸಾವಿತ್ರಮ್ಮ.

"ಲೇ ಶಕುಂತಲ....! ಹುಚ್ಚು ಹುಡ್ಗಿ ಆಡಿದ್ಹಾಗೆ ಆಡ್ತಾ ಇದ್ದೀ ಯಲ್ಲೇ....? ಏಳು ಸಾಕು. ಮನೆ ಹೆಣ್ಣು ಮಗಳು ನೀನೇ ಕಣ್ಣೀರು ಹಾಕಿದ್ರೆ ಹ್ಯಾಗಮ್ಮ..?! ನಮ್ಗೆ ಒಳ್ಳೇದು ಆಗೋಲ್ಲ ನಿಂಗೆ ಕಣ್ಣೀರು ಹಾಕೋ ದುಃಖ ಏನಾಗಿದೆ ಹೇಳು...! ಪಾಪ! ಗೋಪಾಲನ ಜೊತೇಲಿ ಮದ್ವೆ ಆಗಿದ್ರೆ ಚೆನ್ನಾಗಿತ್ತು. ವಿಧಿ ಲಿಖಿತ ಹಾಗಿರಲಿಲ್ಲ....ಅವನು ಹೊರಟು ಹೋದ....ಸುಮ್ನಿರಮ್ಮ....ಅಳಬಾರ್ದು....ಸಮಾಧಾನ ಪಟ್ಕೊ ಬೇಕು. ಅತ್ತು ಅತ್ತು ಹಿಂದಿನವನ್ನು ನೆನಿಸೊ ಬದ್ಲು ಇರೊದ್ರಲ್ಲೆ ತೃಪ್ತಿ ಪಡಬೇಕು, ಇನ್ಯಾರಾದ್ರು ಚೆನ್ನಾಗಿರೋನು ಸಿಕ್ತಾನೆ ಬಿಡು...." ನಕ್ಕು ಅವಳ ಗಲ್ಲವನ್ನು ಹಿಡಿದರು.

"ಆದ್ದು ಆಗಿಹೋಯ್ತು. ನಂಗೂ ತುಂಬಾ ದುಃಖವಾಗ್ತಾ ಇದೆ. ಜೀವನದಲ್ಲಿ ಸುಖಾದಃಖ ಎರಡೂ ಬರುತ್ತೆ. ಸುಖಾ ಬಂದಾಗ ಉಬ್ಬದೆ ದುಃಖ ಬಂದಾಗ ಕುಗ್ಗದೆ ಇರೋದೆ ಜೀವನ." ಸುಬ್ಬಣ್ಣನೂ ಸಮಾಧಾನ ವನ್ನು ನುಡಿದ.

ಕತ್ತಲು ಸರಿದು ಬೆಳಕು ಮೂಡಿತು. ದಿನಗಳು ಸರಿದು ವಾರವಾ ಯಿತು. ವಾರಗಳು ಕೂಡಿ ತಿಂಗಳಾಯಿತು.

ಈ ದುಃಖದ ವಾತಾವರಣ ಸ್ವಲ್ಪ ಮಾಸಲಾಗಿ ಮೊದಲಿನ ಸ್ಥಿತಿಗೆ ಬರಬೇಕಾದರೆ ಎರಡು ತಿಂಗಳುಗಳು ಹಿಡಿದವು.

ಮದುವೆಯ ಸಮಸ್ಯೆ ಈಗ ಪುನಃ ಬೃಹದಾಕಾರ ತಾಳಿ ನಿಂತಿದೆ.

"ಸರಿಯಾದ ಕಡೆ ನೋಡಪ್ಪ....ಸುಬ್ಬಣ್ಣ. ಬರೋನು ಶಕುಂತಲ ಳಿಗೆ ಗಂಡನಾಗಿ ಬರೋದು ಒಂದೇ ಅಲ್ದೆ ನಮ್ಮ ಮನೆಗೆ ಮಗನೂ ಆಗ್ಬೇಕು...." ಸಾವಿತ್ರಮ್ಮ ಸುಬ್ಬಣ್ಣನಿಗೆ ಎಚ್ಚರಿಕೆ ಕೊಟ್ಟರು.

"ಹುಡುಗ ಬಡವನಾದ್ರೂ ಸರಿ. ಹೆಚ್ಚು ಓದು ಬರಹ ಕಲಿಯ ದಿದ್ರೂ ಸರಿ. ಒಳ್ಳೆ ಸದ್ವಂಶದೋನಾಗಿರಬೇಕು....ಮುಖ್ಯವಾಗಿ ನಮ್ಮ ಹುಡು ಗಿಗೆ ಎಲ್ಲಾ ವಿಧದಲ್ಲೂ ಸುಖಾ ಕೊಡೊಹಾಗಿರಬೇಕು...." ಸೀತಮ್ಮ ನುಡಿದಳು.

"ನೀನೇ ಸುಬ್ಬಣ್ಣ ಈಗ ನನ್ನ ಮನೆಯ ಯಜಮಾನ. ನಿಂಗೆ ಯಾರು ಒಪ್ಪಿಗೆ ಆಗ್ತಾರೋ ಅವರ್ನ ತಂದು ಮದ್ವೆ ಮಾಡಿಬಿಡು. ನನ್ನ ದೇನೂ ಇದ್ರಲ್ಲಿ ಅಡ್ಡಿ ಇಲ್ಲ...ಅಷ್ಟೆ ನೋಡು. ಶಕುಂತಲ ನಂಗೆ ಹೆಣ್ಣೂ ಹೌದು. ಗಂಡೂ ಹೌದು....ಮುಖ್ಯವಾಗಿ ಅವಳು ಸುಖವಾಗಿರಬೇಕು." ವೆಂಕಟರಾಯರ ಎಲ್ಲವನ್ನೂ ಸುಬ್ಬಣ್ಣನ ಮೇಲೆ ಹೇರಿದರು.

"ನಂಗೆ ಮದ್ವೆ ಬೇಡ ಸುಬ್ಬಣ್ಣ...ನನ್ನ ಅದೃಷ್ಟ ಚೆನ್ನಾಗಿಲ್ಲ ಅಂತ ಕಾಣುತ್ತೆ ..." ಕಣ್ಣೀರನ್ನು ಮಿಡಿದು ನುಡಿದಳು ಶಕುಂತಲ.

"ಸಾಕು ಸುಮ್ನಿರಿ....ಒಳ್ಳೆ ಯಜಮಾನಿ ಹೇಳ್ದಾಗೆ ಹೇಳೋಕೆ ಬಂದಿದ್ದಾಳೆ. ಬಾಳ ಕಷ್ಟ ಸುಖಾ ಕಂಡೋಳು ಇವಳು....? ಬೇಜಾರು ಆಗ್ಬೇಡ್ವೆ ಪಾಪ ಇವಳ್ಗೆ....?! ಹುಡುಗೀ ಹಾಗೆ ನಾವು ಹೇಳಿದ್ದನ್ನು ಕೇಳ್ಕೊಂಡು ಇರೋದು ಬಿಟ್ಟು ತಲೆಯೆಲ್ಲಾ ಹರಟ್ತಾಳೆ....ನೀನು ಸುಖವಾಗಿರ್ಲಿ ಅಂತ ತಾನೇ ನಾವೆಲ್ಲಾ ಇಷ್ಟು ಕಷ್ಟ ಪಡ್ತಾ ಇರೋದು." ಅಜ್ಜಿ ನಿಜವಾಗಿಯೂ ಸಿಟ್ಟಾದರು

"ನಿನ್ನ ಕೆಲ್ಸ ನೀನು ಮಾಡ್ಕೋಗೆ....ಹಾಡು ಹಸೆ ಕಲಿಯೋದು ಬಿಟ್ಟು ದೊಡ್ಡೋರ ಮಾತಿಗೆ ಥೈ ಅಂತ ನೆಕ್ಕೊಂಡು ಬರ್‍ತಾಳೆ" ತಾಯಿ ಗದರಿಸಿದಳು.

"ಏನ್ಬೇಕಾದ್ರೂ ಮಾಡ್ಕೊಳ್ಳಿ" ಶಕುಂತಲ ನುಡಿದು ತನ್ನ ರೂಮಿನಲ್ಲಿ ಮಂಚದಮೇಲೆ ಮಲಗಿಬಿಟ್ಟಳು.

"ಶಕುಂತಲಳ ಮದ್ವೆ ಮುಗ್ಸಿ ಅವಳ್ನ ಒಂದು ಸರಿಯಾದ ನೆಲೆಗೆ ನಿಲ್ಲಿಸಿದ ಹೊರ್‍ತೂ ನೀನು ನಮ್ಮನೆ ಬಿಟ್ಟು ಕದಲೊ ಹಾಗಿಲ್ಲ." ಸಾವಿತ್ರಮ್ಮ ಅಪ್ಪಣೆ ವಿಧಿಸಿದರು.

"ಅವಳು ಮದ್ವೆ ಆಗಿ ಸುಖವಾಗಿರೊದನ್ನೆ ನೋಡೋಕೆ ನಾನು ಈ ಘಟ ಹೊತ್ತು ಇದ್ದೀನಿ ಸುಬ್ಬಣ್ಣ...ಇಲ್ದೆ ಇದ್ರೆ ಎಂದೊ ಗೊಟಕ್ ಅಂತ ಇದ್ದೆ. ಇವಳ ಮದ್ವೆ ಒಂದಾಗಿ, ಕಣ್ಣುತುಂಬಾ ನಾನು ನೋಡಿ, ಗಂಡ ಹೆಂಡ್ತಿ ಕಿಲಿ ಕಿಲಿ ಅಂತ ನಗ್ತಾ ಇದ್ರೆ ನಾನು ಹಾಯಾಗಿ ಸಾಯ್ತೀನೆ... ಇದ್ದು ಯಾವ ರಾಜ್ಯ ಆಳ್ಬೇಕಾಗಿದೆ... ವಯಸ್ಸಾಯ್ತು ಕಾಲವಾಯ್ತು.! ನಮ್ಮನೆ ನಂದಾದೀಪ ಚೆನ್ನಾಗಿ ಯಾವಾಗ್ಲೂ ಬೆಳಗಿದ್ರೆ ಸಾಕು ಸುಬ್ಬಣ್ಣ....! ಮೊಮ್ಮಗ ಇಲ್ದೆ ಹೋದ್ರೂ ಈರೋಳೇ ಮೊಮ್ಮಗ ಅಂತ ಹಾಯಾಗಿ ಸಾಯ್ತೀನಿ ...!!" ತುಂಬು ದುಃಖ ಉಕ್ಕಿಬಂದು ಗಂಟಲು ಗದ್ಗದಿತವಾಯಿತು.

೧೪

ಬೇಸಗೆ ರಜಾ ದಿನಗಳು ಆಗಲೇ ಪ್ರಾರಂಭವಾಗಿದ್ದುದರಿಂದ ಶೀನಿ ತಾಯಿಯ ಜೊತೆಯಲ್ಲಿ ಸೋದರ ಮಾವನ ಮನೆಗೆ ಬಂದಿದ್ದ. ನಾಲ್ಕು ಗಂಟೆ ಹೊತ್ತಿಗೆ ವೆಂಕಟರಾಯರ ಮನೆಗೆ ಬಂದು ರಾಯರನ್ನು ಕೂಗಿದ. ರಾಯರು ಇನ್ನೂ ಕಛೇರಿಯಿಂದ ಬಂದಿರಲಿಲ್ಲ. ಸೀತಮ್ಮ ಅಡಿಗೆ ಮನೆಯಲ್ಲಿ ಕೆಲಸಮಾಡುತ್ತಿದ್ದಳು. "ಏನೋ ಶೀನಿ....! ಯಾವಾಗ ಬಂದೆಯಪ್ಪ. ನಿಮ್ಮ ಅಮ್ಮ ಚೆನ್ನಾಗಿದ್ದೀರಾ? ಬಾ... ಕೂತ್ಕೋ...." ಸ್ವಾಗತಿಸಿದಳು. ಶೀನಿ ಪ್ಯಾಂಟನ್ನು ಹಾಕಿಕೊಂಡು ಬಂದಿದ್ದುದರಿಂದ ಚಾಪೆಯ ಮೇಲೆ ಕೊಡಲು ಅನುಮಾನಿಸಿದ.

"ರೂಮಿನಲ್ಲಿ ಶಕುಂತಲಾ ಇದ್ದಾಳೆ....ಹೋಗಿ ಕೂತ್ಕೊ ಹೋಗಪ್ಪ ....ಬೆಂಗಳೂರು ನೀರು ನಿಂಗೆ ಚೆನಾಗಿ ಒಗ್ಗಿದೆ ಶೀನಿ. ಚೆನ್ನಾಗಿ ತಿಂದು ಹ್ಯಾಗಾಗಿದ್ದೀಯೊ?...ದೃಷ್ಟಿ ತಾಗುತ್ತಲ್ಲೊ!" ಸಾವಿತ್ರಮ್ಮ ಹೇಳಿಕೊಂಡು ನಡುಮನೆಯಿಂದ ಹೊರಗೆ ಬಂದರು. ಇವರು ಮಾತನಾಡುವ ಶಬ್ದ ಕೇಳಿ ಶಕುಂತಲಳೂ ರೂಮಿನ ಬಾಗಿಲಲ್ಲಿ ಬಂದು ನಿಂತಳು.

"ನಿಮ್ಮಮ್ಮನ್ನ ಯಾಕೆ ಕರಕೊಂಡು ಬರ್ಲಿಲ್ಲ" ಶಕುಂತಲ ಪ್ರಶ್ನಿಸಿದಳು.

"ನಾನು ನೀನು ಮನೇಲಿ ಇರ್ತೀಯೊ ಅಂತಿವೆ...ಅಮ್ಮನೂ ಬಂದಿದ್ದಾಳೆ. ಅವಳೂ ಇನ್ನೊಂದು ಸ್ವಲ್ಪ ಹೊತ್ತಿಗೆ ಬರಬಹುದು. ಮಾತ್ನಲ್ಲಿ ಮರ್ತೇಬಿಟ್ಟಿದ್ದೆ Congratulation ಶಕುಂತಲ. ನಿಮ್ಮ ವೈವಾಹಿಕ ಜೀವನ ಸುಖಮಯವಾಗಲಿ." ನುಡಿದ.

ಶಕುಂತಲೆ ತಲೆತಗ್ಗಿಸಿದಳು.

ನೋಡಿಯೂ ನೋಡದವನಂತೆ ಗೋಪಾಲ ಸೀತಮ್ಮನ ಕಡೆಗೆ ಮುಖವನ್ನು ತಿರುಗಿಸಿದ. "ಏನು ಸೀತಮ್ಮ....ಮದ್ವೇದು ಏನಾದ್ರೂ ಹುರುಗಾಳು, ಪುಲ್ಲಂಗಾಯಿ ಉಂಡೆ...ಅಥವ ಏನಾದ್ರೂ ಉಳಿದಿದ್ರೆ ಕೊಡಿ" ಕೇಳಿದ. "ನಂಗೆ ಮದ್ವೆ ಅನ್ನೋದು ಗೊತ್ತಾಗಿದ್ರೆ ನಿಜವಾಗ್ಲೂ ಬರ್ತಾ ಇದ್ದೆ. ನೀವು ಲಗ್ನಪತ್ರಿಕೆ ಕಳಿಸ್ದೆ ಇದ್ದರೂ ಪರವಾಗಿರಲಿಲ್ಲ.. ಗೋಪಾಲನೂ ಒಳ್ಳೆ ಹುಡುಗ....ಒಳ್ಳೇ ಕಡೆಗೇನೇ ಸಾಹುಕಾರರ ಮನೇಗೇ ಸೇರಿದ್ದಾಗೆ ಆಯ್ತು." ವ್ಯಂಗ್ಯ ತುಳುಕುತ್ತಿತ್ತು.

ಶಕುಂತಲಳ ರೂಮಿನತ್ತ ನೋಡಿದ. ಅವಳು ಒಳಗೆ ಹೊರಟು ಹೋಗಿದ್ದಳು.

ಸೀತಮ್ಮ ಸಾವಿತ್ರಮ್ಮನ ಮುಖವನ್ನು ನೋಡಿದಳು. ಸಾವಿತ್ರಮ್ಮ ಶೀನಿಯ ಮುಖವನ್ನು ದಿಟ್ಟಿಸಿದರು. "ಏನಾದ್ರೂ ಇದ್ರೆ ತನ್ನಿ....ನಾನು ಶಕುಂತಲಳ ರೂಮ್ನಲ್ಲಿ ಇರ್ತೀನಿ..." (ಗೋಪಾಲ್) ಹೇಳಿ ರೂಮಿನತ್ತ ನಡೆದ.

"ಶೀನಿ....!" ಸಾವಿತ್ರಮ್ಮ ಕೂಗಿದರು. ಬಾಗಿಲಿನ ಹತ್ತಿರ ಹೋಗಿದ್ದವನು ಅಲ್ಲೇ ನಿಂತ. "ನೀನೂ ಹಾಸ್ಯ ಮಾಡೋ ಹಾಗೆ ಆಯ್ತಲ್ಲೊ ನಮ್ಮ ಬಾಳು!" ಮಾತಿನಲ್ಲಿ ದುಃಖ ತುಳುಕುತ್ತಿತ್ತು. "ಆ ಮದ್ವೆ ಆಗಲಿಲ್ಲ ಶೀನಿ....ನಿಂಗೆ ಏನೂ ಗೊತಾಗಿಲ್ಲ ಅಂತ ಕಾಣುತ್ತೆ. ಗೊತ್ತಾದ್ರೆ ಎಂಥೊರ ಕಲ್ಲು ಎದೆಯೂ ಕರಗುತ್ತೆ ಶೀನಿ."

"ನಂಗೇನೂ ಗೊತ್ತೇ ಇಲ್ಲ....ಏನು ಸಮಾಚಾರ....?!"

"ಹೌದು ಶೀನಿ ನಿಜವಾಗ್ಲೂ ನಿಂಗೆ ಗೊತ್ತಿಲ್ಲ. ಯಾವ ಸೂಳೇ ಮಗನೂ ತಿಳ್ದೂ ತಿಳ್ದು ಈ ವಿಷಯಾನ ಪ್ರಶ್ನಿಸೋಲ್ಲ...." ಸಾವಿತ್ರಮ್ಮ ನುಡಿದಾಗ ಶೀನಿ ದೇಹಾದ್ಯಂತ ಕಂಪಿಸಿದ.

"ಹೌದು....! ಹೌದು...." ನಾಲಿಗೆ ಚಲಿಸಿತು.

"ಮದ್ವೆ ಆಗಲಿಲ್ಲ ಶೀನಿ. ತೆಂಗಿನ ಮರದ ಮೇಲ್ನಿಂದ ಬಿದ್ದು ಸತ್ತುಹೋದ....ಗೋಪಾಲ....ನಾವೊಂದು ಬಗದ್ರೆ ದೇವರೊಂದು ಬಗೀತಾನೆ....!..." ಸಾವಿತ್ರಮ್ಮನವರ ಕಣ್ಣು ಹನಿಯಾಡುತ್ತಿತ್ತು.

"ಇಲ್ಲಿಗೆ ಬಂದ ಮೇಲೂ ಯಾರೂ ನಿಂಗೆ ಹೇಳಲಿಲ್ವೇನೊ....ಶೀನಿ...." ಸೀತಮ್ಮ ಅನುಮಾನ ಸೂಚಿಸಿದಳು.

"ಗೊತ್ತೂ ಗೊತ್ತಿದ್ದು ಯಾವ ಪಾಪಿ ಇಂಥಾ ವಿಷಯದಲ್ಲಿ ಹಾಸ್ಯ ಮಾಡೋಕೆ ಹೋಗ್ತಾನೆ ಹೇಳು...." ಸಾವಿತ್ರಮ್ಮ ನುಡಿದು ಶೀನಿಯ ಮುಖವನ್ನು ನೋಡಿದರು. ಶೀನಿ ತಲೆ ತಗ್ಗಿಸಿದ.

"ಯಾವ ಸಂತೋಷದ ವಿಷಯ ಅಂತ ಹೇಳ್ತಾರೆ....ಮನೇಲಿ" ಪಿಸುಗುಟ್ಟಿದ ಶೀನಿ. ಬಾಯಿ ಒಣಗಿ ಹೋದ ಹಾಗಿತ್ತು.

"ಅಯ್ಯೊ ಪಾಪ!....ಹೀಗಾಗಿಹೋಯ್ತೆ....?!....ಸತ್ಯವಾಗಿಯೂ ನಂಗೆ ಈ ವಿಷಯ ಗೊತ್ತಿರಲಿಲ್ಲ....ಯಾರೂ ಹೇಳ್ಳಿಲ್ಲ ನಂಗೆ....ಹೀಗಾಗಬಾರ್ದಿತ್ತು....ಬರೋದು ಬರ್‍ತಾ ಎಂಥಾ ದುರ್ಮರಣಬಂತು ಗೋಪಾಲಂಗೆ...." ಬಹು ಮೆಲ್ಲಗೆ ನುಡಿದ.

"ಇದನ್ನು ಕೇಳಿ ನಂಗೆ ಬವಳಿ ಬಂದ್ಹಾಗೆ ಆಗ್ತಾ ಇದೆ." ಸ್ವಲ್ಪ ಸ್ವರವನ್ನ ಹೆಚ್ಚಿಸಿ ನುಡಿದ. ಜೇಬಿನಲ್ಲಿದ್ದ ಕರವಸ್ತ್ರವನ್ನು ತೆಗೆದು ಮುಖವನ್ನು ಒರಸಿಕೊಂಡ."

"ಸಾವಿತ್ರಮ್ಮ....ಸೀತಮ್ಮ...ನಂಗೆ ಗೊತ್ತಿಲ್ದೆ ನುಡಿದೆ ನುಡಿಬಾರದಿತ್ತು. ಗೊತ್ತಿರಲಿಲ್ಲ....ಕ್ಷಮಿಸಿ ..." ರೂಮಿನ ಕಡೆಗೆ ನೋಡಿ ಇವರನ್ನು ಉದ್ದೇಶಿಸಿ ನುಡಿದ.

"ಗೋಪಾಲ ಪಾಪ ಬಾಳ ಒಳ್ಳೆ ಹುಡ್ಗ....ಚಿನ್ನದಂತ ಹುಡಗ. ಅವನಂಥೋನನ್ನ ವರಿಸಬೇಕಾದ್ರೆ ಶಕುಂತಲ ನಿಜವಾಗ್ಲೂ ಪುಣ್ಯಮಾಡಿದ್ಲು ಅಂತ ತಿಳಕೊಂಡಿದ್ದೆ...ಕ್ಷಮಿಸು ಶಕುಂತಲ ಗೊತ್ತಿಲ್ದೆ ಹೇಳಿದ್ರಿಂದ ನಿನ್ನ ಮನಸ್ಸಿಗೆ ನೋವಾಗಿದೆ...." ಹೇಳುತ್ತ ಹೋಗಿ ರೂಮಿನಲ್ಲಿ ಕುಳಿತುಕೊಂಡ.

"ಅಯ್ಯೊ ಸುಮ್ನಿರು ಗೋಪಾಲ್.. ಅದನ್ನೆ ಯಾಕೆ ಮನಸ್ಸಿಗೆ ಹಚ್ಚಿಕೊಳ್ತಿ ಗೊತ್ತಿಲ್ದೆ ಇದ್ದಾಗ ಎಲ್ಲಾರೂ ಹೀಗೆ ನುಡಿಯೋದೆ....ನಂಗೊತ್ತಿಲ್ವೇನೊ ಶೀನಿ....ನೀನು ಎಷ್ಟು ಒಳ್ಳೆ ಹುಡ್ಗ ಅಂತ. ಯಾವ ಪಾಪಿ ಸೂಳೇ ಮಗ ತಿಳ್ದೊ ತಿಳ್ದ ಕೆಟ್ಟ ಬಾಯಲ್ಲಿ ಆಡಿ ಹೊಟ್ಟೆ ಉರಿಸ್ತಾನೋ....! ಸುಮ್ನಿರು....ಶೀನಿ...." ಸಾವಿತ್ರಮ್ಮ ನುಡಿದರು. "ಹೋಗ್ಲಿ ಕಾಫಿ ಕುಡಿಯಪ್ಪ...." ಸೀತಮ್ಮ ಕಾಫಿಯನ್ನು ತಂದಳು.

"ನಂಗೆ ಕಾಫಿ ಕುಡಿಯೋಕ್ಕೆ ಮನಸ್ಸಿಲ್ಲ. ಸುಮ್ನೆ ಮರೆತಿದ್ದ ವಿಷಯ ಜ್ಞಾಪಕ ಬರ್ಸಿದೆ." ಮುಖದಲ್ಲಿ ದೈನ್ಯತೆಯನ್ನು ತಂದುಕೊಂಡ. "ಅಮ್ಮಂಗೆ ಗೊತ್ತಾದ್ರೆ ಅತ್ತು ಅತ್ತು ಕಣ್ಣೀರಿನ ಕೋಡಿಯನ್ನೇ ಹರಿಸ್ತಾಳೆ...." ಪುನಃ ನುಡಿದ. ಆಗಲೇ ಹರಿಸಿದ್ದರು.

ಕಾಫಿಯ ಬಟ್ಟಲನ್ನು ಕೈಗೆತ್ತಿಕೊಂಡ.

"ನಮ್ಮ ಶಕುಂತಲ ಅಂತೂ ಹದಿನೈದು ದಿನ ಊಟಾನೇ ಮಾಡ್ಲಿಲ್ಲ ..." ಸಾವಿತ್ರಮ್ಮ ನುಡಿದರು.

"ವಾಸ್ತವವೇ....!" ಶೀನಿ ಒಂದೇ ಗುಟುಕಿಗೆ ಕಾಫಿಯನ್ನು ಗಂಟಲಿಗೆ ಹುಯ್ದುಕೊಂಡ.

ಶಕುಂತಲ ಮೌನವಾಗಿ ತಲೆ ತಗ್ಗಿಸಿ ಕುಳಿತಿದ್ದಳು.

"ಕಾಫಿ ಕುಡಿ ಶಕುಂತಲ....ಆದ್ದು ಆಗಿ ಹೋಯ್ತು....ಯೋಚಿಸಿದ್ರೆ ಏನಾಗುತ್ತೆ....ಲಗ್ನ ಪತ್ರಿಕೆ ಒಂದಾಗಿದ್ರೆ....ಮದ್ವೆ ಆದ ಹಾಗಾ....?" ಶೀನಿ ಇನ್ನೂ ಸಮಾಧಾನದ ಮಾತುಗಳನ್ನು ಹೇಳಬೇಕೆಂದಿದ್ದ.

"ಸುಮ್ನಿರು....ಶೀನಿ....ಆ ವಿಷಯ ಮಾತ್ನಾಡಬೇಡ." ಸಿಟ್ಟನಿಂದ ನುಡಿದಳು ಶಕುಂತಲ.

"ಇನ್ನು ಲಗ್ನಪತ್ರಿಕೇನೂ ಆಗಿರಲಿಲ್ಲ. ಸುಮ್ನೆ ಗೊತ್ತಾಗಿತ್ತು ಅಷ್ಟೆ...." ಸಾವಿತ್ರಮ್ಮ ನುಡಿದರು.

" ಹೋಗ್ಲಿ ಬಿಡಿ....ಕಳ್ದುಹೋದ ವಿಷಯಾನ ಸುಮ್ನೆ ಯಾಕೆ ನೆನಸಿ ಕೊಳ್ಳಬೇಕು. ನೆನಸ್ಕೊಂಡ್ರೆ ದುಃಖಾ ಬರುತ್ತೆ. ಇಂಥಾ ವಿಷಯಾನ ಆದಷ್ಟು ಬೇಗ ಮರೆಯೋದೇ ಉತ್ತಮ. ಆದ್ದೆಲ್ಲಾ ಒಳ್ಳೇದಕ್ಕೆ ಅಂತ ಸುಮ್ನಿರಬೇಕು. ಇಲ್ದೆಹೋದ್ರೆ ಬರೋ ಸುಖಕ್ಕೆ ಕಲ್ಲು ಹಾಕಿಕೊಂಡ ಹಾಗಾಗುತ್ತೆ. ಅತ್ತರೇನು ಪುನಃ ಬರೋಲ್ಲ....ಧೈರ್ಯ ತಂದುಕೊಂಡು ಸುಮ್ಮ ನಾಗಬೇಕು ಅಷ್ಟೆ..." ಶಕುಂತಳಲನ್ನು ಉದ್ದೇಶಿಸಿ ಸಾವಿತ್ರಮ್ಮನವರ ಕಡೆ ನುಡಿದ.

" ಹೋಗ್ಲಿ ಬಿಡಿ ಈ ವಿಷಯಾನ ಸಂಪೂರ್ಣವಾಗಿ ಮರ್ತು ಬಿಡಿ.... ವಿಷಗಳಿಗೇಲಿ ಬಂದು ಸುಮ್ನೆ ನಿಮ್ಮ ದುಃಖ ಮರುಕಳಿಸೋ ಹಾಗೆ ಮಾಡ್ದೆ ...ಹೋಗ್ಲಿ. ಇನ್ನೇನು ಅಜ್ಜಿ...ಸಾವಿತ್ರಮ್ಮ ಸಮಾಚಾರ? ಇನ್ನೇನು ಶಕುಂತಲ ಸಮಾಚಾರ....? ನೀನು ಪರೀಕ್ಷೇಲಿ ಚೆನ್ನಾಗಿ ಮಾಡಿದ್ದೀಯ? ....ಏನು ಫಸ್ಟ್ ಕ್ಲಾಸು ಬರುತ್ತೆ ತಾನೆ. ಬಂದೇ ಬರಬೇಕು... ಬಂದೇ ಬರುತ್ತೆ ಅನ್ನಿ....ಕಾಲೇಜು ಸೇರೋ ತೀರ್ಮಾನ ಮಾಡಿದ್ದೀಯೋ ಅಥವ ಮೊದಲಿನ ಹಾಗೆ ಹಟ ಹಿಡಿದು ಕೂತಿದ್ದೀಯೋ....?" ವಾತಾವರಣವನ್ನು ಹಗುರಾಯಿಸಲು ಮಾತನ್ನು ಬೇರೇ ಕಡೆಗೆ ತಿರುಗಿಸಿದ.

" ವೆಂಕಣ್ಣನೇನೋ ಪಾಸಾಗುತ್ಲ ಕಾಲೇಜಿಗೆ ಸೇರು ಮಲೇಲಿ ಕೂತ್ಕೊಂಡು ಏನ್ಮಾಡ್ತೀಯಾ ಅಂತಾ ಹೇಳ್ತಾ ಇದ್ದಾನೆ. ಆದ್ರೆ ಕಾಲೇಜು ಗೀಲೇಜು ಏಕೋ ಶೀನಿ ಹೆಣ್ಣು ಮಕ್ಕಳಿಗೆ....? ನಾನೇನು ಬೇಡಾ ಅಂತ ಹೇಳ್ತಾ ಇದ್ದೀನಿ. ಅವಳಿಗೂ ಇಷ್ಟಾ ಇರೋ ಹಾಗೆ ಕಾಣ್ಸಲ್ಲ. ಪಾತ್ರೆ ತಿಕ್ಕೊಂಡು, ಮಕ್ಕಳು ಮರಿ ಸಾಕಿಕೊಂಡು ಮನೇಲಿ ಬಿದ್ದಿರೋ ಈ ಹೆಣ್ಣು ಮಕ್ಕಳಿಗ್ಯಾಕೆ ಕಾಲೇಜು ವಿದ್ಯೆ... ? ಅದೆಲ್ಲಾ ದುಡಿದು ಹಾಕೊ ನಿಮ್ಮಂಥ ಗಂಡ್ಸರಿಗೆ ಬೇಕು...." ಸಾವಿತ್ರಮ್ಮ ನುಡಿದರು.

" ಕಾಲೇಜಿಗೆ ಹೋಗೋದು ನಂಗೂ ಇಷ್ಟವಿಲ್ಲ ಶೀನಿ. ಅಷ್ಟೊಂದು ಹುಡ್ಗರ ಜೊತೇಲಿ ಅದ್ಯಾಂಗೊ ಹೋಗಿ ಕೂತ್ಕೊಂಡು ವಿದ್ಯಾ ಕಲೀಯೋದು. ಈ ಹಾಳು ವಿದ್ಯಾನೂ ಸಾಕು.... ಆ ಕಾಲೇಜೂ ಸಾಕು. ಕಾಲೇಜು ಬಾಗಿಲು ಹತ್ತೋಕಿಲ್ಲ. ಆಗೋಯ್ತು ಅವರನ್ನ ಮಾತ್ನಾಡ್ಸೋ ಹಾಗೇ ಇಲ್ಲ. ಅವೇ ಮುಂದಿನ ಬೀದಿ ಹಾಂತಾ ಗೊತ್ತಲ್ಲ ...ಅವಳು ನಾನು ಮದ್ವೇನೇ ಆಗೋಲ್ಲ ...ಗಂಡ ಅನ್ನೋ ಪ್ರಾಣಿ ನನ್ನ ಕೊರಳಿಗೆ ಕಟ್ಬೇಡಿ. ನಾನು B. A. ಪಾಸು ಮಾಡಿ ಕೆಲ್ಸ ಮಾಡ್ತೀನಿ ಅಂತ ಹಟ ಹಿಡಿದಿದ್ದಳಂತೆ ಕಣೋ....ಹೆಣ್ಣು ಅಂತ ಹುಟ್ಟಿ ಮದ್ವೆ ಬೇಡಾ ಅಂದ್ರೆ ಆಗುತ್ತೇನೊ! ಈ

ಹಾಳು ವಿದ್ಯೆ ಬಂದು ಚೆನ್ನಾಗಿದ್ದ ಎಷ್ಟೋ ಸಂಸಾರಾನ ಹಾಳು ಮಾಡಿ ಬಿಟ್ಟಿವೆ." ಸೀತಮ್ಮ ನುಡಿದಳು.

ಶಕುಂತಲ ಸ್ವಲ್ಪ ತಲೆ ಎತ್ತಿ ಶೀನಿಯ ಕಡೆಗೆ ನೋಡಿ ಮುಗಳು ನಕ್ಕಳು.

"ಏನು ಶಕುಂತಲ ನಿನ್ನ ತೀರ್ಮಾನ! ತಂದೆ ಹೇಳಿದಾಗೊ ಅಥವ ಅಮ್ಮ ಅಜ್ಜಿ ಹೇಳಿದಾಗೊ?" ಪ್ರಶ್ನಿಸಿದ ಶೀನಿ

"ಹೂಂ! ಅಮ್ಮ ಅಜ್ಜಿ ಹೇಳ್ದಾಗೆ...." ತಲೆಯನ್ನು ಅಲುಗಾಡಿಸಿದಳು. ನನಗೆ ಕಾಲೇಜಿನಲ್ಲಿ ಓದೊ ಅಷ್ಟು ಬುದ್ಧಿಯೂ ಇಲ್ಲ–ಓದೊ ಇಷ್ಟವೂ ಇಲ್ಲ."

"ಹಾಗಾದ್ರೆ ಮದ್ವೆ ಆಗಿ ಮಕ್ಕಳು ಹಡಕೊಂಡು ಇದ್ರಿತಾನೆ" ನಕು ಪ್ರಶ್ನಿಸಿದ.

"ಅದೇನು ತಪ್ಪೇನೊ ಶೀನಿ....ಹಾಗೆ ಕೇಳ್ತಿಯಲ್ಲ....! ಗಂಡ ಹೇಳ್ದಾಗೆ ಕೇಳ್ದೆ ಇನ್ನೇನು ಹೆಂಡ್ತಿ ಹೇಳಿದ್ಹಾಗೆ ಕೇಳ್ಬೇಕೇನೊ....! ನಿಂಗೆ ಮಕ್ಕಳು ಮರಿ ಬೇಡ ಅಂತ ಕಾಣುತ್ತೆ....! ಮದ್ವೆ ಆಗೊ ತನ್ಕ ಎಲ್ಲಾರೂ ಅಷ್ಟೆ ಹಾಗೇ ಅನ್ತಾ ಇರೋದು..." ಹುಸಿಯಾಗಿ ನಕ್ಕರು. "ಸಾವಿತ್ರಿ ಸೀತ ಹಾಗೆ ಇರೋವಷ್ಟು ಕಾಲ ಸುಖವಾಗಿ ಗಂಡನ ಸೇವೆ ಮಾಡ್ಕೊಂಡು ಇರೋದು ಬಿಟ್ಟು ಇನ್ನೇನು ಮಾಡ್ಬೇಕೊ ಹೆಂಗಸಾಗಿ ಹುಟ್ಟಿ....?" ಸಾವಿತ್ರಮ್ಮನವರಿಗೆ ಶೀನಿಯ ಮಾತು ಸರಿಕಂಡಿರಲಿಲ್ಲ.

"ನೀವು ಹೇಳೋದು ಒಂದು ತರಹ ಸರಿ ಅನ್ನಿ....ಆದ್ರೆ ಓದಿದ ಮಾತ್ರಕ್ಕೆ ಹೆಂಗ್ಸು ಕೆಟ್ಟುಹೋಗಲ್ಲ. ಅದ್ರಲ್ಲೂ ಬಹುಜನ ಸಾವಿತ್ರಿ, ಸೀತೆ ಇದ್ದಾರೆ. ಏನೂ ಓದ್ದೆ ಮನೇಲಿ ಕೂತಿರೊ ಎಷ್ಟೊ ಜನ ಹುಡಗಿಯೋರು ಕೆಟ್ಟುಹೋಗಿದ್ದಾರೆ....ಇದಕ್ಕೆಲ್ಲಾ ಮನ್ಸೇ ಕಾರಣ ಹೊರ್ತು ವಿದ್ಯೆಯಲ್ಲ ಅಜ್ಜಿ...." ಶೀನಿ ನುಡಿದ.

"ನಿನ್ನ ಹತ್ರ ಮಾತ್ನಾಡೋಳಿಗೆ ಬುದ್ಧಿಯಿಲ್ಲ! ನಂಗೆ ಒಂದು ಹೊರೆ ಕೆಲ್ಸ ಬಿದ್ದಿದೆ..." ಒಳಗೆ ಹೊರಟು ಹೋದರು ಸಾವಿತ್ರಮ್ಮ.

"ನಾನೂ ಬರ್ಲಾ ಅಜ್ಜಿ...." ಶಕುಂತಲ ಮೇಲಕ್ಕೆ ಎದ್ದಳು. "ನೀನೇನೂ ಬರ್ಬೇಡ....ನಾನೆಲ್ಲಾ ಮಾಡ್ಕೋತೀನಿ. ಪಾಪ ಶೀನಿ ಬೆಂಗಳೂರಿಂದ ಬಂದಿದ್ದಾನೆ. ವೆಂಕಣ್ಣ ಬರೋತನ್ಕ ಮಾತ್ನಾಡ್ತಾ ಇರು." ಅಜ್ಜಿ ನುಡಿದರು. ಶಕುಂತಲ ಪುನಃ ಕುರ್ಚಿಯ ಮೇಲೆ ಕುಳಿತಳು.

"ಇನ್ನೇನು ಸಮಾಚಾರ ಶೀನಿ...." ತಾನೇ ಮಾತಿಗೆ ಆರಂಭಿಸಿದಳು ಶಕುಂತಲ.

"ಏನು ಹೇಳ್ಲಿ ಶಕುಂತಲ ...? ಪರೀಕ್ಷೆ ಆಯ್ತು. ರಜಾ ಬಂತು. ನಿಮ್ಮನ್ನೆಲ್ಲಾ ನೋಡ್ಕೊಂಡು ಹೋಗೋಣಾ ಅನ್ನಿಸ್ತು....ಅದಲ್ದೆ ನಿನ್ನ ಅಪ್ಪಣೆ ಪಾಲಿಸಬೇಕಾಗಿತ್ತಲ್ಲ ...ಅಮ್ಮನ್ನ ಕರಕೊಂಡು ಬಾ ಅಂತ ಹೇಳಿದ್ಯಲ್ಲ. ಕರಕೊಂಡು ಬಂದೆ...."

"ನೀನೇನಪ್ಪ ಫಸ್ಟ್ ಕ್ಲಾಸ್ ಗ್ಯಾರಂಟಿ. ಬುದ್ಧಿವಂತ....!"

"ಅಹಹ ! ನೀನೇ ಹೇಳ್ಬೇಕು....?!....ನಾನು ಫಸ್ಟ್ ಕ್ಲಾಸು ಅಂತ....! ಆದ್ರೂ ಚೆನ್ನಾಗಿ ಮಾಡಿದ್ದೀನಿ ಅನ್ನು ; ಪಾಸಂತೂ ಆಗುತ್ತೆ. ಸೆಕೆಂಡ್ ಕ್ಲಾಸು ಬಂದರೂ ಬರಬಹುದು...."

"ಆಮೇಲೆ ಏನ್ಮಾಡ್ತಿ...."

"....ಮದ್ವೆ ಆಗ್ತೀನಿ....ಹೆಂಡ್ತಿ ಜೊತೇಲಿ ಬೆಂಗಳೂರೆಲ್ಲಾ ಸುತ್ತಿಕೊಂಡು ಸುಖವಾಗಿರ್ತೀನಿ...." ನಗೆಯಾಡಿದ.

ಶಕುಂತಲ ಜೋರಾಗಿ ನಕ್ಕಳು.

"ಹೆಣ್ಣು ಯಾರು....?" ಪ್ರಶ್ನಿಸಿ ಪುನಃ ನಕ್ಕಳು. ಶೀನಿ ಉತ್ತರ ಕೊಡಲಿಲ್ಲ. ಶಕುಂತಲಳ ಮುಖವನ್ನು ನೋಡಿ ನಕ್ಕ.

ಸ್ವಲ್ಪ ಹೊತ್ತು ಮೌನವಾಗಿ ಇಬ್ಬರೂ ಕುಳಿತರು.

"ನಿನ್ನ ಮದ್ವೆ ವಿಷಯ ..? ಎಲ್ಲಾದರೂ ಗಂಡನ್ನ ನೋಡಿದ್ದಾರಾ? ....ನಿನ್ನೇನೊ ಯಾರಾದ್ರೂ ಮದ್ವೆ ಆಗ್ತಾರೆ...." ನುಡಿಯುವಾಗ ಏನೋ ಅವನ ಎದೆಯನ್ನು ಕರೆಯುತ್ತಿತ್ತು. "ಮದ್ವೆಗೆ ನನ್ನ ಕರೀತೀತಾನೆ....?" ಪುನಃ ನುಡಿದ.

"ನಿನ್ನ ಕರೀದೆ ಮರೆಯೋಕಾಗುತ್ತಾ....!" ಹೇಳಿ ತೀಕ್ಷ್ಣವಾಗಿ ಅವನನ್ನು ನೋಡಿದಳು.

"ಏನೋ ಈಗಿನ ಕಾಲದ ಹುಡ್ಗಿಯೋರನ್ನ ನಂಬೋದು ಕಷ್ಟ. ಒಂದು ಗಳಿಗೆ ಇದ್ದ ಮನಸ್ಸು ಇನ್ನೊಂದು ಗಳಿಗೆ ಇರೋಲ್ಲ."

"ಅಂಥಾ ಚಂಚಲ ಮನಸ್ಸು ನಿಮ್ಮಂಥಾ ಗಂಡ್ಸರಿಗೆ....ನಮ್ಗೆ ಹೆಂಗ್ಸರದು ಗಟ್ಟಿ ಮನಸ್ಸು........ಆಡೋದೊಂದು ಮಾಡೋದೊಂದು ನಮ್ಗೆ ಬರೋಲ್ಲ. ಆಡಿದ್ದೇ ನಾವು ಮಾಡೋರು."

"ಅಹಹ ! ನೀನೇ ಹೇಳ್ಬೇಕು ...!! ಇದೆಲ್ಲಾ ರಾಮಾಯಣ, ಭಾರತದ ಕಾಲದಲ್ಲಿ....ಇದು ಕಲಿಗಾಲ. ಇಲ್ಲಿ ಯಾರನ್ನು ಬೇಕಾದ್ರೂ ನಂಬಬಹುದು, ಆದ್ರೆ ಈ ಹೆಂಗ್ಸರನ್ನು ನಂಬೋ ಹಾಗಿಲ್ಲ...."

"ಅದ್ಯಾಕೆ ಹೆಂಗ್ಸರ ಮೇಲೆ ಅಷ್ಟೊಂದು ಸಿಟ್ಟು ?! ಯಾರಾದ್ರೂ

ನಿಂಗೆ ಮೋಸ ಮಾಡಿದ್ದಾರಾ ?" ಪ್ರಶ್ನಿಸುವಾಗ ಒಳಗೇ ನಗುತ್ತಿದ್ದಳು.

" ಇನ್ನೂ ಪೂರ್ತಿಯಾಗಿ ಮೋಸ ಮಾಡಿಲ್ಲ. ಮಾಡಬಹುದು ಅಂತ ತಿಳ್ಕೊಂಡಿದ್ದೇನೆ...." ನುಡಿಯುತ್ತ ಶಕುಂತಲಳನ್ನು ದುರಗುಟ್ಟಿ ನೋಡಿದ.

" ಹೆಂಗ್ಸರು ಮೋಸ ಮಾಡೋದೇ ಇಲ್ಲ....ಸಾಮಾನ್ಯವಾಗಿ ನೀವೇ ಮೋಸ ಹೋಗ್ತೀರಿ....ಮೋಸ ಮಾಡಿದಳು ಅಂತ ನಮ್ಮ ಜಾತೀನೆಲ್ಲಾ ದೂರ್ತೀರಿ...." ಶಕುಂತಲ ಗಂಭೀರವಾಗಿ ನುಡಿದಳು.

" ಹೆಂಗ್ಸರನ್ನು ನಂಬೋದು ಕಷ್ಟ. ಅವರ ಮನಸ್ಸನ್ನು ಅರಿಯೋದು ಇನ್ನೂ ಕಷ್ಟ."

" ಹೆಂಗ್ಸರನ್ನು ಅರ್ಥ ಮಾಡಿಕೊಳ್ಳೋದು ಬಹಳ ಸುಲಭ. ಆದರೆ ನಿಮ್ಮ ಬುದ್ಧಿ ನಿಮ್ಮನ್ನು ಮೋಸ ಮಾಡುತ್ತೆ. ಅವರ ತಿಳಿ ಮನಸ್ಸು ನಿಮ್ಮ ಅಪನಂಬಿಕೆ ಬುದ್ಧಿಗೆ ಬಗ್ಗಡವಾಗಿ ಕಾಣುತ್ತೆ. ಅವಳು ನಿರ್ವಿಕಾರವಾಗಿ ಹುಸಿನಕ್ಕರೂ ನೀವು ಏನೇನೊ ಅರ್ಥ ಮಾಡಿಕೊಳ್ತೀರಿ.... ಈ ತಪ್ಪು ಭಾವನೆ, ಯೋಚನಾ ಶೂನ್ಯತೆಯೇ ನಿಮ್ಮನ್ನು ಮೋಸ ಮಾಡೋದು... ಹೆಂಗಸಲ್ಲ...."

" ನೀನು ಹೇಳೋದನ್ನ ನಾನು ಪೂರ್ಣವಾಗಿ ಸಂಬಲಾರೆ. ಹೆಂಗಸು ನನಗೆ ಒಂದು ಸಮಸ್ಯೆ ! ಆಕೆಯ ಮನಸ್ಸು ಬಿಡಿಸಲಾರದ ಒಗಟು. ಆಕೆಯ ಮನಸ್ಸು ಹೂವಿನಷ್ಟು ಕೋಮಲ ಅಂತ ಕವಿಗಳೇನೋ ಹೇಳಿದ್ದಾರೆ.... ಅವರು ಕಲ್ಪನಾಗಾಮಿಗಳೇ ಹೊರತು ವ್ಯವಹಾರತಜ್ಞರಲ್ಲ. ನಿಜವಾಗಿ ಅವರ ಮನಸ್ಸು ಕಲ್ಲಿನಷ್ಟು ಕಠಿನ. ಯಾವುದಕ್ಕೂ ಕರಗಲ್ಲ. ದೇಹಮಾತ್ರ ಮೃದು ಆದರೆ ಹೃದಯವಲ್ಲ. ಇಂಥಾ ಹೆಂಗಸರ ಮನಸ್ಸನ್ನು ಅರಿಯೋದು ಬಹಳ ಕಷ್ಟ. ನೋಡು ಶಕುಂತಲ. ಉದಾಹರಣೆಗೆ ನಿನ್ನನ್ನೇ ತೆಗೆದುಕೊ. ನಿನ್ನೊಡನೆ ಹುಡುಗನಾಗಿದ್ದಾಗಿನಿಂದ ಆಡಿದ್ದೇನೆ. ಒಟ್ಟಿಗೆ ಬೆಳೆದಿದ್ದೇವೆ. ಆದರೆ ಇನ್ನೂ ನೀನೂ ನನಗೆ ಒಂದು ಸಮಸ್ಯೆ. ನಿನ್ನ ಮನಸ್ಸು ನನಗೆ ಒಂದು ಸಮಸ್ಯೆ. ನಿನ್ನ ಮನಸ್ಸು ನನಗೆ ಇದುವರೆವಿಗೂ ಅರ್ಥವಾಗಿಲ್ಲ."

" ಹೌದು ಶೀನಿ. ಇದನ್ನು ನಾನು ಬಲ್ಲೆ, ನನ್ನನ್ನು ನೀನು ಅರ್ಥ ಮಾಡಿಕೊಂಡಿಲ್ಲ. ಅರ್ಥವಾಗಿಲ್ಲವೆಂದು ಸುಮ್ಮನೆ ಹೇಳಿ ಮುರುಗಿದರೆ ಸಾಲದು. ಅರ್ಥಮಾಡಿಕೊಳ್ಳುವ ಮನಸ್ಸು ಬೇಕು. ಒಂದು ಕ್ಷಣದಲ್ಲಿ ಒಂದು ಮಾತಿನಲ್ಲಿ ಮನುಷ್ಯನನ್ನು ಅರ್ಥಮಾಡಿಕೊಳ್ಳಬಹುದು. ನಾನು ನಿನ್ನನ್ನು ಸಂಪೂರ್ಣವಾಗಿ ಅರ್ಥಮಾಡಿಕೊಂಡಿದ್ದೇನೆ. ನೀನು ನನ್ನನ್ನು ಅರ್ಥಮಾಡಿಕೊಳ್ಳಲಾರೆ."

" ಏನು ಅರ್ಥಮಾಡಿಕೊಂಡಿದ್ದಿ ನನ್ನನ್ನು." ಉತ್ಸುಕನಾಗಿ ಪ್ರಶ್ನಿಸಿದ.

ನೀನು ಬಹಳ ಬುದ್ಧಿವಂತ. ಓದಿದವನು ಇಷ್ಟರಲ್ಲೆ ಬಿ. ಎಸ್ಸಿ. ಗ್ರಾಜುಯೇಟು....ನನ್ನಲ್ಲಿ ನಿನಗೆ ತುಂಬಾ ಅಭಿಮಾನವಿದೆ....ಸರಿತಾನೆ ?" ಕಿಲಕಿಲನೆ ನಕ್ಕಳು.

" ಸರಿ ಶಕುಂತಲ. ನೀನು ಹೇಳಿದ್ದು ನೂರುಪಾಲು ಸತ್ಯ. ನಿನ್ನಲ್ಲಿ ನನಗೆ ತುಂಬ ಅಭಿಮಾನವಿದೆ." ಕುರ್ಚಿಯಿಂದ ಎದ್ದು ಶಕುಂತಲಳ ಕುರ್ಚಿಯ ಹಿಂದೆ ಬಂದು ನಿಂತು ನುಡಿದ.

ಶಕುಂತಲ ಅತ್ತ ತಿರುಗಿಪುನಃ ಜೋರಾಗಿ ನಕ್ಕಳು.

" ನಿನ್ನ ಮುಖಕ್ಕೆ ನಗು ಚೆನ್ನ....ಹೀಗೆ ವಕ್ರವಾಗಿ ಜೋರಾಗಿ ನಗ ಬೇಡ ಶಕುಂತಲ....ಏಕೊ ಈ ನಗು ನನ್ನನ್ನು ತಿವಿಯುತ್ತೆ."

ಪುನಃ ಉತ್ತರವಾಗಿ ಗಹಗಹಿಸಿದಳು.

" ನೀನು ಅರ್ಥವಾಗೊಲ್ಲ ಶಕುಂತಲ....! ನಿನ್ನ ನಗು ಒಂದು ಸಮಸ್ಯೆ! ನಗು ಮನಸ್ಸನ್ನು ಪ್ರತಿಬಿಂಬಿಸುತ್ತಂತೆ. ಅದು ಸುಳ್ಳು....ಅದು ಈಗ ಏನನ್ನೂ ತಿಳಿಸೋದಿಲ್ಲ. ನಗುವುದು ಕೆಲವರ ಅಭ್ಯಾಸ. ಕೆಲವರಿಗೆ ಮನಸ್ಸಿನಲ್ಲಿರೋ ದನ್ನು ಮುಚ್ಚಿಡುವ ಸಾಧನ. ಇನ್ನು ಕೆಲವರಿಗೆ ತಮ್ಮ ಹಲ್ಲನ್ನು ಪ್ರದರ್ಶಿ ಸುವ ಸಾಧನವೂ ಹೌದು....ನಿನ್ನ ನಗು ಇವರಲ್ಲಿ ಯಾವುದನ್ನು ತಿಳಿ ಸುತ್ತೋ ನಾನು ಕಾಣೆ....ನಿನ್ನ ನಗು ಒಂದು ಸಮಸ್ಯೆ...." ಗೋಪಾಲನ ನುಡಿಯಲ್ಲಿ ಅರ್ಥವಾಗದ ತೊಡಕಿನ ಝುಂಜಾಟವಿತ್ತು.

" ಒಂದಲ್ಲ ಒಂದು ದಿನ ಅರ್ಥವಾಗುತ್ತೆ ಬಿಡು ಶೀನಿ. ಯಾಕೆ ಅರ್ಥ ವಾಗ್ಲಿಲ್ಲ ಅಂತ ಸುಮ್ನೆ ತಲೆ ಕೆರಕೊಳ್ತಿ....ಏಳು. ಎದ್ದೇಳು ಎಲ್ಲಾದ್ರೂ ಹೋಗಿ ಸುತ್ತಾಡಿಕೊಂಡು ಬರೋಣಾ....ಕೂತೂ ಕೂತೂ ಸಾಕಾಗಿದೆ ನಂಗೆ." ಮೇಲಕ್ಕೆ ಎದ್ದಳು.

ಶೀನಿ ಉತ್ಸಾಹದಿಂದ ಮುಂದೆ ನಡೆದ. ಶಕುಂತಲ ಹಿಂದೆ ಹೋದಳು.

" ಲಲಿತಾ ಹ್ಯಾಗಿದ್ದಾಳೆ ಶೀನಿ...." ದಾರಿಯಲ್ಲಿ ಪ್ರಶ್ನಿಸಿದಳು.

" ಪಕ್ಕದ ಮನೇಲಿರೋಳು ನಿಂಗೆ ಗೊತ್ತಿಲ್ವೆ ? ಹ್ಯಾಗಿದ್ದಾಳೆ ಅಂತ ! ಇವತ್ತು ಊರಿನಿಂದ ಬಂದೋನು ನಂಗೇನು ಗೊತ್ತು. ಅಪ್ಪ ಸಂಪಾದಿಸಿದ್ದು ತಿಂದುಕೊಂಡು ಬೆಲೂರ್ನ ಊದಿದಾಗೆ ಊದ್ತಾ ಇದ್ದಾಗಿದೆ." ಬೇಜಾರಿನಿಂದ ಉತ್ತರವಿತ್ತ.

" ಇಲ್ಲ ಶೀನಿ....ನಂಗೆ ಅವಳ ವಿಷಯ ಹೆಚ್ಗೇ ಏನೂ ಗೊತ್ತಿಲ್ಲ.

ಅವಳು ನನ್ನ ಹತ್ರ ಬಾಳ ಕಡ್ಮೆ ಮಾತ್ನಾಡ್ತಾಳೆ. ಅವಳ ಮನಸ್ಸಿಗೂ ನನ್ನ ಮನಸ್ಸಿಗೂ ಎಂದೂ ಹೊಂದಿಯೋಲ್ಲ. ಅವಳದ್ದೆಲ್ಲಾ ಮಾಡರ್ನ್ ವ್ಯೂಸ್.... ನಂದು ಬ್ಯಾಕ್‌ವರ್ಡ್ ವ್ಯೂಸ್. ಅವಳ ಮಾತಿನಲ್ಲೆ ಆರ್ಥೋಡಾಕ್ಸ್ ವ್ಯೂಸ್...ಅವಳು ಕಾಲೇಜಿಗೆ ಸೇರೊ ಹುಡುಗಿ. ನಾನು ಮನೇಲಿ ಕೂತ್ಕೊಳ್ಳೊ ಹೆಣ್ಣು. ಕ್ಲಾಸಿದ್ದಾಗ ಕ್ಲಾಸಿನ ಹತ್ತಿರ ಏನಾದ್ರೂ ಮಾತ್ನಾಡ್ತಾ ಇದ್ದೆವು....ಈಗ ಬರೋದು ಹೋಗೋದು ಅಷ್ಟಕ್ಕಷ್ಟೆ ಮೊದ ಲಿಂದ್ಲೂ....ಅದ್ರೆ ಬಾಳ ಒಳ್ಳೇಳು ಹುಡುಗಿ. ಹೂವಿನಷ್ಟು ಕೋಮಲ ಮನಸ್ಸು. ಏನಾದ್ರೂ ಮನಸ್ಸಿಗೆ ಹತ್ತಿದ್ರೆ ಸಾಕು ಅದನ್ನೇ ಹಚ್ಚಿಕೊಂಡು ನರಳ್ತಾಳೆ. ಮನಸ್ಸಿಗೆ ಹೆಚ್ಚಿಗೆ ನೋವಾದ್ರೆ ಪ್ರಾಣಕ್ಕೇ ಏನ್ಮಾಡಿಕೊಳ್ಳೋಕೂ ಹೇಸಲ್ಲ."

"ಅವಳೊಬ್ಬಳು ಮಂಗ....! ಅವಳ ಮಾತ್ಯಾಕೆ ಬಿಡು ಈಗ." ನುಡಿ ಯಲ್ಲಿ ಬೇಸರ ಮಿಡಿದಿತ್ತು.

ಶಕುಂತಲ ಒಳಗೇ ನಕ್ಕಳು.

"ನೀನು ಅವಳನ್ನು ಅರ್ಥ ಮಾಡಿಕೊಂಡಿಲ್ಲ ಶೀನಿ...."

"ಅರ್ಥ ಮಾಡಿಕೊಳ್ಳಬೇಕಾದ ಪ್ರಮೇಯವೇ ಇಲ್ಲ....ಅರ್ಥವಾಗ್ದೆ ಇರೋದೇ ಒಳ್ಳೇದು." ಏನೊ ನಿರ್ಧಾರವಿತ್ತು ಮಾತಿನಲ್ಲಿ.

"ಅಲ್ಲೇ ಶೀನಿ ನೀನು ತಪ್ಪುತ್ತಿರುವುದು...."

"ಏನು ತಪ್ಪು....?"

"ಯಾವಾಗಲೂ ಮನುಷ್ಯರನ್ನು ಪೂರ್ಣ ವಿಶ್ಲೇಶಿಸಿ ನೋಡಿ ಅರ್ಥ ಮಾಡಿಕೊಳ್ಳಲು ಪ್ರಯತ್ನಿಸ ಬೇಕು. ಇಲ್ಲದೆ ಹೋದರೆ ಮನಸ್ಸು ಅಪಾರ್ಥ ಗಳ ಜೇನು ಗೂಡಾಗಿ ಹೋಗುತ್ತದೆ. ವ್ಯಕ್ತಿಯ ಪರಿಚಯ ಪೂರ್ಣವಾಗಿ ಆಗುವ ಹೊತ್ತಿಗೆ ತನ್ನ ಸತ್ವವನ್ನು ಸಂಪೂರ್ಣವಾಗಿ ಕಳೆದು ಕೊಂಡಿರು ತ್ತಾನೆ. ಆಗ ಅವನಿಗೆ ಬದುಕು ಶೂನ್ಯವಾಗಿ ಕಂಡರೂ ಅತಿಶಯವೇನಿಲ್ಲ."

"ಹೌದು ಶಕುಂತಲ....ನೀನು ಹೇಳುವುದು ಸರಿ....ಬದುಕು ಶೂನ್ಯ ವಾಗಿ ಕಾಣುತ್ತೆ."

"ಮೊದಲು ಸ್ವಲ್ಪ ವಿರೋಧ ತೋರಿಬಂದರೂ ಸರಿ. ಮನುಷ್ಯರನ್ನು ಅರ್ಥ ಮಾಡಿಕೊಂಡ ಹೊರತೂ ಯಾವ ಆಶೋತ್ತರಗಳ ಗಾಳಿ ಗೋಪುರ ವನ್ನು ಕಟ್ಟಿ ಕಲ್ಪನೆಯ ನಿಲ್ಮನೆಯ ರಾಜ ಸುಖವನ್ನು ಅನುಭವಿಸುವ ವಿಚಾರವನ್ನು ಮಾಡಬಾರದು."

"ಸಾಕು....ಶಕುಂತಲ. ನಿನ್ನ ಮಾತು ನನ್ನ ಕಿವಿಗೆ ಹಿಡಿಸುತ್ತಿಲ್ಲ.

ನಾನು ಲಲಿತಳನ್ನು ಎಂದೂ ಅರಿಯ ಬಯಸಿಲ್ಲ. ಬಯಕೆಯೂ ಇಲ್ಲ." ನಿರ್ಧಾರವಿತ್ತು ನುಡಿಯಲ್ಲಿ. ಶಕುಂತಲಳಿಗೆ ಮುಂದೇನು ಹೇಳಬೇಕೆಂಬುದು ತೋಚದಾಯಿತು. ಮಾತು ಹೀಗೇ ಮುಂದೆ ಸಾಗಬಹುದೆಂದು ತಿಳಿದಿದ್ದಳು. ಅದಕ್ಕೇ ಇನ್ನು ಏನು ಮಾತನಾಡಬೇಕೆಂದು ಯೋಚಿಸಿರಲಿಲ್ಲ.

ಇಬ್ಬರೂ ಸ್ವಲ್ಪ ದೂರ ಮಾತಿಲ್ಲದೆ ಮುಂದೆ ಸಾಗಿದರು.

"'ಅರಿಯ ಬಯಸಿಲ್ಲ' ಎಂದು ಹೇಳುವುದು ಸರಿಯಲ್ಲ ಶೀನಿ. ಆ ಎಲ್ಲರನ್ನು ಅರಿತು ಎಲ್ಲರನ್ನು ವಿಮರ್ಶಿಸಿ ನೋಡಿ ಕೊನೆಗೆ ಎರಡು ವ್ಯಕ್ತಿಗಳಲ್ಲೂ ಸಾಮರಸ್ಯ ಕಂಡು ಬಂದಾಗ ಒಂದು ನೆಲೆಗೆ ತಲುಪುವುದು ಸರಿ, ಶೀನಿ. ವ್ಯಕ್ತಿಯನ್ನು ತಿಳಿಯದೇ ಸುಮ್ಮನಿರುವುದು ಸರಿಯಲ್ಲ.

" ಸರಿ ತಪ್ಪಿನ ವಿಷಯವೇ ಇಲ್ಲ ಶಕುಂತಲ ಇಲ್ಲಿ. ನನ್ನ ಮನಸ್ಸು ನಿರ್ಧರಿಸಿದ್ದು ಸರಿ. ಅದಕ್ಕೆ ವ್ಯತಿರಿಕ್ತವಾಗಿ ಎಂದೂ ನಡೆಯಬಯಸುವುದಿಲ್ಲ."

" ಮನುಷ್ಯ ಏನು ಬೇಕಾದರೂ ಬಯಸಬಹುದು! ಮನಸ್ಸು ಬಯಸಿದ್ದನ್ನೆಲ್ಲಾ ದೊರಕಿಸಿಕೊಳ್ಳಲು ಪ್ರಯತ್ನಿಸುವುದು ಮನುಷ್ಯನ ದಾಸ್ಯತೆಯಲ್ಲವೆ ?"

" ಹೌದು! ದಾಸ್ಯತೆ. ಈ ದಾಸ್ಯತೆಯಲ್ಲೆ ಮನುಷ್ಯನಿಗೆ ಒಂದು ಶಾಂತಿ ಲಭಿಸುತ್ತದೆ."

"ಫಲಾಫಲಗಳನ್ನು ವಿಮರ್ಶಿಸಿ ಒಳಿತನ್ನು ಸ್ವೀಕರಿಸುವುದು ಬುದ್ಧಿಯ ಕೆಲಸವಲ್ಲವೆ ? ದಾಸಭಾವ ಬಹು ಕೇಡಿನದು. ಸೇವಾವೃತ್ತಿಯಲ್ಲಿ ಮನುಷ್ಯ ತನ್ನತನವನ್ನು ಕಳೆದುಕೊಳ್ಳುತ್ತಾನೆ."

" ಮನಸ್ಸು ಎಂದೂ ತನ್ನ ಸ್ವಾಮಿಗೆ ದ್ರೋಹ ಬಯಸುವುದಿಲ್ಲ."

" ಅದು ನಿಜ. ಆದರೆ ಮನುಷ್ಯ ಮನಸ್ಸನ್ನು ಸರಿಯಾಗಿ ಅರಿಯದೆ ಇದ್ದರೆ....?....ಅಥವ ಒಬ್ಬನ ಮನಸ್ಸಿನ ಬಯಕೆ ಇನ್ನೊಬ್ಬರ ಇಚ್ಛೆಗೆ ಪೂರ ವಿರೋಧವಾಗಿದ್ದರೆ? ಹಾಗೂ ಹುಚ್ಚು ಮನಸ್ಸಿನ ಬಯಕೆಯನ್ನು ಪೂರೈಸಲು ಸಾಧ್ಯವೆ ?"

" ಸಾಧ್ಯವೊ ಅಸಾಧ್ಯವೊ ನಾನು ಇನ್ನೂ ನಿರ್ಧರಿಸಿಲ್ಲ. ಸಾಧ್ಯವೆಂದು ತಿಳಿದಿದ್ದೇನೆ. ಆದರೆ ಈಗ ಇದಕ್ಕಾಗಿ ಸ್ವಲ್ಪ ಶ್ರಮಿಸಬೇಕು ಅಂತ ಕಾಣುತ್ತೆ."

" ಶ್ರಮಕ್ಕೆ ಪ್ರತಿಫಲ ದೊರೆಯದಿದ್ದರೆ ಮನಸ್ಸಿಗೆ ಹಚ್ಚಿಕೊಳ್ಳಬಾರದು ಯೋಚನಾಶಕ್ತಿಯಲ್ಲಿ ಕುಂದಿರಲು ಸಾಧ್ಯವಿಲ್ಲ. ಸ್ವಾಮಿನಿಷ್ಠೆ, ಸ್ವಸಾ

ಮರ್ಥ್ಯ ಈ ಯಂತ್ರಯುಗದಲ್ಲಿ ಬಹು ಮುಖ್ಯ ಪಾತ್ರವನ್ನು ವಹಿಸಿದ್ದರೂ.... ತನ್ನ ಬಯಕೆ ಈಡೇರಿಯೇ ತಿರುತ್ತದೆ ಎಂದು ತೀರ್ಮಾನಿಸುವುದು ಬಹು ವೇಳೆ ಸುಳ್ಳಾಗುತ್ತದೆ. ಮನುಷ್ಯ ತನ್ನನ್ನೇ ಪೂರ್ಣವಾಗಿ ಅರಿಯಲಾರದವನು ಇನ್ನೊಬ್ಬರನ್ನು ಅರಿಯುವುದು ತೀರಾ ದುಸ್ಸಾಧ್ಯ. ಆತ್ಮಬಲ, ಸ್ವಸಾಮರ್ಥ್ಯ ತನ್ನ ನೆಲೆಯ ಕಡೆಗೆ ಎಳೆದುಕೊಂಡು ಹೋಗುವ ಒಂದು ಮಹಾ ಸಾಧನವಾದರೂ ಅಂತ್ಯದ ಗುರಿ ಮಾತ್ರ ದೈವ ಇಚ್ಛೆಗೆ ಸೇರಿದ್ದು ಅಂತ ನಾನು ತಿಳಿದಿದ್ದೇನೆ. ನಾನು ತಿಳಿದಿಸುವುದನ್ನೆ ಸತ್ಯವೆಂದು ಸಾರುತ್ತಿಲ್ಲ." ಹೇಳಿ ಶೀನಿಯನ್ನು ತೀಕ್ಷ್ಣವಾಗಿ ನೋಡಿದಳು.

"ಆಶೆ ನಿರಾಶೆಯಾದರೆ ಬಳಲಬಾರದು. ಹೊಸ ದಾರಿಯನ್ನು ರೂಪಿಸಿ ಮುಂದೆ ಸಾಗಬೇಕು." ಪುನಃ ನುಡಿದಳು.

"ನನ್ನ ಮನಸ್ಸು ಎಂದೂ ತಪ್ಪು ದಾರಿ ಹಿಡಿದಿಲ್ಲ. ನನ್ನ ಯಾವ ಆಶೆಯೂ ನಿರಾಶೆಯಾಗಿಲ್ಲ ...ಆದ್ದರಿಂದ ಎಂದೂ ನಾನು ಆಶಾವಾದಿಯೇ ?"

"ವ್ಯಕ್ತಿಯ ಆಸೆ ಸಂಪೂರ್ಣವಾಗಿ ಸ್ವಂತದ್ದು. ಆದ್ದರಿಂದ ಈ ಆಸೆಯಲ್ಲಿ ಏಕತೆಯನ್ನು ಕಂಡಕಡೆ ಆಸೆಯ ಪ್ರತಿಫಲವನ್ನು ಕಾಣಲು ಬಯಸಬೇಕು. ಇಲ್ಲದಿದ್ದರೆ ನಿರಾಶೆಯನ್ನು ಸ್ಥೈರ್ಯದಿಂದ ಎದುರಿಸುವ ಮನೊಧಾರ್ಡ್ಯ ಪಡೆದಿರಬೇಕು...."

"ನಿನ್ನ ಮಾತೇ ನನಗೆ ಅರ್ಥವಾಗುತ್ತಿಲ್ಲ ಶಕುಂತಲ. ನನ್ನ ಆಶೆ ನಿರಾಶೆಯಾಗುವುವೆ ? ಅದು ಎಂದೂ ಆಗದು."

"ಅದೇ ನಿನ್ನ ತಪ್ಪು ತಿಳುವಳಿಕೆ....ಏನು ಬೇಕಾದರೂ ಆಗಲು ಸಾಧ್ಯ. ಏನು ಬೇಕಾದರೂ ಹಿಂದೆ ಕಾರಣವಿದ್ದೇ ಇರುತ್ತದೆ. ಈ ಕಾರಣ ಕೆಲವು ವೇಳೆ ಗುಪ್ತವಾಗಿರಬಹುದು. ಆದ್ದರಿಂದ ಯಾವುದನ್ನೂ ನಿರ್ಧರಿಸಿ ಹಾತೊರೆದು ನಿಂತಿರುವುದು ತಪ್ಪು." ನಕ್ಕಳು.

"ನಿನ್ನನ್ನು ನಾನು ಹೆಚ್ಚು ಅರಿಯಹೋದಷ್ಟೂ ನೀನು ಸಮಸ್ಯೆಯಾಗುತ್ತಿ .. ನಿನ್ನನ್ನು ಎಂದೂ ನಾನು ಅರ್ಥಮಾಡಿಕೊಳ್ಳಲಾರೆ....!" ತನ್ನ ಅಬಲತೆಯನ್ನು ತೋಡಿಕೊಂಡ.

"ಅರಿಯುವುದು ಬಹಳ ಕಷ್ಟ." ಹೇಳಿ ನಕ್ಕಳು.

"ಹೊತ್ತಾಯ್ತು ಮನೆಗೆ ಹೋಗೋಣಾ...." ಮನೆಯ ಕಡೆ ತಿರುಗಿದಳು.

ಶೀನಿ ಅನುಸರಿಸಿದ

ಶಕುಂತಲ ಮನೆಗೆ ಬಂದಾಗ ನಡುಮನೆಯಲ್ಲಿ ತಂದೆ, ತಾಯಿ, ಅಜ್ಜಿ ಮೂವರೂ ಕುಳಿತು ವಿಚಾರ ಗೋಷ್ಠಿಯನ್ನು ನಡೆಸಿದ್ದರು. ಅವರನ್ನು ನೋಡಿಕೊಂಡೆ ಶಕುಂತಲ ತನ್ನ ರೂಮಿನ ಕಡೆಗೆ ಹೊರಟಳು.

"ಬಾ ...ಶಕುಂತಲ. ಇಲ್ಲೇ ಕೂತ್ಕೊ ರೂಮಿಗ್ಹೋಗಿ ಏನ್ಮಾಡ್ತಿ" ಅಜ್ಜಿ ಕೂಗಿದರು.

"ಕಥೆ ಪುಸ್ತಕ ಇದೆ. ಓದಬೇಕಾಗಿತ್ತು. ಅರ್ಧಕ್ಕೆ ನಿಲ್ಲಿಸಿದ್ದೆ." ಶಕುಂತಲ ನುಡಿದಳು.

"ಸುಮ್ನೆ ಕೂತ್ಕೊ ಬಾರೆ....ನಿನ್ನ ಓದು ಇದ್ದೇ ಇರುತ್ತೆ....ಆ ಮೇಲೆ ಓದಿದರಾಯ್ತು" ತಾಯಿ ನುಡಿದಳು. "ಶೀನಿ ಮನೆಗೆ ಹೋದ್ನಾ..?" ತಂದೆ ಪ್ರಶ್ನಿಸಿದರು.

"ಶೀನಿ ಬಹಳ ಒಳ್ಳೇ ಹುಡುಗ...ವೆಂಕಣ್ಣ. ಬೆಂಗಳೂರಿಗೆ ಹೋದ ಮೇಲೆ ಮೈ ಕೈ ತುಂಬಿಕೊಂಡು ಚೆನ್ನಾಗಿದ್ದಾನೆ...." ಸಾವಿತ್ರಮ್ಮ ಆಡಬೇಕೆಂದಿದ್ದ ಮಾತಿಗೆ ನೇರವಾಗಿ ಬಂದರು.

"ನಮ್ಮ ಶಕುಂತಲಳನ್ನು ಕಂಡ್ರೆ ಅವನಿಗೆ ತುಂಬಾ ಅಭಿಮಾನ... ಅಂತ ಕಾಣುತ್ತೆ. ನಮ್ಮಲ್ಲೂ ಈಗ್ಲೂ ಮೊದಲಿನ ವಿಶ್ವಾಸಾನೇ ಇಟ್ಕೊಂಡಿದ್ದಾನೆ....ಊರಿಗೆ ಬಂದೋನೆ ನಮ್ಮನ್ಗೆ ಬಂದ. ಸೀತಮ್ಮ ನುಡಿದಳು.

"ಹೌದು! ನನ್ನ ಕಂಡ್ರೆ ಅವನಿಗೆ ಮೊದಲಿಂದ್ಲೂ ಬಹಳ ಅಭಿಮಾನ....ನಂಗೂ ಅಷ್ಟೆ....!" ಶಕುಂತಲ ನುಡಿದು ತಲೆ ತಗ್ಗಿಸಿ ಹುಸಿಯಾಗಿ ಸೆರಗಿನ ಮರೆಯಲ್ಲಿ ನಕ್ಕಳು.

"ನಾಚ್ಕೆ ಇಲ್ದೋಳೇ ಸುಮ್ನಿರು...." ತಾಯಿ ಗದರಿಸಿದಳು.

"ಯಾಕಮ್ಮ ನಾಚ್ಕೆ...? ಇರೋದು ಇದ್ದ ಹಾಗೇ ಹೇಳಿದ್ರೆ....?! ನಾಚ್ಕೆ ಅಂತೆ ನಾಚ್ಕೆ...." ಶಕುಂತಲ ನುಡಿದಳು.

"ಥೂ! ನೀನೊಬ್ಬಳು ಗಂಡುಬೀರಿ...." ಸಾವಿತ್ರಮ್ಮ ನಕ್ಕು ನುಡಿದಾಗ ಅಭಿಮಾನ ತುಂಬಿತ್ತು.

"ಯಾಕಮ್ಮ ನಾನೇನು ಅವನ್ನ ಮದ್ವೆ ಆಗ್ಬೇಕಾಗಿದ್ಯೆ....ನಾಚಿಕೊಳ್ಳೋಕೆ....?" ಶಕುಂತಲ ಪ್ರಶ್ನಿಸಿದಾಗ, ತಂದೆ, ತಾಯಿ, ಅಜ್ಜಿ ಮೂವರೂ ಜೋರಾಗಿ ಗಹಗಹಿಸಿದರು. ಸ್ವಲ್ಪ ಹೊತ್ತು ನೆನೆದು ನೆನೆದು ನಗುತ್ತಿದ್ದರು.

"ನಿನ್ಯಾಕೆ ಇಲ್ಲಿಗೆ ಕರೆಸಿದ್ದು ಅಂತ....? ಇದನ್ನು ಕೇಳೋಕೆ?....

ನಿಂಗೆ ಅವನ ಮೇಲೆ ಪ್ರೀತಿ ಇದೆ ತಾನೆ...." ತಂದೆ ಪ್ರಶ್ನಿಸಿದರು.

"ನಮ್ಮ ಕಾಲ್ದಾಗೆ ಹೀಗೆಲ್ಲಾ ಪ್ರಶ್ನಿಸ್ತಾ ಇರ್ಲಿಲ್ಲ. ಈಗ ಕಾಲ ಬದಲಾಯ್ಸಿದೆ......." ಸಾವಿತ್ರಮ್ಮ ನುಡಿದರು. ಶಕುಂತಲ ಮುಖವನ್ನು ನೋಡಿದರು.

"ಹೂಂ ...!" ಅಂದಳು ಶಕುಂತಲ.

"ನಾಚ್ಕೋಳಿಲ್ವಾ....ಒಪ್ಪಿಕೊಳ್ತಾಳೆ ಅಂತ .. " ಸೀತಮ್ಮನವರ ಮುಖ ಅರಳಿತು. ಪ್ರೀತಿಯಿಂದ ಕೈಯನ್ನು ಎತ್ತಿ ಮಗಳ ತಲೆಯನ್ನು ನೇವರಿಸಿದಳು.

"ಮನೇಲಿ ಬೆಣ್ಣೆ ಇಟ್ಕೊಂಡು ಊರೂರು ಅಲದ್ರೂ ಅಂತ! ಎಲ್ಲೆಲ್ಲಿಯೋ ಹುಡುಕಿದ್ದ ಆಯ್ತು ಪಾಪ ಸುಬ್ಬಣ್ಣ ಎಲ್ಲಿ ಎಲ್ಲಿ ಸುತ್ತಾನೊ ?!.... ಇಷ್ಟು ಹೊಳೀಲಿಲ್ಲ. ನಮ್ಗೆ....ಸಮಯದಲ್ಲಿ ನನ್ನ ಬುದ್ಧೀನೇ ಕೆಲ್ಸಾನೇ ಮಾಡೋಲ್ಲ " ರಾಯರು ತಮ್ಮನ್ನೆ ಶಪಿಸಿಕೊಂಡರು.

"ಹಾಗಾದ್ರೆ ಶೀನಿನಾ ಮದ್ವೆಗೆ ಒಪ್ಪಿದ್ದಿ ತಾನೆ....? ಅವನೇನೊ ಒಪ್ಪಿದ್ದಾನೆ ಅಂತ ಕಾಣುತ್ತೆ........ನಿಂಗೂ ಒಪ್ಗೆ ಇದ್ದೇ ಇದೆ ಅಂತ ಕಾಣುತ್ತೆ...." ರಾಯರು ಪ್ರಶ್ನಿಸಿದರು.

"ಇವೇನು ಹೀಗೆ ಕೇಳ್ತಾ ಇದ್ದಿ....ನೋಡಿದ್ರೆ ಗೊತ್ತಾಗಲ್ವೆ ?" ಸಾವಿತ್ರಮ್ಮ ಶಕುಂತಲ ನುಡಿಯುವುದಕ್ಕೆ ಮುಂಚೆಯೇ ನುಡಿದರು.

"ಸುಮ್ನಿರಿ ನಾಕು .. ಪಾಪ ನಾಚ್ಕೆ ಅವಳಿಗು ಯಾರು ಹೂ ಅಗ್ತೀನಿ ಅಂತ ಹೇಳ್ತಾರೆ ಎಲ್ಲರ ಹತ್ತಿರಾನು...." ಸೀತಮ್ಮ ನುಡಿದು ನಲ್ಮೆಯಿಂದ ಮಗಳನ್ನು ನೋಡಿದಳು.

"ನಂಗೊತ್ತಿತ್ತು ಇವಳು ನಿಜವಾಗ್ಯೂ ಒಪ್ಪಿಕೊಳ್ತಾಳೆ ಅಂತ...." ರಾಯರು ನುಡಿದರು.

"ಶೀನಿ ಓದಿದೋನು. ಬುದ್ಧಿವಂತ. ಎಲ್ಲಾ ವಿಧದಲ್ಲೂ ನಮ್ಮ ಶಕುಂತಲಾಗೆ ಓರಗೆಯಾಗಿದ್ದಾನೆ. ಕಟ್ಟುಮಟ್ಟಾಗಿ ಚೆನ್ನಾಗಿದ್ದಾನೆ. ಈ ಹರಾಮಿನಾ ಲಗಾಮು ಹಾಕಿ ಬಗ್ಗಿಸೋಕ್ಕೆ ಅವನೇ ಸರಿ...." ಹುಸಿ ನಕ್ಕರು ಸಾವಿತ್ರಮ್ಮ.

"ಅವರ ತಾಯಿಗೆ ಒಂದು ಮಾತು ಹೇಳಿಬಿಡಿ ..." ಸೀತಮ್ಮ ಆಗಲೇ ಗಂಡನಿಗೆ ಬಲವಂತಪಡಿಸಿದಳು.

ಶಕುಂತಲ ಸುತ್ತಲೂ ಒಮ್ಮೆ ತಿರುಗಿ ನೋಡಿದಳು. ಅವಳಿಗೆ ನಗು ಬರುತ್ತಿತ್ತು.

" ನೋಡು ಹ್ಯಾಗೆ ಆಗ಼್ೆ ನಗ್ತಾ ಇದ್ದಾಳೆ....ನನ್ನ ಚಿನ್ನ...ಮದ್ವೆ ಅಂದ್ರೆ ಯಾರಿಗೆ ಆಸೆ ಇರೊಲ್ಲ...! ಎಲ್ಲಾರಿಗೂ ಅಷ್ಟೆ...." ಅಜ್ಜಿ ಎದ್ದು ಬಂದು ಶಕುಂತಲಳ ಕೆನ್ನೆಯನ್ನು ಸವರಿದಳು.

ಕುಳಿತಿದ್ದ ಶಕುಂತಲ ಎದ್ದು ನಿಂತಳು.

" ಅಲ್ಲ ಅಜ್ಜಿ ನಾನು ಅವನ್ನ ಮದ್ವೆ ಆಗೊಲ್ಲ." ಗಂಭೀರಳಾಗಿ ನುಡಿದು ರೂಮಿಗೆ ಹೊರಟಳು.

" ಏನಂದಿ !" ತಾಯಿ ಕಂಪಿಸಿದಳು.

" ಇಷ್ಟಾ ಇಲ್ಲ ...!!" ತಂದೆ ತೊದಲಿದರು.

" ಬುದ್ದಿ ಗಿದ್ದಿ ಕೆಟ್ಟು ಹೋಗಿದೆ ಏನೆ ನಿಂಗೆ...."!" ಅಜ್ಜಿ ಗದರಿಸಿದರು.

" ಇಲ್ಲ ಅಜ್ಜಿ ಸತ್ಯವಾಗಿ ನಾನು ಶೀನಿನ ಮದ್ವೆ ಆಗೊಲ್ಲ...." ನುಡಿಯಲ್ಲಿ ಅಚಲ ತೀರ್ಮಾನವಿತ್ತು.

" ಅದ್ಯಾಕೆ ? ಅವನು ಚೆನ್ನಾಗಿಲ್ವೆ ? ರೂಪಿಲ್ವೆ ? ವಿದ್ಯೆ ಇಲ್ವೆ ? ಬುದ್ಧಿ ಇಲ್ವೆ ? ಮೊದಲಿಂದ ನೋಡ್ದ ಹುಡ್ಗ....ನಮ್ಮಾತ್ನಲ್ಲಿ ತುಂಬಾ ಭಕ್ತಿ ಇಟ್ಕೊಂಡಿದ್ದಾನೆ ಅಂಥೋನನ್ನು ಮದ್ವೆ ಆಗಲು ನೀನು ಪುಣ್ಯಾ ಮಾಡಿರಬೇಕು...." ಸಾವಿತ್ರಮ್ಮ ಸಿಟ್ಟಾಗಿ ರೂಮಿಗೆ ಧಾವಿಸಿದರು. ಸೀತಮ್ಮ, ತಂದೆಯೂ ಬಂದರು.

" ಹೌದು ಅಜ್ಜಿ....ನೀನು ಹೇಳೋದು ನಿಜ....ನಂಗೆ ಆ ಪುಣ್ಯಾ ಇಲ್ಲ ...ನುಡಿಯುವಾಗ ಕೊರಳು ಕಂಪಿಸಿ ತಂದೆ ತಾಯನ್ನು ನೋಡಲಾರದೆ ಮುಖವನ್ನು ಗೋಡೆಯ ಕಡೆ ತಿರುಗಿಸಿಕೊಂಡಳು.

" ನಾನು ಅವನ್ನ ಮದ್ವೆ ಆಗಲಾರೆ....ಆಗೊಲ್ಲ..." ಪುನಃ ಒತ್ತಿ ಹೇಳಿದಳು.

" ಅದ್ಯಾಕೆ....?" ತಂದೆಯ ಕಣ್ಣು ಕಿಡಿಕಾರಿತು.

" ಅವನಿಗೆ ಹೆಂಡ್ತಿ ಆಗೋಳು ಲಲಿತ. ಅವಳೇ ಅವನಿಗೆ ಸರಿಯಾದ ಜೊತೆ. ಅವನನ್ನು ಮದ್ವೆ ಆಗದೆ ಅವಳು ಬದುಕಿ ಇರಲಾರಳು ...ಅವಳೇ ಅವನನ್ನು ಮದ್ವೆ ಆಗೋಳು ..."

" ತಲೆ ಎಲ್ಲಾ ಹರ್ಟಬೇಡ..." ಸೀತಮ್ಮ ಗದರಿಸಿದಳು.

" ಅವಳ ವಿಷಯ ಬೇಡ. ಈಗ ನಿಂಗೆ ಒಪ್ಪಿಗೇನೇನೊ ಹೇಳು .. " ತಂದೆ ಸಿಡಿದು ಮುಂದೆ ನಿಂತರು.

" ಅದೆಲ್ಲಾ ನಿಮಗೆ ಗೊತ್ತಾಗೋಲ್ಲ, ನಾನು ಆಗಲಾರೆ....ಅಷ್ಟೆ."

ಮಂಚದ ಮೇಲೆ ಕುಳಿತು ತಲೆದಿಂಬಿನಲ್ಲಿ ಮುಖ ಇಟ್ಟು ಗೋಳೋ ಎಂದು ಅತ್ತಳು.

" ಏನಂದೆ....ಕತ್ತೆ...." ತಂದೆ ರೆಟ್ಟೆ ಹಿಡಿದು ಎಳೆದರು.

" ಯಾಕೆ....ಶಕುಂತಲಾ...." ತಾಯಿಯ ಸ್ವರ ಕಂಪಿಸಿತು.

" ಇಲ್ಲಮ್ಮ ನಾನು ಆಗೋಹಾಗಿಲ್ಲ....ಲಲಿತಳೇ ಶೀನೀನಾ ಮದ್ವೆ ಆಗ್ಬೇಕು." ತಂದೆಯ ಕಡೆ ನೋಡುವ ಧೈರ್ಯವಿರಲಿಲ್ಲ.

" ನೀನು ಅವನನ್ನು ಮದ್ವೆ ಆಗೇಆಗಬೇಕು"....ತಂದೆಯ ಸ್ವರದಲ್ಲಿ ಆಜ್ಞೆಯಿತ್ತು.

" ಇಲ್ಲ ...ಆಗಲಾರೆ...." ಶಕುಂತಲ ತಾಯಿಯನ್ನು ಅಪ್ಪಿ ಅವಳ ಎದೆಯಲ್ಲಿ ಮುಖ ಇಟ್ಟಳು.

" ಇಲ್ಲ ...! ಆಗೊಲ್ಲ ...!!...." ತಂದೆ ಹಲ್ಲು ಕಡಿದರು. " ಎದುರು ವಾದಿಸ್ತೀಯಾ....ಕತ್ತೆ...." ಕೈ ಎತ್ತಿ ಕೆನ್ನೆಗೆ ಒಂದು ಹೊಡೆದರು.

" ಅಯ್ಯೋ ...ಇದೇನು ಅಂದ್ರೆ ..." ತಾಯಿ ಕೂಗಿ ಮಗಳ ಕೆನ್ನೆಯ ಮೇಲೆ ಕೈಯಾಡಿಸಿದಳು.

" ನಿಂಗೇನೊ ಬಂದಿತ್ತು...." ಅಜ್ಜಿ ಓಡಿಹೋಗಿ ಶಕುಂತಲಳ ತಲೆಯನ್ನು ತನ್ನ ಎದೆಗೆ ಒರಗಿಸಿಕೊಂಡು ತಲೆಯನ್ನು ಸವರಿದರು. ಕೆನ್ನೆಯ ಮೇಲೆ ಮೃದುವಾಗಿ ಕೈಯಾಡಿಸಿ " ಸುಮ್ನಿರಮ್ಮ....ಶಕುಂತಲ....ಅವನೊಬ್ಬ ....!" ನುಡಿಯುವಾಗ ರಾಯರ ಮೇಲೆ ಸಿಟ್ಟು ಬಂದಿತ್ತು. " ಎದುರು ವಾದಿಸ್ಬಾರದಾಗಿತ್ತು ಶಕುಂತಲ." ತಾಯಿ ಹತ್ತಿರ ಬಂದಳು.

ರಾಯರು ಇನ್ನೂ ಅಲ್ಲೆ ನಿಂತಿದ್ದರು. ಹೊಡೆದ ತಮ್ಮ ಕೈಯನ್ನು ತಾವೇ ಹಿಸುಕಿಕೊಳ್ಳುತ್ತಿದ್ದರು. ಹೊಡೆಯಬಾರದಾಗಿತ್ತೆಂದು ಅನ್ನಿಸುತ್ತಿತ್ತು.

" ನಾನು ಭಾಷೆ ಕೊಟ್ಟಿದ್ದೇನೆ....ಅಮ್ಮ ...ಲಲಿತಳಿಗೆ....ಇಲ್ದೆ ಇದ್ರೆ ನಿಮಗೆ ಎದುರು ನುಡೀತಾ ಇರ್ಲಿಲ್ಲ...." ಬಿಕ್ಕಿ ಬಿಕ್ಕಿ ಅತ್ತಳು.

" ಭಾಷೆ !" ನಿಂತಲ್ಲೆ ಕಂಪಿಸಿದರು ತಂದೆ. " ಭಾಷೆ....!!" ತೊದಲಿದಳು ಸೀತಮ್ಮ.

ಸಾವಿತ್ರಮ್ಮನಿಗೆ ಎಲ್ಲವೂ ಅರ್ಥವಾಗಿತ್ತು. " ಸುಮ್ನಿರು ಶಕುಂತಲ ....ಅಳಬೇಡ...." ಸಮಾಧಾನ ಮಾಡಿದರು.

" ಎಲ್ಲಾದರೂ ಹಾಳಾಗಿ ಹೋಗು...." ತಂದೆ ನುಡಿದು ಹೊರಗೆ ಹೊರಟುಹೋದರು.

"ಏನ್ಮಾಡಿದೆಯೋ....ಶಕುಂತಲ....ನಮ್ಮ ಆಸೇನೆಲ್ಲಾ ಹಾಳುಮಾಡಿದೆಯಲ್ಲೆ...."ತಾಯಿಯ ಹೃದಯದಲ್ಲಿ ಅಭಿಮಾನ ಉಕ್ಕುತ್ತಿದ್ದರೂ ಬಾಯಿ ನುಡಿಯಿತು. ನಲ್ಮೆಯಿಂದ ಕೈ ಮಾತ್ರ ಅವಳ ತಲೆಯನ್ನು ನೇವರಿಸುತ್ತಲೇ ಇತ್ತು.

"ಸುಮ್ನಿರೆ ಸೀತಾ....ಅವಳ್ನ ಕೆಣಕಬೇಡ ...ಬಾಹೋಗೋಣಾ.... ಹೊರಗೆ . ಒಬ್ಳೇ ಇರ್ಲಿ ಸ್ವಲ್ಪ ಹೊತ್ತು ಮನಸ್ಸು ಹಗುರಾಗುತ್ತೆ...." ಸೊಸೆಯನ್ನು ಕರೆದುಕೊಂಡು ಹೊರಗೆ ಬಂದರು.

ಸಾವಿತ್ರಮ್ಮನಿಗೆ ಶಕುಂತಲಳ ಮನಸ್ಸಿನ ಆಂದೋಳನ ಅರ್ಥವಾಗಿತ್ತು.

ಶಕುಂತಲ ಬಹು ಹೊತ್ತು ಕುಳಿತಿದ್ದು ಅನಂತರ ಮಂಚದ ಮೇಲೆ ಉರುಳಿ ಗೋಳಿಗೊ ಎಂದು ಅತ್ತಳು.

"ನಾವೊಂದು ಬಗೆದರೆ ದೈವವೊಂದು ಬಗೆಯುತ್ತೆ...." ಹೊರಗಡೆ ರಾಯರು ನುಡಿದಾಗ ಸ್ವರದಲ್ಲಿ ಮನಸ್ಸಿನ ಅಶಾಂತಿ ಮಿಡಿಯಿತು.

"ನಿನ್ನ ಅದೃಷ್ಟ ನಿಜವಾಗ್ಲೂ ಚೆನ್ನಾಗಿಲ್ಲ. ನಿನ್ನ ತಲೆ ಮೇಲೆ ನೀನೇ ಕಲ್ಲು ಹಾಕಿಕೊಳ್ತಿ." ತಾಯಿ ನುಡಿಯುವಾಗ ಕರುಳು ಕತ್ತರಿಸುತ್ತಿತ್ತು.

"ನಿನ್ನ ಹಣೇಲಿ ಇನ್ನೂ ಏನೇನ ಬರೆದಿದೆಯೊ?!" ಸಾವಿತ್ರಮ್ಮ ಭವಿಷ್ಯ ಯೋಚಿಸಿ ಕಣ್ಣೀರು ಮಿಡಿದರು.

'ಹೌದು ನನ್ನ ಭವಿಷ್ಯ ಚೆನ್ನಾಗಿಲ್ಲ—' ಶಕುಂತಲಳಿಗೆ ಅನ್ನಿಸಿದಾಗ ಮಿಲಿ ಮಿಲಿ ಒದ್ದಾಡಿದಳು. ಮನಸ್ಸು ಬಹುವಾಗಿ ಅಶಾಂತವಾಗಿತ್ತು.

ಭಾರವಾದ ಮನಸ್ಸಿನಿಂದ ಬೆಳಿಗ್ಗೆ ಹೊತ್ತಾಗಿ ಎದ್ದ ವೆಂಕಟರಾಯರು ಮುಖ ತೊಳೆಯಲು ಬಚ್ಚಲಮನೆಗೆ ಹೋಗಿದ್ದರು.

"ವೆಂಕಟರಾಯ....ವೆಂಕಟರಾಯ" ಕೂಗುತ್ತ ಶೀನಿಯ ಸೋದರ ಮಾವ ನಾರಾಯಣರಾಯರು ಒಳಗೆ ಬಂದರು. "ಬಂದೇ" ಎಂದು ಬಚ್ಚಲಮನೆಯಲ್ಲೇ ಕೂಗಿ ರಾಯರು ಟವಲಿನಿಂದ ಮುಖವನ್ನು ವರಸಿಕೊಳ್ಳುತ್ತ ಹೊರಗೆ ಬಂದರು.

"ಏನು ನಾರಾಯಣರಾಯರು ಅಪರೂಪವಾಗಿ ದಯಮಾಡಿಸಿದಿರಿ" ಪ್ರಶ್ನಿಸಿದರು. ಹುಸಿ ನಕ್ಕು ಸ್ವಾಗತಿಸಿದರು. "ಬನ್ನಿ... ಬನ್ನಿ—ಕೂತ್ಕೊಬನ್ನಿ .. ಏನು ಸಮಾಚಾರ ...? ಬೆಳಗಾಗ ಎಳ್ತಲೇ ಬಂದ್ರಲ್ಲ....ಕೂತ್ಕೊಳ್ಳಿ ಮಾತ್ನಾಡೋಣಾ" ಕೈಹಿಡಿದು ಕೂಡಿಸಿದರು.

"ವೆಂಕಟರಾಯ....!" ನುಡಿ ಭಾರವಾಗಿತ್ತು. ಮನಸ್ಸು ಉದ್ವಿಗ್ನಗೊಂಡಿತ್ತು.

"ಏನು ಹೇಳು ಯಾಕೆ ಅನುಮಾನಿಸ್ತೀಯಲ್ಲ?" ಕಾತುರದಿಂದ ಪ್ರಶ್ನಿಸಿದರು ರಾಯರು.

"ನಿನ್ನಲ್ಲಿ ಒಂದು ಮಾತ್ನಾಡೋದಿತ್ತು. ನೀನೇ ತಿಳಕೊಳ್ತೀಂತ ಇಷ್ಟು ದಿನ ಸುಮ್ಮನಿದ್ದೆ....ನೀನು ತಿಳಕೊಳ್ಳಲಿಲ್ಲ. ಇನ್ನು ಇದ್ರೆ ಸುಮ್ನೆ ಸರಿಯಲ್ಲ ಅಂತ ಇಂದು ಬಂದೆ."

"ಏನು ವಿಷಯ ನಾರಾಯಣರಾಯ?!" ಗಾಭರಿಯಾಗಿ ಪ್ರಶ್ನಿಸಿದರು. ಅವರ ತಿಳಿವನ್ನು ಯಾವ ವಿಷಯಕ್ಕೆ ಇದು ತಳಪಾಯವೆಂದು ಊಹಿಸಲು ಅಶಕ್ತವಾಗಿತ್ತು. ಅಡಿಗೆ ಮನೆಯಲ್ಲಿ ಸಾವಿತ್ರಮ್ಮ ವಿಷಯದ ಮೂಲವನ್ನ ಆಗಲೇ ಅರಿತು ಸೊಸೆಯ ಕಡೆ ನೋಡಿ ಮುಗಳು ನಕ್ಕರು.

"ನಾನು ಶೀನಿಯ ಸೋದರಮಾವ ಗೊತ್ತು ತಾನೆ....?"

"ಇದೇನಪ್ಪ ಹೊಸದಾಗಿ ಕೇಳ್ತಾ ಇದ್ದೀಯಲ್ಲ? ಇದೇನೋ ವಿಚಿತ್ರವಾಗಿದೆ ನಿನ್ನ ರೀತಿ."

"ವಿಚಿತ್ರವಾಗಲೇಬೇಕು ವೆಂಕಟರಾಯ, ಇನ್ನು ನಾಲ್ಕು ದಿನ ಬಿಟ್ರೆ ಹುಚ್ಚು ಹಿಡಿಯಬಹುದು....ಅದೆಲ್ಲಾ ಆಗೋಕೆ ಮುಂಚೆ ನಿನ್ನ ಒಂದು ಮಾತು ಕೇಳೋಣಾ ಅಂತ ಬಂದೆ...."

"ಅದೇನು ಹೇಳಬೇಕಾದ್ರೂ ನೇರವಾಗಿ ಹೇಳಪ್ಪ. ಹೀಗೆಲ್ಲಾ ಸುತ್ತು ಬಳಸು ಮಾತು ಬೇಕಾಗಿಲ್ಲ ..."

"ಶೀನಿ ನನ್ನ ಸೋದರಳಿಯ....ನನ್ನ ಅಕ್ಕ ಶಾರದಳ ಮಗ....ಗೊತ್ತು ತಾನೆ?

"ಹೌದು. ಯಾರು ಅಲ್ಲಾ ಅಂತಾರೆ."

"ನನಗೆ ಲಲಿತ ... ಬೆಳೆದ ಹುಡುಗಿ ಮಗಳು ಇದ್ದಾಳೆ?"

ಈಗ ವೆಂಕಟರಾಯರಿಗೆ ನಾರಾಯಣರಾಯರ ಮಾತಿನ ಮೂಲ ಅಸ್ಪಷ್ಟವಾಗಿ ಅರ್ಥವಾಯಿತು.

"ನನ್ನ ಮನೆ ಹಾಳು ಮಾಡಬೇಡ. ನೀನು ಈಗ ಇಷ್ಟಪಟ್ಟರೆ ಉಳಿಸಬಹುದು....ಇಲ್ಲದಿದ್ದರೆ ನನ್ನ ಮನೆ ಹಾಳಾಗಿಹೋಗುತ್ತೆ. ಲಲಿತ ವಿಷ ತಗೊಂಡು ಸತ್ತು ಹೋಗ್ತಾಳೆ....ಲಲಿತಳ ಅಮ್ಮ ಸಾಯುವಾಗ ಶಾರದಳಿಂದ ಭಾಷೆಯನ್ನು ತೆಗೆದುಕೊಂಡು ಸತ್ತಿದ್ದಳು. 'ನಿನ್ನ ಮಗನಿಗೆ ನನ್ನ ಮಗಳನ್ನೇ ಮದುವೆ ಮಾಡಿಕೊಳ್ಳಬೇಕೆಂದು'....ಶೀನಿಯ ತಂದೆ ಊರಿನಲ್ಲಿ ಇದ್ದಿದ್ದರೆ ಅವನನ್ನು ಇಷ್ಟು ದೂರ ಮುಂದುವರಿಯಲು ಬಿಡುತ್ತಿರಲಿಲ್ಲ. ಸರಿಯಾಗಿ ಬುದ್ಧಿ ಕಲಿಸುತ್ತಿದ್ದರು. ತಾಯಿಯ ಮಾತು ಅವನಿಗೆ ಲಕ್ಷಕ್ಕೆ ಇಲ್ಲ.

ನನ್ನ ಮಾತು ಬೇಕಿಲ್ಲ. ಲಲಿತಳಂತೂ ಎದುರಿಗೆ ನಿಲ್ಲುವಂತಿಲ್ಲ. ಇದಕ್ಕೆಲ್ಲಾ ನೀನೇ ಕಾರಣ ವೆಂಕಟರಾಯ" ನಾರಾಯಣರಾಯರು ನುಡಿದಾಗ ವೆಂಕಟ ರಾಯರು ತಬ್ಬಿಬ್ಬಾದರು. ಇದಕ್ಕೆಲಾ ತಾವು ಹ್ಯಾಗೆ ಕಾರಣ ಎಂಬುದು ಅರ್ಥವಾಗಲಿಲ್ಲ. ಅರ್ಥವಾಗದೆ ಕಾತುರದಿಂದ ನಾರಾಯಣರಾಯರನ್ನು ನೋಡಿದರು.

ಅವರು ಮುಂದುವರಿಸಿದರು "ನಿನ್ನ ಮಗಳು ಶೀನಿಯ ಮೇಲೆ ಮಾಟ ಮಾಡಿದ್ದಾಳೆ. ಅವನು ಹುಚ್ಚನಂತಾಗಿದ್ದಾನೆ. ಲಲಿತ ನನಗೆ ಬೇಡ ಅಂತ ಹೇಳ್ತಾನೆ ಹೊರತು ಇನ್ಯಾರನ್ನ ಮದ್ವೆ ಆಗ್ತಿ ಅಂದ್ರೆ ಅದೂ ಸರಿಯಾಗಿ ಹೇಳಲ್ಲ. ನಿಮ್ಮ ಶಕುಂತಲಳ ಮೇಲೆ ಅವನ ಕಣ್ಣು ಇದೆ ಅಂತ ನಂಗೆ ಮೊದಲಿಂದ್ಲೂ ತಿಳಿದಿತ್ತು. ನಿನ್ನೆ ದಿನ ಅದು ದೃಢಪಟ್ಟಿತು. ಶೀನಿ ನಿಮ್ಮ ಶಕುಂತಲ ನಿನ್ನೆ ಬಹು ಹೊತ್ತು ಊರಹೊರಗೆ ವಾಕಿಂಗ್ ಹೋಗಿದ್ದರು. ನಾನು ಕಣ್ಣಾರೆ ಕಂಡೆ...." ಮಾತಿನಲ್ಲಿ ಕ್ರೂರ ವಕ್ರತೆಯಿತ್ತು.

ಉತ್ತರವಾಗಿ ವೆಂಕಟರಾಯರು ಜೋರಾಗಿ ನಕ್ಕರು.

"ನೀನು ಏನು ಬೇಕಾದ್ರೂ ತಿಳಕೊಳ್ಳಬಹುದು.... ನೀನು ತಿಳಿದಂತೆ ವಸ್ತು ಸ್ಥಿತಿಯಿಲ್ಲ. ನಮ್ಮ ಶಕುಂತಲ ಅವನನ್ನು ಮದ್ವೆ ಆಗೊಲ್ಲ. ಅವ ಳಿಗೆ ಇಷ್ಟವಿಲ್ಲ...." ಅವಳಿಗೆ ಇಷ್ಟವಿತ್ತೊ ಇಲ್ಲವೊ !? ನಿನ್ನೆಯ ಮಾತಿನಿಂದ ಇಷ್ಟವಿಲ್ಲವೆಂದು ತೀರ್ಮಾನಿಸಿ ನುಡಿದರು ರಾಯರು.

"ಏನಂದೆ ವೆಂಕಟರಾಯ....! ಮದ್ವೆ ಆಗೋಕ್ಕೆ ನಿಮ್ಮ ಶಕುಂತಲ ಒಪ್ಪೋದಿಲ್ವೆ....!!" ಆಶ್ಚರ್ಯದಿಂದ ಪ್ರಶ್ನಿಸಿದರು ನಾರಾಯಣರಾಯರು.

"ಇಷ್ಟವಿತ್ತೊ ಇಲ್ವೊ ಗೊತ್ತಿಲ್ಲಪ್ಪ ನಾರಾಯಣರಾಯ. ಆದ್ರೆ ನಮ್ಮ ಶಕುಂತಲ ನಿನ್ನ ಮಗಳಿಗೆ ಭಾಷೆ ಕೊಟ್ಟಿದ್ದಾಳಂತೆ. ನಾನು ಶೀನೀನ ಮದ್ವೆ ಆಗೊಲ್ಲ ಅಂತ." ಸಾವಿತ್ರಮ್ಮ ಅಡಿಗೆ ಮನೆಯಿಂದ ಹೇಳುತ್ತಲೇ ಹೊರಗೆ ಬಂದರು. ಮಾತಿನಲ್ಲಿ ಶಕುಂತಲ ಲಲಿತಳಿಗಾಗಿ ಶೀನಿಯನ್ನು ದಾನಮಾಡಿದ್ದಾಳೆ ಎನ್ನುವ ಹೆಮ್ಮೆಯಿತ್ತು.

"ನಿಜವೆ ?" ನಾರಾಯಣರಾಯರು ತಮ್ಮ ಕಿವಿಯನ್ನು ತಾವೇ ನಂಬದಾದರು. ತುಂಬ ಅಭಿಮಾನದಿಂದ "ಶಕುಂತಲ ಒಂದು ರತ್ನ" ಎಂದು ನುಡಿದು ರೂಮಿನತ್ತ ತಿರುಗಿದಾಗ ಶಕುಂತಲ ಬಾಗಿಲಲ್ಲಿ ನಿಂತಿದ್ದಳು ಹುಸಿ ನಗೆಯೊಂದು ತುಟಿಗಳ ಮಧ್ಯೆ ಹೊರಗೆ ನುಸುಳಲೋ ಬೇಡವೊ ಎಂದು ಹಿಣುಕಿ ನೋಡುತ್ತಿತ್ತು.

ಸ್ವಾರ್ಥ ತ್ಯಾಗದ ಚಿರಸುಖದ ಪ್ರತಿಫಲವೇ? ಈ ನಗು ! ಅಥವ

ದುರ್ವಿಧಿಯ ಚದುರಂಗದಾಟದಲ್ಲಿ ಸೋತು ಬಳಲಲೇ ಬೇಕಾದ ಆ ಸಂದರ್ಭದಲ್ಲಿ ಬಿರಿವ ಶುಷ್ಕ ನಗುವಿನ ಪ್ರತಿಚ್ಛಾಯೆಯೊ ಈ ನಗು....?! ಶಕುಂತಲಳಿಗೆ ಸರಿಯಾಗಿ ತಿಳಿದಿರಲಿಲ್ಲ.

'ಅಂದು ತಾನು ಮಾಡಿದ್ದು ಸರಿಯೆ ?....ಒಂದು ಕ್ಷಣದ ಮನಸ್ಸಿನ ದುರ್ಬಲತೆಗೆ ಒಳಗಾಗಿ ಅಂದು ಲಲಿತಳಿಗೆ ಭಾಷೆ ಕೊಟ್ಟಿದ್ದು ಸರಿಯೆ ?....' ಇದು ಒಂದು ಬೃಹತ್ ಪ್ರಶ್ನೆ. ಬಹುದಿನದಿಂದ ಯೋಚಿಸುತ್ತಲೇ ಇದ್ದಾಳೆ.. ನಿನ್ನೆಯೆಲ್ಲಾ ಯೋಚಿಸಿ ರಾತ್ರಿ ಎಲ್ಲಾ ನಿದ್ದೆ ಕೆಟ್ಟುಯೋಚಿಸಿದರೂ ಇನ್ನೂ ನೆಲೆಗೆ ಬಂದಿರಲಿಲ್ಲ. ಬರುವಂತೆಯೂ ಇರಲಿಲ್ಲ.

'ಶೀನಿ ನನ್ನನ್ನು ಪ್ರೀತಿಸುತ್ತಾನೆ' ಶಕುಂತಲಳಿಗೆ ಇದು ಎಂದೊ ಗೊತ್ತಿತ್ತು. ನಾರಾಯಣರಾಯರು ಹೇಳುವ ಮೊದಲೇ ಇದನ್ನು ನಿರ್ಧರಿಸಿದ್ದಳು.

"ಶೀನಿ ನಿನ್ನನ್ನು ತುಂಬಾ ಪ್ರೀತಿಸ್ತಾನೆ - ನನ್ನ ಕಂಡ್ರೆ ರೇಗ್ತಾನೆ...." ಕಣ್ಣೀರು ಕರೆದು ನುಡಿದಿದ್ದಳು ಲಲಿತ.

ಹೌದು ಶೀನಿ ತನ್ನನ್ನು ಪ್ರೀತಿಸುತ್ತಾನೆ....

ಆದರೆ ತಾನು ...? ?

"ಶಕುಂತಲ....ಒಂದು ರತ್ನ. ನಾನು ಅವಳನ್ನು ತಪ್ಪು ತಿಳಿದಿದ್ದೆ.... ಅವಳು ನಿಜವಾಗಿ ಮನುಷ್ಯಳಲ್ಲ. ಸಾಮಾನ್ಯ ಮನುಷ್ಯರಿಗೆ ಇಂಥಾ ಬುದ್ಧಿ ಬರೋಲ್ಲ .. ಶಕುಂತಲಾಳೆ ನಮ್ಮ ಮನೆ ಉದ್ಧಾರ ಮಾಡಿದ ಹಾಗೆ ಆಯ್ತು ....ಶಕುಂತಲಾ....ಏನೂ ತಿಳಕೋಬೇಡ ...ಮಗು ..." ನಾರಾಯಣರಾಯರು ಬಂದು ಶಕುಂತಲೆಯ ತಗ್ಗಿದ ತಲೆಯನ್ನು ಎತ್ತಿದರು. ಅವರ ಕಣ್ಣಲ್ಲಿ ತುಂಬ ಕೃತಜ್ಞತೆ ತುಳುಕುತ್ತಿತ್ತು.

"ನಿನಗೆ ನಾನು ಆಜ್ಜೀವ ಆಭಾರಿ ಶಕುಂತಲ....ನೀನು ದೇವರು.... ಯಾರೂ ತಮಗೆ ಬೇಕಾದ ವಸ್ತುವನ್ನು ಇನ್ನೊಬ್ಬರ ಕಣ್ಣೀರು ಕಂಡು ದಾನ ಮಾಡೊಲ್ಲ..." ಲಲಿತಳೂ ಅಪ್ಪಿ ಎದೆಗೆ ಎದೆಯನ್ನು ಜೋಡಿಸಿ ಭುಜದ ಮೇಲೆ ತಲೆ ಇಟ್ಟು ಕಣ್ಣೀರು ಸುರಿಸಿದಳು.

ತಾನು ದೇವರೆ ? ...ತ್ಯಾಗಿಯೇ ?

ಇದು ಆಗಿದ್ದುದು ಗೋಪಾಲನೊಡನೆ ಮದುವೆ ಗೊತ್ತಾಗುವುದಕ್ಕೆ ಸ್ವಲ್ಪ ದಿನಗಳ ಹಿಂದೆ ಎಂದು ಜ್ಞಾಪಕ ಬಂದಾಗ ಮೈ ಎಲ್ಲಾ ಕಂಪಿಸಿತು.

ನಾನು ತ್ಯಾಗಿಯಲ್ಲ .. ಯಾರೂ ಆಭಾರಿಯಾಗಿರಬೇಕಾಗಿಲ್ಲ ...ನಾನು ಯಾವ ಮಹತ್ ಕೆಲಸವನ್ನೂ ಮಾಡಿಲ್ಲ ಅನ್ನಿಸಿತು ಅವಳಿಗೆ.

ಅಂದು ಭಾಷೆ ಕೊಟ್ಟಿದ್ದು ನಿಸ್ವಾರ್ಥ ಬುದ್ಧಿಯಿಂದಲೆ....?

ಲಲಿತಳ ಕಣ್ಣೀರು ಕಂಡ ಮರುಕದಿಂದಲೇ ??

ಶೀನಿಯಲ್ಲಿ ಅಭಿಮಾನ...ಪ್ರೀತಿ ಇಲ್ಲದೆಯೋ....???

ತ್ಯಾಗಿ ಎಂದು ಹೊಗಳಿಸಿಕೊಳ್ಳುವ ಆಕಾಂಕ್ಷೆಯಿಂದಲೆ....?!

ಉತ್ತರ ಹೇಳಿಯದೆ ತಲೆ ಕೊಡವಿದಳು. ಬಿಸಿಯುಸಿರು ನುಗ್ಗಿ ಬಂತು. ಯೋಚನೆಯಿಂದ ಉದ್ವಿಗ್ನತೆ ಹೆಚ್ಚಿ ಎದೆ ಜೋರಾಗಿ ಏರಿಳಿಯುತ್ತಿತ್ತು.

'ನೀನು ನಿಸ್ವಾರ್ಥಿಯಲ್ಲ . ತ್ಯಾಗಿಯಲ್ಲ....' ಮನಸ್ಸು ಕೂಗಿದಾಗ ನಡುಗಿದಳು.

'ಇವೆಲ್ಲಾ ನಡೆದಾಗ ಗೋಪಾಲ ಬದುಕಿದ್ದ. ಮದುವೆ ನಿಷ್ಕರ್ಷೆಯಾಗುವುದರಲ್ಲಿತ್ತು' ಬುದ್ಧಿ ವಿಮರ್ಶಿಸಿ ನುಡಿಯಿತು.

'ನನ್ನ ಕ್ಷಮಿಸು ಶಕುಂತಲ ನಿನ್ನ ದೊಡ್ಡ ಮನಸ್ಸನ್ನು ತಿಳಿಯದೆ ತಪ್ಪು ಮಾಡಿದೆ ...' ನಾರಾಯಣರಾಯರು ನುಡಿದದ್ದು ದೂರದಲ್ಲಿ ಎಲ್ಲೊ ಹೇಳಿದಂತೆ ಕೇಳಿಸಿತು ಶಕುಂತಲಳಿಗೆ.

'ಇಲ್ಲ....ಇಲ್ಲ ...ನಾನು ಯಾರನ್ನೂ ಕ್ಷಮಿಸಬೇಕಾಗಿಲ್ಲ....ನನ್ನನ್ನು ನಾನೇ ಕ್ಷಮಿಸಿಕೊಳ್ಳಬೇಕಾಗಿದೆ ...' ಬಾಗಿಲಲ್ಲಿ ನಿಂತಿದ್ದವಳು ರೂಮಿನೊಳಗೆ ಓಡಿಹೋದಳು.

ಬಾಗಿಲು ಹಾಕಿಕೊಂಡು ಮಂಚದ ಮೇಲೆ ಬಿದ್ದು ಬಿಕ್ಕಿಬಿಕ್ಕಿ ಅತ್ತಳು.

ಹೊರಗಡೆ ಸಾವಿತ್ರಮ್ಮ ಕಾಫಿಯನ್ನು ತಂದು ನಾರಾಯಣರಾಯರಿಗೆ ಕೊಟ್ಟರು.

"ಇದು ನನ್ನ ಪಾಲಿಗೆ ಅಮೃತ." ಕಣ್ಣೊತ್ತಿಕೊಂಡು ತುಂಬ ಕೃತಜ್ಞತೆಯಿಂದ ರಾಯರ ಕಡೆಗೆ ನೋಡುತ್ತ ಶಕುಂತಲ ನಿಂತಿದ್ದ ಕಡೆಗೆ ನೋಡಿ ಅವಳು ಅಲ್ಲಿ ಇಲ್ಲದೆ ಇದ್ದರೂ "ನಾನು ನಿನಗೆ ಎಷ್ಟು ಕೃತಜ್ಞನಾಗಿದ್ದರೂ ಸಾಲದು....ಶಕುಂತಲ" ನುಡಿದರು.

"ಇನ್ನು ನನ್ನ ಮಗಳ ಮದ್ವೆ ಆದಹಾಗೆಯೇ. ಅವನು ಬೇಡ ಅಂದ್ರೂ ನಾನು ಕೇಳೊಲ್ಲ. ನಿಮ್ಮ ಮಗಳದೇ ನನಗೆ ತುಂಬಾ ಭಯವಾಗಿತ್ತು, ಸಧ್ಯಕ್ಕೆ ಪರಿಹಾರ ಆಯ್ತಲ್ಲ. ನಾನು ಇಲ್ಲಿಗೆ ಬರೋವಾಗ ಹೀಗೆ ಸುಸೂತ್ರವಾಗಿ ಆಗುತ್ತೆ ಅಂತ ಕನಸಿನಲ್ಲೂ ಯೋಚಿಸಿರಲಿಲ್ಲ. ಜಗಳಕ್ಕೆ ಸಿದ್ಧನಾಗಿಯೇ ಬಂದಿದ್ದೆ. ಇದಕ್ಕೇ ದೈವಯೋಗ ಅನ್ನೋದು ನಾನು ಯೋಚಿಸಿದ್ದುದು ಒಂದು ಈಗ ಆದ್ದು ಒಂದು ...ಬರ್ತೀನಿ ವೆಂಕಟರಾಯ....

ನಿನ್ನ ಉಪಕಾರ ನನ್ನ ಜೀವ ಇರೋತನ್ಕ ನೆನಸ್ಕೊಂಡ್ರೂ ಸಾಲದು. ನೀನು ಬಹಳ ದೊಡ್ಡೋನು...." ತುಂಬ ಅಭಿಮಾನದಿಂದ ನುಡಿದು ಮೇಲಕ್ಕೆ ಎದ್ದರು.

"ಶೀನಿ ಮದ್ವೇನಾ ಬೇಗ ಮಾಡಿಬಿಡಪ್ಪ....ನಾಲ್ಕುದಿನ ಭರ್ಜರಿ ಊಟಾನಾದ್ರೂ ಹೊಡೆಯೋಣಾ..." ನಗೆಯಾಡಿದರು ರಾಯರು.

"ನಾನೂ ಅದೇ ಯೋಚಿಸಿದ್ದೇನೆ. ಆದ್ರೆ ನಿಮ್ಗೆ ಗೊತ್ತಾಗ್ದೆ ಎಲ್ಲಾದ್ರೂ ಆಗುತ್ಯೆ....! ಬರ್ತೀನಿ....ತುಂಬಾ ಉಪಕಾರ ಮಾಡಿದ್ರಿ.... ಬರ್ತೀನಿ. ನಮಸ್ಕಾರ ..." ಹೇಳಿ ಹೊರಗೆ ಹೊರಟು ಹೋದರು.

"ಶಕುಂತಲ ಮಾಡಿದ್ದೆ ಸರಿಯಾಗಿತ್ತು. ಇಲ್ದಿದ್ರೆ ಇವತ್ತು ಜಗಳಾ ಆಗ್ತಾ ಇತ್ತು. ಸುಮ್ನೆ ಮನಸ್ತಾಪಕ್ಕೆ ಕಾರಣ ಆಗ್ತಾ ಇತ್ತು. ಅದೂ ಅಲ್ದೆ ಮನೇಲಿ ಹುಡುಗಿ ಇರಬೇಕಾದ್ರೆ ನಾವು ಆಸೆಪಟ್ಟಿದ್ದು ನಮ್ಮದೂ ತಪ್ಪು...." ರಾಯರು ನುಡಿದರು.

'ಶಕುಂತಲ ಮಾಡಿದ್ದೇ ಸರಿಯಾಗಿತ್ತು' ಶಕುಂತಲ ಕೇಳಿದಾಗ ರೂಮಿನೊಳಗೇ ಗಟ್ಟಿಯಾಗಿ ನಕ್ಕುಬಿಟ್ಟಳು. ಏನೇನೊ ಭಾವಗಳು ಮುತ್ತಿ ಘಾಸಿಪಡಿಸುತ್ತಿದಾಗ ಈ ಮಾತು ಕೇಳಿ ಏಕೆ ನಗು ಬಂತೊ ಅವ ಳಿಗೂ ಅರ್ಥವಾಗಲಿಲ್ಲ.

"ಇದಕ್ಕೇ ಮಗು ದೈವಯೋಗ ಅಂತ ಹೇಳೋದು. ನಿನ್ನೆ ಏನು ಕೆಲ್ಸ ಮಾಡಿದಳು ಅಂತ ಶಕುಂತಲೆ ಮೇಲೆ ನಂಗೂ ಸಿಟ್ಟು ಬಂದಿತ್ತು. ಇಂದು ಅವಳು ಮಾಡಿದ್ದೇ ಸರಿ ಅನ್ನಿಸುತ್ತೆ. ನಾವು ಶೀನಿಗೆ ಕೊಟ್ಟು ಮದ್ವೆ ಮಾಡಿದ್ರೆ ಪಾಪ ಅವತ್ನಿಂದ ಮನಸ್ಸಿಟ್ಟಿರೊ ಲಲಿತ ಹಾಳಾಗ್ತಾ ಇದ್ದಳು. ಪಾಪ ಎಲ್ಲಾರೂ ಚೆನ್ನಾಗಿರ್ಲಿ. ಒಬ್ಬರು ಚೆನ್ನಾಗಿದ್ರೆ ನೋಡ ಬಹುದು. ಹಾಳಾದ್ರೆ ನೋಡೋಕೆ ಆಗೊಲ್ಲ....ಸುಬ್ಬಣ್ಣ ಹೇಗೂ ಹೋಗಿ ದ್ದಾನೆ ; ಗಂಡು ಹುಡಿಕೊಂಡೇ ಬರ್ತಾನೆ. ಸದ್ಯ ಇವಳದೊಂದು ಮದ್ವೆ ಆಗಿ ಸುಖವಾಗಿ ಸಂಸಾರ ಮಾಡೋದನ್ನ ನೋಡಿದ್ರೆ ಹಾಯಾಗಿ ಕಣ್ಣು ಮುಚ್ಚ ಬಹುದು." ಅಜ್ಜಿ ನುಡಿದರು.

ಶಕುಂತಲ ಹಾಸಿಗೆ ಮೇಲೆ ಮಲಗಿ ಹೊರಳುತ್ತಿದ್ದಳು. ಏನೋ ಮೂಕವೇದನೆ ಬಾಧಿಸುತ್ತಿತ್ತು.

"ಸುಮ್ನಿರಮ್ಮ ಯಾಕೆ ಯಾವಾಗ್ಲೂ ಶಕುಂತಲಳ ಮದ್ವೆ....! ಕಣ್ಣು ಮುಚ್ಚೋದು ಅಂತ ಅನ್ತಾ ಇರ್ತೀಯಾ. ನಿಂಗೆ ಆಗಿರೋದು ತಾನೆ ಏನು ಮಹಾ ವಯಸ್ಸು ನಿಂಗಿಂತಾ ಹೆಚ್ಚಾಗಿರೋರು ಎಷ್ಟು ಜನ ಇಲ್ಲ. ಮದ್ವೇನೂ

ನೋಡ್ತೀಯಾ....ಮಕ್ಕಳು ಮರಿ ಆಗಿ ಮಕ್ಕಳು ಆಡೋದನ್ನು ನೋಡಿ ನಗ್ತಿಯಾ....ಯಾಕೆ ಸಾವು....ಸಾವು ...ಅಂತ ಹೇಳ್ತಾ ಇರ್ತಿ....ಬಿಟ್ಟುಬಿಡು ....ಅವಳ ಮದ್ವೆಗೂ ನಿನ್ನ ಸಾವಿಗೂ ಏನು ಸಂಬಂಧ. ಹಾಗೆ ಶುಭದ ಜೊತೆಗೆ ಅಶುಭ ಸೇರಿಸಬಾರದು." ರಾಯರು ನುಡಿದರು.

"ಹೌದು ಮಗು ಶುಭದ ಜೊತೆಗೆ ಅಶುಭ ಸೇರಿಸ್ಬಾರ್ದು....ನನ್ನ ಬುದ್ಧಿಗಿಷ್ಟು...." 'ಬೆಂಕಿ ಹಾಕ' ಎಂದು ಹೇಳಹೋದವರು ಒಳಗೆ ನುಂಗಿಕೊಂಡರು.

" ಜೇಗ ಮದ್ವೆ ಆಗಿ ಒಳ್ಳೇಕಡೆ ಸೇರಿ ಹಾಯಾಗಿ ಇದ್ರೆ ಸಾಕು.... ನಮ್ಮ ಶಕುಂತಲ ...ನಮ್ಮ ಶಕುಂತಲಳ ಕೈ ಹಿಡಿಯೋನು ಪುಣ್ಯ ಮಾಡಿರಬೇಕು. ಚಿನ್ನ....! ಚಿನ್ನದಂತ ಗುಣ ...! .. ಶಕುಂತಲ ಅಪರಂಜಿ....!!!" ಅಭಿಮಾನ ಮತ್ತೆ ನುಡಿಯಿತು.

" ಆಗುತ್ತೆ ಬಿಡಿ...ಇವತ್ತಲ್ಲ ನಾಳೆ....ಈ ವರ್ಷದಲ್ಲಿ ಕಂಡಿತಾ ಆಗುತ್ತೆ....ಅವಳಿಗೆ ಆಗಿರೋದು ತಾನೆ ಏನು ಮಹಾ ವಯಸ್ಸು; ನಾಳೆ ನವರಾತ್ರಿಗೆ ಇನ್ನು ಹದಿನೈದು ತುಂಬುತ್ತೆ....ಕಂಡಿತ ಈ ವರ್ಷ ಮುಗಿಯೋದ್ರಲ್ಲಿ ಅವಳ ಮದ್ವೆ ಆಗುತ್ತೆ....ನನ್ನ ಮನಸ್ಸು ಹಾಗೆ ನುಡೀತಾ ಇದೆ." ದೇವರ ಮುಂದೆ ದೀಪ ಹಚ್ಚುತ್ತ ನುಡಿದಳು ಸೀತಮ್ಮ.

" ನಿನ್ನ ಬಾಯಿಗೆ ಸಕ್ರೆ ತುಂಬ್ತೀನೆ ಸೀತಾ....ನಿನ್ನ ಹಾರೈಕೆ ಜೇಗ್ನೆ ನೆರವೇರಲಮ್ಮ...." ತುಂಬು ಸಂತೋಷದಿಂದ ನುಡಿದರು ಸಾವಿತ್ರಮ್ಮ.

ಶಕುಂತಲ ರೂಮಿನಲ್ಲಿರಲಾರದೆ ಸ್ನೇಹಿತೆ ಪ್ರಭಾಳ ಮನೆಗೆ ಹೊರಟಳು.

## ೧೬

ಸೀತಮ್ಮ ಅದೆಂತಹ ಗಳಿಗೆಯಲ್ಲಿ ನುಡಿದಳೊ ಏನೊ? ಎರಡು ದಿನಗಳ ನಂತರ ಹಿಂತಿರುಗಿದ ಸುಬ್ಬಣ್ಣ ಶುಭ ಸಮಾಚಾರವನ್ನು ತಂದ.

" ನಮ್ಮ ಶಕುಂತಳ ಅದೃಷ್ಟ ಬಹಳ ಒಳ್ಳೇದು ವೆಂಕಟರಾಯ. ಎಲ್ಲಾರಿಗೂ ನಿಜವಾಗ್ಲೂ ಇಂಥಾ ಅದೃಷ್ಟ ಲಭಿಸೊಲ್ಲ. ಎಂಥಾ ಮನೆ ಹುಡ್ಕಿಕೊಂಡು ಬಂದಿದ್ದೇನೆ ಅಂತ! ದಾವಣಗೆರೆಯ ರಾಮಕೃಷ್ಣಯ್ಯ ಬಹಳ ಸಾಹುಕಾರರು—ಲಾಯರ ಕೆಲ್ಸದಿಂದ ವಿರಾಮ ತಗೊಳ್ತಾ ಇದ್ದಾರೆ. ತಮ್ಮ ಕೆಲಸವನ್ನೆಲ್ಲಾ ಮಗನಿಗೆ ಒಪ್ಪಿಸಿ ಅವನಿಗೆ ಸಹಾಯಕರಾಗಿ ಇದ್ದಾರೆ. ಅವರ ಮಗ ಅನಂತನಾರಾಯಣ....ಮೊನ್ನೆ ನಾನೆ ಬಿ. ಎಲ್. ಪಾಸುಮಾಡಿ

ಈಗ ಅಡ್ವೊಕೇಟ್ ಕೆಲ್ಸಾನ ಮಾಡ್ತಾ ಇದ್ದಾನೆ. ಬೆಳೆಯೋ ಗಿಡ ಮೊಳಕೇಲಿ ಕಾಣ್ಸತ್ತೆ ಅಂತ ಈಗಾಗ್ಲೆ ತುಂಬಾ ಹೆಸರು ಗಳಿಸಿಬಿಟ್ಟಿದ್ದಾನೆ. ದೈವಯೋಗ ಅಂತ ಕಾಣುತ್ತೆ! ಈ ಸಂಬಂಧ ಸಿಕ್ಕಿದ್ದು ನಿನ್ನ ಪುಣ್ಯವೋ? ....ಶಕುಂತಲೆಯ ಅದೃಷ್ಟವೊ ಏನೊ ಅಪ್ಪ ಅವರಾಗಿ ಒಪ್ಪಿಬಿಟ್ರು. ಆದಷ್ಟು ಬೇಗ ಲಗ್ನಾನ ನೆರವೇರಿಸಿಬಿಡಿ ಅಂತ ರಾಮಕೃಷ್ಣಯ್ಯನವರ ಹೆಂಡತಿ ನನ್ಗೆ ಬಲವಂತ ಮಾಡಿದರು. ಹುಡುಗೀನ ನೋಡೋಕೆ ನಾವೆ ಬರ್ತೀವಿ ಅಂದ್ರು. ಏನು ಬೇಡ ನಾವೇ ಕರಕೊಂಡು ಬರ್ತೀವಿ ಅಂತ ಹೇಳ್ದೆ....ಆ ಅನಂತನಾರಾಯಣ....ಅದೇ ಶಕುಂತಲಳ ಭಾವಿ ಗಂಡ...! ಒಳ್ಳೇ ಮನ್ಮಥ ಇದ್ದ ಹಾಗಿದ್ದಾನೆ. ಎಷ್ಟು ನಯ, ವಿನಯ. ! ದೊಡ್ಡೋರಲ್ಲಿ ಗೌರವ ಅಂತಿಯಾ..? ಹುಡುಗೀನ ನಾನೇನು ನೋಡ್ಬೇಕಾಗೇ ಇಲ್ಲ ನನ್ನ ಅಮ್ಮ ಅಪ್ಪ ಒಪ್ಪಿದ್ರೆ ಆಗಿಹೋಯ್ತು....ಅಂತ ಹೇಳಿಬಿಟ್ಟ ಈ ಕಲಿಯುಗದಲ್ಲೂ ಅದೂ ಅಷ್ಟು ಸಾಹುಕಾರರ ಮನೇಲೂ ಇಂಥಾ ಮಗ ಇದ್ದಾನಲ್ಲ ಶ್ರೀ ರಾಮಚಂದ್ರಸಂಭೋನು ಅನ್ನಿಸ್ತು... ಇನ್ನು ಎಂಟು ದಿವ್ಸಕ್ಕೆ ನಮ್ಮ ವೆಂಕಟರಾಯರು ಹುಡುಗೀನ ಕರಕೊಂಡು ಬರ್ತಾರೆ ಅಂತ ಹೇಳ್ದೆ.... ಏನಪ್ಪ....ಹೋಗಿ ಬರ್ತೀತಾನೆ ?"

"ಕಾಲ ಕೆಟ್ಟೋಯ್ತು ಅಂತ ನಾವು ಅನ್ಕೋಡು ಅಷ್ಟೆ... ಬೂದಿ ಮುಚ್ಚಿದ ಕೆಂಡ ಇದ್ದಾಂಗೆ ಬಹಳ ಜನ ಇದ್ದಾರಪ್ಪ ಸತ್ಯವಂತರು. ಹಾಗಿಲ್ಲದೆ ಎಲ್ಲಾ ಕೆಟ್ಟು ಹೋಗಿದ್ರೆ ಮಳೆ ಬೆಳೆ ಆಗ್ತಾ ಇತ್ತ...." ಸಾವಿತ್ರಮ್ಮ ನುಡಿದರು.

"ಹೌದು ಸಾವಿತ್ರಮ್ಮ ನೀನು ಹೇಳೋದು ನಿಜ....ಹೋಗ್ಲಿ ಇಷ್ಟು ಹುಡುಕಿದ್ದಕ್ಕೂ ಒಳ್ಳೆ ಕಡೇನೆ ಗಂಡು ಸಿಕ್ಕಿತು. ನಂಗೇನೊ ಸಂಬಂಧ ತುಂಬಾ ಒಪ್ಪಿದೆ....ರಾಮರಾಯರ ಮನೆ ಸಂಬಂಧ ಅಂಥ ಆಗ ಒದ್ದಾಡಿದ್ದು ಆಯ್ತು....ದೇವರಿಗೆ ಇಷ್ಟವಿರಲಿಲ್ಲ....ಆಯ್ತು....ಆಗೋದೆಲ್ಲಾ ಒಳ್ಳೇದಕ್ಕೆ. ನಾವು ಅದನ್ನು ಯೋಚಿಸೋಲ್ಲ. ಹಾಳು ದೇವರು ಹಾಳು ಮಾಡಿಬಿಟ್ಟ ಅಂತ ಗೋಳಾಡ್ತೇವೆ....ನಾವೇ ಗೋಳ್ಹಾಡಿಲ್ವೆ ಗೋಪಾಲ ಸತ್ತಾಗ...."

"ಏನ್ಹೇಳ್ತಿ ವೆಂಕಟರಾಯ....ನಿನಗೆ ಒಪ್ಪಿಗೆ ತಾನೆ ಸಂಬಂಧ....?"

"ನಂದೇನಿದೆ ಹೇಳು. ಅವರು ಹುಡುಗೀನ ಒಪ್ಪಿ, ನೀನು, ಅಮ್ಮ ಅವಳು ಒಪ್ಪಿದರೆ ಆಗಿಹೋಯ್ತು. ನಮ್ಮ ಶಕುಂತಲ ಒಳ್ಳೇ ಕಡೆ ಸೇರಿ ಸುಖವಾಗಿದ್ರೆ ಸಾಕು....ಅದೇ ನಾನು ಬಯಸೋದು...." ರಾಯರು ನುಡಿದರು.

"ಜಾತ್ಕಾ ಜೋಯಿಸರಿಗೆ ತೋರ್ಸಬೇಕಲ್ಲ....? ರಾಮಾಶಾಸ್ತ್ರಿಗಳ್ಗೆ ಕರ್ಸಿ ತೋರ್ಸಿದರಾಯ್ತು....ಮುಖ್ಯವಾಗಿ ಅದು ಕೂಡ ಬೇಕಲ್ಲ." ಸೀತಮ್ಮ ನುಡಿದಳು.

"ನಂಗೆ ಅಷ್ಟೂ ಗೊತ್ತಿಲ್ವೆ ಸೀತಮ್ಮ. ಈ ವಯಸ್ಸಿಗೆ ಎಷ್ಟು ಮದುವೆ ಮಾಡ್ಸಿದ್ದೀನೆಯೊ ? ಸಂಬಂಧ ವಿಚಾರ್ಸೋವಾಗ ಮೊದಲು ಜಾತಕ ಇಸಕೊಂಡು ಅದು ಸರಿ ಬಂದ್ರೆ ತಾನೇ ಮುಂದೆ ಮಾತಾಡೋದು....! ಅದೇ ಸರಿಬೀಳ್ದೆ ಹೋದ್ರೆ ಮದ್ವೆ ಮಾತೇ ಇಲ್ಲ. ಮುಖ್ಯವಾಗಿ ಗಂಡು ಹೆಣ್ಣು ಸುಖವಾಗಿರಬೇಕಾದ್ರೆ ಜಾತಕ ಸರಿಯಾಗಿ ಕೂಡಬೇಕು...."

"ಇದು ಹ್ಯಾಗೆ ಕೂಡುತ್ತೆ....? ಯಾರಿಗಾದ್ರೂ ತೋರ್ಸಿದೆಯಾ ?" ರಾಯರು ಪ್ರಶ್ನಿಸಿದರು.

"ನಾನೇ ಮೊದ್ಲು ನೋಡ್ದೆ. ಸರಿಯಾಗಿ ಕೂಡಿ ಬಂತು. ಆದ್ರೂ ಬುದ್ಧಿವಂತರಿಗೆ ತೋರಿಸೋದು ಮೇಲು ಅಂತ ಅರಸೀಕೆರೆ ಸೀತಾರಾಮ ಶಾಸ್ತ್ರಿಗಳು ಅಂತ ಒಬ್ಬ ಒಳ್ಳೆ ವಿದ್ವಾಂಸರಿದ್ದಾರೆ....ಅವರ ಹೆಸರನ್ನು ನೀನೂ ಕೇಳಿರಬಹುದು. ಹಾಗೇ ಬರ್ತಾ ಅಲ್ಲಿಗೂ ಹೋಗಿ ಅವರ್ಗೂ ತೋರ್ಸಿ ಕೊಂಡು ಬಂದೆ. ಈ ಮದ್ವೆ ಖಂಡಿತಾ ಆಗೇ ಆಗುತ್ತೆ ಅಂತ ಅವರೂ ಹೇಳಿದ್ರು."

"ಸರಿ....ಸರಿ....ಹಾಗಾದ್ರೆ...." ಅಜ್ಜಿ ಸೂಚಿಸಿದರು.

"ರಾಮಕೃಷ್ಣಯ್ಯ ನಿನ್ನ ನೋಡ್ದೆ ಇದ್ದರೂ ನಿಮ್ಮ ತಂದೆ ಬೆಂಕಿ ಭೀಮಣ್ಣನ್ನ ಚೆನ್ನಾಗಿ ಬಲ್ಲರಂತೆ ಅವರು ...ಮುಂಚೆ ಅವರು ಬೆಂಗಳೂರಲ್ಲಿ ಪ್ರಾಕ್ಟೀಸು ಮಾಡ್ತಾ ಇದ್ದಾಗ ಭೀಮಣ್ಣ ಅವರ ಹತ್ತಿರಾನೇ ಕೇಸುಗಳನ್ನು ತಗೊಂಡು ಹೋಗ್ತಾ ಇದ್ದರಂತೆ. ಏನೊ ಕಾರಣದಿಂದ ಬೆಂಗಳೂರು ಬಿಟ್ಟು ದಾವಣಗೆರೆ ಸೇರಿದ ಮೇಲೆ ಅವರಿಗೂ ಇವರಿಗೂ ಸಂಬಂಧ ಕಡಿಮೆ ಆಯ್ತಂತೆ. ಆದರೂ ಒಂದೊಂದು ಸಾರಿ ಏನಾದ್ರೂ ವಿಚಾರ್ಸಬೇಕಾದ್ರೆ ಅಲ್ಲಿಗೇ ಹೋಗಿ ಬರ್ತಾ ಇದ್ದರಂತೆ. ಭೀಮರಾಯರ ಮೊಮ್ಮಗಳು ಹುಡುಗಿ ಅನ್ನುತ್ಲೆ ಹಿಗ್ಗಿ ಹೀರೆಕಾಯಿ ಆಗಿಹೋದರು. ಆದ್ದೂ....ಆದ್ದಾಗೆ.... ಅಂತ ಹೇಳಿಬಿಟ್ಟರು. ಹುಡುಗಿ ಹೇಗೇ ಇದ್ದರೂ ಸಂಬಂಧ ಒಪ್ಪಿಗೆ ಅಂತ ಅವರ ಪತ್ನಿಯವರೂ ಹೇಳಿದರು....ಅಂದ ಮೇಲೆ ಇಲ್ಲಿಗೆ ಬಂದೆ. ನಮ್ಮ ಶಕುಂತಲಳನ್ನು ನೋಡಿದ ಮೇಲೆ ಕಣ್ಣಿಗೊತ್ತಿಕೊಂಡು ಇಂಥಾ ಸೊಸ ಸಿಕ್ಕಿದಳಲ್ಲ ಅಂತ ಮದ್ವೆ ಮಾಡಿಕೊಳ್ತಾರೆ. ಅದ್ರಲ್ಲೇನು ಅನು ಮಾನವೇ ಇಲ್ಲ..." ನಿರ್ಧರಿಸಿ ನುಡಿದ ಸುಬ್ಬಣ್ಣ.

“ನಿನ್ನ ಹಾರೈಕೆ ಹಾಗೇ ಆಗ್ಲಪ್ಪ. ಎಲ್ಲಾದರೂ ಸುಖವಾಗಿದ್ರೆ ಸಾಕು ನಮ್ಮ ಶಕುಂತಲ....” ಸೀತಮ್ಮ ಹಾರೈಸಿದಳು.

“ನೀನು ಇಷ್ಟು ಹೊಗಳಬೇಕಾದ್ರೆ ಅಂಥೋರ ಮನೆ ಸೇರಬೇಕಾದ್ರೆ ಶಕುಂತಲೆ ನಿಜವಾಗ಼್ೂ ಭಾಗ್ಯವಂತೆ....” ಅಜ್ಜಿಯ ಕಣ್ಣಲ್ಲಿ ಆನಂದ ತುಳುಕುತ್ತಿತ್ತು. ಅಭಿಮಾನದಿಂದ ಶಕುಂತಲೆಯನ್ನು ನೋಡಿದರು....ಮಡಿ ಉಟ್ಟುಕೊಂಡಿರದೆ ಇದ್ದರೆ ಬಾಚಿ ತಬ್ಬಿಕೊಳ್ಳುತ್ತಿದ್ದರು.

“ನೀನು ನಿಜವಾಗ್ಲೂ ಭಾಗ್ಯವಂತೆ ಕಣೆ....” ತಾಯಿ ಮಗಳನ್ನು ಅಪ್ಪಿಕೊಂಡಳು.

“ದೂರದ ಕಡೆ....ಕಂಡೋರು ಕೇಳ್ದೋರು ಯಾರೂ ಇಲ್ಲ. ಚೆನ್ನಾಗಿ ವಿಚಾರಿಸಿದ್ದಿ ತಾನೆ ?” ತಂದೆಯ ಮನಸ್ಸಿನಲ್ಲಿ ಸಂಪೂರ್ಣವಾಗಿ ಮಗಳ ಭವಿಷ್ಯವೇ ನೆಲಸಿದ್ದುದರಿಂದ ಅನುಮಾನಗೊಂಡು ಪ್ರಶ್ನಿಸಿದರು.

“ನಿಮ್ಮ ತಂದೆ ಸಾಮಾನ್ಯವಾಗಿ ಯಾರನ್ನೂ ನಂಬ್ತಾನೇ ಇರ್ಲಿಲ್ಲ. ನಂಬಿಬಿಟ್ರೆ ಆಗಿಹೋಯ್ತು. ಅವರು ಸಂಪೂರ್ಣವಾಗಿ ಒಳ್ಳೆಯವರೇ ಆಗಿರಬೇಕು. ಅದ್ರಲ್ಲಿ ಅನುಮಾನ ಪಡಬೇಕಾದ್ದೆ ಇಲ್ಲ....” ಅಜ್ಜಿಯ ಮನಸ್ಸು, ರಾಮಕೃಷ್ಣಯ್ಯನವರ ಮನೆಯವರು ಸದ್ವಿಚಾರ ಸುಸಂಪನ್ನರೆಂದು ನಿರ್ಧರಿಸಿ ನುಡಿಯಿತು.

“ಯಾರಾರ ಹಣೇಲಿ ಹ್ಯಾಗಾಗೆ ಬರೆದಿದೆಯೋ ಹಾಗಾಗೇ ಆಗುತ್ತೆ ....ನಾವು ಅದಾಗಿದ್ರೆ ಚೆನ್ನಾಗಿತ್ತು. ಇದಾಗಿದ್ರೆ ಚೆನ್ನಾಗಿತ್ತು ಅಂತ ಹಲುಬಿದ್ರೆ ಆಗುತ್ತಾ ?” ಅನುಭವಿಸಿದ್ದ ರಾಯರ ಮನ ನುಡಿಯಿತು. “ನಂಗೆ ರಾಮಕೃಷ್ಣಯ್ಯನವರ ಪರಿಚಯವಿಲ್ಲ. ಅವರ ಹತ್ರ ಹ್ಯಾಗೆ ಮಾತ್ನಾಡಬೇಕು. ಹೇಗ ಇರಬೇಕು ಒಂದೂ ಗೊತ್ತಿಲ್ಲ....ಎಲ್ಲಾ ನಿಂದೆ ಜವಾಬ್ದಾರಿ. ನಾನು ಬೇಕಾದ್ರೆ ಹೆಣ್ಣಿನ ತಂದೆ ಅಂತ ಮೂಲ ವಿಗ್ರಹ ಆಗಿ ಇರ್ತೀನಿ. ನೀನೇ ಉತ್ಸವ ದೇವರು...” ರಾಯರು ಎಲ್ಲಾ ಹೊಣೆಯನ್ನು ಆ ಸುಬ್ಬಣ್ಣನ ಮೇಲೆಯೆ ಹೇರಿದರು.

“ಏನ್ಮಾಡ್ತೀರೊ ಮಾಡಿ....ಎಲ್ಲಾನೂ ನನ್ನ ತಲೆಮೇಲೆ ಹೇರಿ ಕೊನೆಗೆ ಕೆಟ್ಟೋನು ಅನ್ನೋದು” ಸುಬ್ಬಣ್ಣ ನುಡಿದು ನಕ್ಕ.

“ಯಾವ ಕೆಟ್ಟ ಬಾಯಿಂದ ಇಷ್ಟೊಂದು ಕಷ್ಟ ಪಡ್ತಾಇರೊ ನಿನ್ನ ಅನ್ನಬೇಕೊ ?” ರಾಯರು ನೊಂದು ನುಡಿದರು.

“ನೀನು ನಮ್ಮ ಪಾಲಿನ ದೇವರು.” ಸೀತಮ್ಮ ತುಂಬು ಅಭಿಮಾನದಿಂದ ನುಡಿದಳು.

## ೧೭

ವೆಂಕಟರಾಯರು, ಸುಬ್ಬಣ್ಣ, ಸೀತಮ್ಮ, ಶಕುಂತಲ ದಾವಣಗೆರೆಗೆ ಹೋಗಿದ್ದರು. ಬರುವಾಗ ಲಗ್ನವನ್ನು ಕಟ್ಟಿಸಿಕೊಂಡೇ ಬಂದರು.

ಅವರ ಸ್ಥಿತಿವಂತಿಕೆ, ಆದರ ಸ್ವಭಾವ ಕಂಡು ವೆಂಕಟರಾಯರು ಆನಂದಗೊಂಡರು. ಶಕುಂತಳ ತನ್ನ ಗಂಡನ ರೂಪನ್ನು ಕಂಡು ತೃಪ್ತ ಗೊಂಡಳು. ಅವನ ಮುಖದಲ್ಲಿ ನಿಂತಿದ್ದ ಗಂಭೀರತೆ ಇವಳನ್ನು ಸೆರೆಹಿಡಿ ಯಿತು. ಇವಳ ಸುಂದರ ಮುಖ ಕಂಡು ಆತ ಬಹು ತೆಳ್ಳಗೆ ತುಟಿಗಳ ಮಧ್ಯೆ ನಕ್ಕಿದ್ದ.

ಈ ಸಂಬಂಧ ಎಲ್ಲರಿಗೂ ಒಪ್ಪಿಗೆಯಾಗಿ ಕಂಡಿತು. ಅಂದು ಸುಬ್ಬಣ್ಣ ಅಷ್ಟು ಹೇಳಿದ್ದರೂ ಪೂರ್ಣವಾಗಿ ತೃಪ್ತಿಗೊಳ್ಳದ ಮನಸ್ಸು ಈಗ ಒಂದು ದಿನ ಇದ್ದು ಬರುವಷ್ಟರಲ್ಲಿ ನಿಚ್ಚಳವಾಗಿತ್ತು.

"ಅಮ್ಮಾ ...ಶಕುಂತಲೆ ನಿಜವಾಗಿಯೂ ಭಾಗ್ಯವಂತೆ...." ಸೀತಮ್ಮ ಊರಿಗೆ ಬಂದವಳೇ ತನ್ನ ಮನಸ್ಸಂತೋಷವನ್ನು ವ್ಯಕ್ತಗೊಳಿಸಿದಳು.

"ಜನ ಬಹಳ ಗೌರವಸ್ಥರಾಗಿ ಕಾಣ್ತಾರೆ .. ನಡವಳಿಕೆ ಮಾತೂಕಥೆ ಎಲ್ಲಾ ಚೆನ್ನಾಗಿದೆ." ರಾಯರೂ ನುಡಿದರು. ಸುಬ್ಬಣ್ಣ ಅಂದು ತಾನು ಹೇಳಿದ್ದೆಲ್ಲಾ ನಿಜವಾಯಿತಲ್ಲಾ ಎಂದು ಮುಗುಳ್ನಕ್ಕ.

ಸಾವಿತ್ರಮ್ಮ ಮೌನವಾಗಿದ್ದರು.

ಶಕುಂತಲಳ ಮದುವೆ ಅಡ್ವೋಕೇಟ್ ಅನಂತನಾರಾಯಣ ಬಿ. ಎ., ಬಿ. ಎಲ್. ರವರ ಜೊತೆಯಲ್ಲಿ ವೈಶಾಖ ಶುದ್ಧ ತದಿಗೆ ಸೋಮವಾರ ಸೂರ್ಯೋದಯಾದಿ ನಂತರ ಸಲ್ಲುವ ಶುಭ ಕರ್ಕಾಟಕ ಲಗ್ನದಲ್ಲಿ ತುಮಕೂ ರಿನ ಶಾಮರಾಯರ ಛತ್ರದಲ್ಲಿ ನಡೆದು ಹೋಯಿತು.

ಮದುವೆಯನ್ನು ಒಬ್ಬೊಬ್ಬರು ಒಂದೊಂದು ವಿಧದಲ್ಲಿ ಹಾಡಿ ಹೊಗ ಳಿದರು. ಮದುವೆ ಸಾಂಗವಾಗಿ ಎಂಟು ದಿನ ಪರ್ಯಂತ ನಡೆದು ಗಂಡಿನ ಕಡೆಯವರು ಊರಿಗೆ ಹೊರಟುಹೋದರು.

ವೆಂಕಟರಾಯರು ತೃಪ್ತಿಯ ಉಸಿರನ್ನು ಬಿಟ್ಟರು.

ಸುಬ್ಬಣ್ಣ ಸಂತೋಷದಿಂದ ಊರೆಲ್ಲಾ ಸುತ್ತಾಡಿದ.

## ೧೮

"ಶಕುಂತಲಾ....ಶಕುಂತಲಾ...." ಕೂಗುತ್ತಲೆ ಒಳಗೆ ಬಂದಳು ಪ್ರಭಾ.

“ ಬಾಮ್ಮ....ಬಾ ಪ್ರಭಾ........ರೂಮಿನಲ್ಲಿದ್ದಾಳೆ....ಹೋಗು....ಎಲ್ಲಿ ನಾಲ್ಕಾರು ದಿನದಿಂದ ಕಾಣಲೇ ಇಲ್ಲ.” ನಿಮ್ಮನೇಲಿ ಎಲ್ಲಾರೂ ಚೆನ್ನಾಗಿದ್ದಾರಾ ?....” ಸಾವಿತ್ರಮ್ಮ ಪ್ರಶ್ನಿಸಿದರು.

“ ಎಲ್ಲಾರೂ ಚೆನ್ನಾಗಿದ್ದಾರೆ ಅಜ್ಜಿ....ಮದ್ವೆ ಆದಮೇಲೆ ನೋಡಿ ನಿಮ್ಮ ಶಕುಂತಲಳಿಗೆ ಜಂಭಾ ಬಂದುಬಿಟ್ಟಿದೆ. ಮದ್ವೆ ಆಗಿ ಎಂಟು ದಿನ ಆದ್ರೂ ಒಂದಿನವಾದ್ರೂ ನಮ್ಮನೆ ಕಡೆಗೆ ಬಂದಿಲ್ಲ, ಮೊದಲು ಪ್ರತಿ ದಿನ ಸಾಯಂಕಾಲ ತಪ್ತಾ ಇರ್‍ಲಿಲ್ಲ....ಹೋಗಿ ವಿಚಾರಿಸ್ತೇನೆ ಈಗ್ಲೆ ಇಷ್ಟೊಂದು ಜಂಭ ಆಗೋದ್ರೆ ಇನ್ನು ಗಂಡನ ಮನೆಗೆ ಹೋದ ಮೇಲೆ....! ನಮ್ಮನ್ನ ಜ್ಞಾಪಿಸಿಕೊಳ್ಳೋದೂ ಇಲ್ಲ ಅಂತ ಕಾಣುತ್ತೆ...!” ಅಜ್ಜಿಗೆ ದೂರಿತ್ತು ರೂಮಿನೊಳಗೆ ಹೋದಳು..

ಆಗ ಸುಮಾರು ಐದು ಗಂಟೆ ಸಮಯ. ರೂಮಿನ ಬಾಗಿಲನ್ನು ಮುಂದಕ್ಕೆ ಹಾಕಿ ಮಂಚದ ಮೇಲೆ ಮಲಗಿ ಏನನ್ನೊ ಯೋಚಿಸುತ್ತಿದ್ದಳು. ಕಿಟಕಿಯ ಕೆಳಗಿನ ಬಾಗಿಲನ್ನು ಹಾಕಿದ್ದರೂ ಮೇಲಿನ ಬಾಗಿಲು ತೆಗೆದಿದ್ದಳು. ಸಂಜೆ ಬಿಸಿಲು ಕಿಟಕಿಯಲ್ಲಿ ತೂರಿಬಂದು ಹೊಳೆಯುವ ನೆಲದ ಮೇಲೆ ಬಿದ್ದು ಪ್ರತಿಫಲಿಸಿ ಶಕುಂತಲೆಯ ಮೇಲೆ ಬೀಳುತ್ತಿತ್ತು. ಬಿಸಿಲಿನ ಕೋಲಿನಲ್ಲಿ ತೂರಾಡುತ್ತಿದ್ದ ಧೂಳಿನ ಕಣಗಳನ್ನು ಎಣಿಸುತ್ತಿದ್ದಳೊ ಏನೊ ಅಂತೂ ಅತ್ತಕಡೆ ನೆಟ್ಟದೃಷ್ಟಿಯಿಂದ ಅದನ್ನೇ ನೋಡುತ್ತಿದ್ದಳು. ಪ್ರಭಾ ಶಬ್ಧ ಮಾಡದೆ ಬಾಗಿಲು ತೆಗೆದು ಹತ್ತಿರ ಹೋಗಿ ನಿಂತಿದುದೂ ಅವಳಿಗೆ ತಿಳಿಯದು.

ತೆರದ ಪುಸ್ತಕವೊಂದು ಬೋರಲಾಗಿ ಪಕ್ಕದಲ್ಲಿ ಬಿದ್ದಿತ್ತು.

“ ಹೊಸದಾಗಿ ಮದ್ವೆ ಆದ ಹುಡುಗಿಯರಿಗೆ ಪ್ರಪಂಚವೇ ಕಾಣ್ಸಲ್ಲ ....ಅಂತಾರೆ ಅದು ನಿಜಾ ಅಂತ ಇವತ್ತು ಗೊತ್ತಾಯ್ತು....” ಪಕ್ಕದಲ್ಲಿ ನಿಂತು ಸ್ವಲ್ಪ ಜೋರಾಗಿ ನುಡಿದಳು.

ಶಕುಂತಲ ಬೆಚ್ಚಿಬಿದ್ದು ಎದ್ದು ಕುಳಿತಳು.

“ ಮಲಕ್ಕೊ....ಯಾಕೆ ಹಾಗೆ ಬೆಚ್ಚು ಬೀಳ್ತಿ ! ನಿನ್ನ ಗಂಡನೇನೂ ಬಂದಿಲ್ಲ. ನಾನು ಬಂದಿರೋದು....!....ಕಾಣಿಸ್ತೇನೆ....?” ನಗುತ್ತ ಅವಳ ಮುಖದ ಹತ್ತಿರ ಮುಖ ಇಟ್ಟು ನುಡಿದಳು.

“ ಹ್ಞು ! ನೀನಾ....? ಕೂತ್ಕೊ....ಬಾ...ನೀನು ಬಂದಿದ್ದೇ ಗೊತ್ತಾಗಲಿಲ್ಲ.”

ಅದು ಹ್ಯಾಗೆ ಗೊತ್ತಾಗೋದು....?! ನಿನ್ನ ಗಂಡನ್ನ ನೆನಸ್ಕೊಂಡು

ಯೋಚನಾ ಪ್ರಪಂಚದಲ್ಲಿ ತೇಲ್ತಾ ಇದ್ರೆ ಈ ಲೋಕದ ವ್ಯವಹಾರ ಹ್ಯಾಗೆ ಗೊತ್ತಾಗುತ್ತೆ? ...ನೀನು ಈ ಲೋಕದಲ್ಲಿದ್ರೆ ತಾನೇ...? ನಿನ್ನ ಮನಸ್ಸು ಎಲ್ಲೋ ಇದೆ ...ನೀನು ಎಲ್ಲೋ ಇದ್ದಿ .. " ಶಕುಂತಲಳ ಪಕ್ಕದಲ್ಲಿ ಹೋಗಿ ಕುಳಿತಳು.

" ಏನೊ ಯೋಚಿಸ್ತಾ ಇದ್ದೆ ಪ್ರಭಾ....ಹೋಗ್ಲಿ... ನೀನು ಯಾವಾಗ ಬಂದೆ? ನಾನೇ ಬರೋಣಾ ಅಂತಿದ್ದೆ....ಇವತ್ತು. ಎರಡು ಮೂರು ದಿನ ದಿಂದ್ಲೂ ಹಾಗೆ ಹಾಗೆ ಅಂದುಕೊಳ್ತಾ ಇದ್ದೆ. ಏನಾದೂ ಕೆಲ್ಸ ಬಿದ್ದು ಬಿಡ್ತಾ ಇತ್ತು..... ಬರೋಕ್ಕೆ ಆಗ್ಲಿಲ್ಲ ...ಹೋಗ್ಲಿ ನೀನಾರೂ ಬಂದ್ಯಲ್ಲ ... ನಂಗೂ ಬೇಜಾರು ಆಗ್ತಾ ಇತ್ತು...." ಇಲ್ಲಿ ಸುಳ್ಳು ಹೇಳಿದಳು. ಮಧ್ಯಾಹ್ನ ಊಟ ಮಾಡಿ ರೂಮಿಗೆ ಬಂದು ಮಂಚದ ಮೇಲೆ ಮಲಗಿದವಳಿಗೆ ನಿದ್ದೆ ಹತ್ತಿರ ಸುಳಿದಿರಲಿಲ್ಲ. ಮಧುರ ಯೋಚನೆ ಹೊತ್ತಿನ ಚಿಂತೆ ಇಲ್ಲದೆ ಸಾಗಿತ್ತು.

" ಅ ಹ ಹ! ನೀನೇ ಹೇಳ್ಬೇಕೆ ಬೇಜಾರು ಆಗ್ತಾ ಇತ್ತು ಅಂತ ...! ನಿನ್ನ ಮುಖ ನೋಡಿದ್ರೆ ಗೊತ್ತಾಗಿಲ್ವೆ ...? ಕಣ್ಣು ಬಿಟ್ಕೊಂಡು ಏನೊ ಸುಖ ಸ್ವಪ್ನಾನ ಕಾಣ್ತಾ ಇದ್ದೆ ...ಅನುಭವ ಇರೋಳು...ನಾನು; ನನ್ನ ಹತ್ರ ಮುಚ್ಚಿಡ್ತಾ ಇದ್ದೀಯಲ್ಲ....! ಹ್ಞೂ ! ಪರವಾಗಿಲ್ಲ "

" ಹಾಗಾದ್ರೆ ನೀನೂ ಮದ್ವೆ ಆದಾಗ ಹೀಗೆ ಯೋಚಿಸ್ತಾ ಇದ್ದೆ ಅನ್ನು...." ಪ್ರಭಾ ಜೋರಾಗಿ ನಕ್ಕಳು.

" ಹಾಗೆ ಬಾ ದಾರಿಗೆ....ಒಪ್ಪಿಕೊಂಡೆಯಲ್ಲ. ಹೋಗ್ಲಿ ನೀನೇ ಯೋಚಿಸ್ತಾ ಇದ್ದೆಯಂತೆ . " ಪುನಃ ಗಹಗಹಿಸಿದಳು.

" ಸಾಕು ಸುಮ್ನಿರೇ....ನಿನ್ನ ನಗು...." ಕಪಟ ಕೋಪವನ್ನು ತಂದು ಕೊಂಡು ನುಡಿದಳು ಶಕುಂತಲ. " ನನ್ನ ಮಾತ್ರ ಆಡಿಕೊಳ್ತಾಳೆ...." ಪುನಃ ಮುಂದುವರಿಸಿದಳು.

ಪ್ರಭಾ ಶಕುಂತಲಳ ಮೈದಡವಿದಳು.

" ಹೇಳು ಶಕುಂತಲ....ನೀನು ಯೋಚಿಸುತ್ತಿದ್ದೆ....? ನಾನು ಹೇಳಿದ್ದು ಸರಿತಾನೆ?....ತಪ್ಪಾದ್ರೆ ಒಪ್ಪಿಕೊಳ್ಳಬೇಡ. ನನ್ನ ಹತ್ರ ಏನೂ ಮುಚ್ಚಿಡ ಬೇಡ....ಎಲ್ಲಾನೂ ಹೇಳಿಬಿಡು ..."

" ನಿನ್ನ ಹತ್ರ ಹೇಳ್ದೆ ಇನ್ಯಾರ ಹತ್ರ ಹೇಳ್ಲಿ ಪ್ರಭಾ....? ನನಗೆ ಸರಿ ಯಾದ ಸ್ನೇಹಿತಳು ಅಂದ್ರೆ ಮೊದಲಿಂದ್ಲೂ ನೀನೊಬ್ಬಳೇ .. ನೀನು ಹೇಳಿದು

ನಿಜ ಪ್ರಭಾ....ನಾನೂ ಅಲ್ಲಿಗೆ ಹೋದ ಮೇಲೆ ಹ್ಯಾಗಿರಬೇಕು. ಅಂತಾನೇ ಯೋಚಿಸ್ತಾ ಇದ್ದೆ.

"ಏನು ಯೋಚಿಸಿದೆ....?"

"ಏನೇ ಕಷ್ಟಾ ಬರ್‍ಲಿ ...ಯಾರು ಏನೇ ಹೇಳ್ಳಿ....ಮನೆಯ ಶಾಂತಿಗೆ ಭಂಗ ಬರದ ಹಾಗೆ ಅವರನ್ನು ಯಾವಾಗ್ಲೂ ಸುಖವಾಗಿಟ್ಟಿರಬೇಕು.. ಅಂತ ಆದ್ರೂ ನಂಗ್ಯಾಕೊ ಭಯವಾಗ್ತಾ ಇದೆ. ಹೊಸಬ್ರ ಮಧ್ಯದಲ್ಲಿ ನಾನು ಹ್ಯಾಗೆ ಇರೋದು ಅಂತ!....ದೂರದ ಊರು....ಹೋದ ಮೇಲೆ ಆಗಿ ಹೋಯ್ತು. ನೀನಿಲ್ಲ, ಅಮ್ಮ ಇಲ್ಲ....ಅಣ್ಣ, ಅಜ್ಜಿ ಯಾರೂ ಇಲ್ಲ....ನಾನೂ ....ನಾನೆ....?!"

"ನೀನೂ ...ನೀನೇ ಯಾಕೆ... ನೀನೂ ನಿನ್ನ ಗಂಡನೇ...." ಹೇಳಿ ಜೋರಾಗಿ ನಕ್ಕಳು ಪ್ರಭಾ

"ಇದೇ ಶಕುಂತಲ ಹೆಂಗಸಿನ ಪರೀಕ್ಷೆ ! ಈ ಹೊಸ ಜೀವನದಲ್ಲಿ ಹೊಂದುಕೊಂಡು ಹೋಗೋದಿದೆ ನೋಡು ಅದಕ್ಕೆ ಸಂಸಾರ ಅನ್ನೋದು. ಇದರಲ್ಲೇ ಈಸಬೇಕು ಇದ್ದು ಜೈಸಬೇಕು. ಇಲ್ಲಿ ನೀನು ಜಯಿಸಿದರೆ ನಿನ್ನ ಪಾಲಿಗೆ ಸಂಸಾರ ನೀನು ಕಂಡ ಕನಸು ! ಬಳಲಿದರೆ ನೋವು....!! ಸೋತರೆ ಹಾಲಾಹಲ....!"

"ಏನೇ ಆದ್ರೂ ಧೈರ್ಯದಿಂದ ಎದುರಿಸಬೇಕು ಅಂತ ಮನಸ್ಸು ಮಾಡಿದ್ದೇನೆ, ಎಷ್ಟರಮಟ್ಟಿಗೆ ಫಲ ಸಿಕ್ಕುವುದೊ ನಾನು ಕಾಣದೆ ಬಳಲಿದರೂ ನಿಜವಾಗಿಯೂ ಸೋಲಲ್ಲ."

"ಈ ಮನೋಧಾರ್ಢ್ಯವಿದ್ದರೆ ನಾಕು ಶಕುಂತಲ. ಆದರೆ ಇವನ್ನು ಎಲ್ಲಾ ಕಷ್ಟಗಳು ಬಂದಾಗಲೂ ಕಾಪಾಡಿಕೊಳ್ಳಬೇಕು. ಎದೆಗುಂದಿ ಹಿಂದೆ ಸರಿಯಬಾರದು....ನೀನೇನೂ ಮನಸ್ಸಿಗೆ ಹಚ್ಚಿಕೊಳ್ಳಬೇಡ ಶಕುಂತಲ.... ನೀನು ಏನು ಬೇಕಾದರೂ ಮಾಡಬಲ್ಲೆ. ನಿನ್ನಲ್ಲಿ ಆ ಗುಣವಿದೆ. ಮೇಲಾಗಿ ಬಹು ಅಂಶಗಳಲ್ಲಿ ನೀನು ಒಳ್ಳೇ ಕಡೆಯೇ ಸೇರಿದ್ದಿ....ಸಂಸಾರ ಸುಖಮಯವಾಗಿ ಮಾಡಲು ಹೆಚ್ಚಾಗಿ ಶ್ರಮಿಸಬೇಕಾಗಿಲ್ಲ...." ಸಮಾಧಾನ ಹೇಳಿದಳು.

"ದೈವಯೋಗ ಇದ್ದಹಾಗೆ ಎಲ್ಲವೂ ನಡೆಯುತ್ತೆ ಮಗು....ನಮ್ಮದೇನೂ ನಡೆಯೊಲ್ಲ...." ಸಾವಿತ್ರಮ್ಮ ನಡುನಡುವೆಯಲ್ಲೇ ನುಡಿದರು.

"ನೀನು ಪೂರ್ಣ ಸುಖಿಯಾಗಿರ್‍ತಿ ಶಕುಂತಲ....ನನಗೆ ನಂಬಿಕೆಯಿದೆ. ನಿನ್ನ ಗುಣ ಅಂಥೋದು....ಹೋಗ್ಲಿ ಈ ವಿಷಯ ನಾಕು ...ಇನ್ನೇನು ಸಮಾಚಾರ....? ನಿನ್ನ ಸ್ನೇಹಿತೆಯರು ಲೀಲಾ,....ಪದ್ಮಾ, ಲಲಿತ, ಗಿರಜೆ ಅವರ

ವಿಷಯ ಏನು ..." ಬೇರೆ ಕಡೆಗೆ ಮಾತನ್ನು ತಿರುಗಿಸಿದಳು.

ಇಬ್ಬರೂ ಬಹು ಹೊತ್ತು ಮಾತನಾಡುತ್ತ ಕುಳಿತಿದ್ದರು.

"ಅವರು ಬರೊ ಹೊತ್ತು ಆಯ್ತು" ದೀಪ ಹಚ್ಚಿ ಬಹು ಹೊತ್ತಾದ ಮೇಲೆ ಮಾತನಾಡುತ್ತಿದ್ದ ಪ್ರಭಾ ದಿಗ್ಗನೆ ಎದ್ದಳು.

ಶಕುಂತಲ ಏನನ್ನೊ ನೆನೆದು ನಕ್ಕು ಹೊರಗೆ ಬಂದು ಅವಳನ್ನು ಬೀಳ್ಕೊಂಡಳು.

೧೯

ವೈಶಾಖ ...? ಜೇಷ್ಠ, ಆಶಾಢ, ಶ್ರಾವಣ, ಭಾದ್ರಪದ, ಆಶ್ವೀಜ, ಕಾರ್ತೀಕ, ಮಾರ್ಗಶಿರ, ಪುಷ್ಯ ...!" ತಿಂಗಳುಗಳನ್ನು ಎಣಿಸಿ ಬಿಸಿಯುಸಿರನ್ನು ಬಿಟ್ಟರು ಸಾವಿತ್ರಮ್ಮ. ಗೋಡೆ ಒರಗಿ ಕುಳಿತಿದ್ದವರು ಹಾಗೆಯೇ ಬಹು ಹೊತ್ತು ಕುಳಿತಿದ್ದರು. ಕಣ್ಣು ತೆರದ ಬಾಗಿಲನ್ನೇ ದೃಷ್ಟಿಸುತ್ತಿತ್ತು.

ಆಫೀಸಿನಿಂದ ಮನೆಗೆ ಹಿಂತಿರುಗಿದ ರಾಯರು "ಇವತ್ತಾದ್ರೂ ಕಾಗ್ದ ಬಂತೆ....?" ಎಂದು ಪ್ರಶ್ನಿಸುವ ಮೊದಲೇ ಎದ್ದುನಿಂತು ಸಾವಿತ್ರಮ್ಮ "ಏನು ಸಮಾಚಾರ....ವೆಂಕಣ್ಣ....ಕಾಗ್ದ ಗೀಗ್ದಾ... ??" ಪ್ರಸ್ನಿಸಿ ಕಾತುರದಿಂದ ಮುಂದೆ ಬಂದರು.

ರಾಯರ ಪ್ರಶ್ನೆಗೆ ಉತ್ತರವಾಗಿ ಅದೇ ಪ್ರಶ್ನೆ ಮರಳಿ ಬಂದಿತ್ತು. ಉತ್ಸಾಹದಿಂದ ಹಿಂತಿರುಗಿ ಮನೆಗೆ ಬಂದಿದ್ದ ರಾಯರು ನಿರುತ್ಸಾಹಗೊಂಡು ನೀಳ ಉಸಿರನ್ನು ಬಿಟ್ಟರು.

ಮಗನ ಮುಖದಲ್ಲಿನ ಅಶಾಂತಿಯೇ ತಾಯಿಗೆ ಉತ್ತರ ಕೊಟ್ಟಿತು. ತೊಟ್ಟಿದ್ದ ಕೋಟನ್ನು ಕಳಚಿ ಹಾಗೆಯೇ ಗೂಟದ ಕಡೆಗೆ ಎಸೆದು ಚಾಪೆಯ ಮೇಲೆ ಕುಸಿದು ಬಿದ್ದರು. ಯೋಚನೆಯ ಕೀಟ ನರವನ್ನು ಕೀಳಿತ್ತಿತ್ತು.

"ಏನು ಹಾಳು ಜನವೊ...ನಾನು ಕಾಣೆ.. !" ನುಡಿದು ರಾಯರು ತಲೆಯಮೇಲೆ ಕೈಯನ್ನು ಹೊತ್ತು ಕುಳಿತುಬಿಟ್ಟರು.

"ಹೋಗ್ಲಿ ಇನ್ನೇನ್ಮಾಡೋದು....ನೀವೇ ಇನ್ನೊಂದು ಕಾಗ್ದ ಬರೀರಿ ....ಹೆಣ್ಣು ಹೇತ್ತೋರು ನಾವು ತಗ್ಗಿ ನಡೀಬೇಕು...." ಕಾಫಿಯನ್ನು ತಂದ ಸೀತಮ್ಮ ನುಡಿದಳು.

"ನಂಗ್ಯಾಕೊ ಏನೊ ಹಾಳು ಯೋಚ್ನೆಗಳು ಬರ್ತಾ ಇವೆ....ದೇವರ ದಯದಿಂದ ಎಲ್ಲಾ ಸುಳ್ಳಾಗಿಹೋದ್ರೆ...." ಅಜ್ಜಿಯ ಹೃದಯದಲ್ಲಿ ಅಂಥೋಳನ ನಡೆದಿತ್ತು.

"ನಂಗೊಂದೂ ತೋಚ್ತಾ ಇಲ್ಲ. ಸುಬ್ಬಣ್ಣನಾದ್ರೂ ಇದ್ದಿದ್ರೆ ಚೆನ್ನಾಗಿತ್ತು. ಅವನನ್ನೆ ಅಲ್ಲಿಗೆ ಕಳಿಸಿ ಎಲ್ಲಾ ವಿಷಯಾನೂ ತಿಳ್ಕೊಬಹುದಾಗಿತ್ತು....ಇನ್ನೊಂದು ನಾಲ್ಕೈದು ದಿನದಲ್ಲಿ ಬರ್ತೀನಿ ಅಂತ ಹೋದ ಮಹಾನುಭಾವ ಇನ್ನೂ ಬಂದಿಲ್ಲ. ಎಲ್ಲಿ ಹಾಳಾಗಿ ಹೋದ್ನೊ....!" ರಾಯರು ಸಿಟ್ಟಾಗಿದ್ದರು. ಸಿಟ್ಟು ನೋವಿನಿಂದ ಬಂದಿತ್ತು.

"ಗಂಡ ಅಂತ ಅನ್ನಿಸ್ಕೊಂಡೋನು ...ಅದೂ ಈಗಿನ ಕಾಲದವನು.... ಈ ಅಳಿಯರಾಯರಿಗೆ ಪತ್ರಾ ಬರೆಯೋ ಪುರಸತ್ತೂ ಇಲ್ಲ ಅಂತ ಕಾಣುತ್ತೆ ದೊಡ್ಡೋರು ಅಂತ ಹೆಚ್ಚು ಸಂಬಂಧ ಬೆಳಸಿದ್ದು ಆಯ್ತು....!" ಅಜ್ಜಿಯ ಮನಸ್ಸು ಹೊಗೆಯಾಡತೊಡಗಿತ್ತು.

"ಪಾಪ....! ಶಕುಂತಲ ಒಂದು ಕಡೆ ಯೋಚ್ನೆ ಮಾಡೀ ಮಾಡೀ ಸಣ್ಣಗಾಗ್ತಾ ಇದ್ದಾಳೆ. ಸುಮ್ನಿರು....ಏನು ಆಕಾಶ ನಿನ್ನ ತಲೆ ಮೇಲೆ ಬಿದ್ದಿರೋದು ಅಂತ ನಾನು ಹೇಳಿ ಸಾಕಾಯ್ತು... ಮಂಚದ ಮೇಲೆ ಮಲಕ್ಕೊಂಡು ಯಾವಾಗ಼್ೂ ಜಂತೆ ಎಣಿಸ್ತಾ ಇರ್ತಾಳೆ...." ತಾಯಿ ನುಡಿದಾಗ ಸ್ವರದಲ್ಲಿ ಅಳಲು ಮಿಡಿಯುತ್ತಿತ್ತು.

"ಅವರು ಏನು ಜನವೋ ಏನು ಕತೆಯೋ....ಕಾಗ್ದ ಬರ್ದು ಆಗ಼್ೇ ಆರೇಳು ತಿಂಗಳಾಗ್ತಾ ಬಂತು. ಇನ್ನೂ ಉತ್ತರವಿಲ್ಲ. 'ಮೈನೆರದ ತಕ್ಷಣ ಕಾಗ್ದ ಬರದು ಬಿಡಿ....ನಿಷೇಕ ತೀರಿಸಿಕೊಂಡು ಹುಡುಗೀನ ಕರಕೊಂಡು ಹೋಗ್ತೇವಿ' ರಾಮಕೃಷ್ಣಯ್ಯ ಹೇಳಿದ್ದರು. ಒಂದಲ್ಲ ಅಂತ ಎರಡು ಕಾಗ್ದ ಹಾಕ್ದೆ. ಇನ್ನೂ ಉತ್ತರವಿಲ್ಲ. ಒಳ್ಳೇ ಜನ....?! ....ಒಳ್ಳೇ ಸಂಬಂಧ ...!"

"ಮೆತ್ತಗೆ ಮಾತ್ನಾಡಿ ರೂಮಿನಲ್ಲಿ ಶಕುಂತಲ ಇದಾಳೆ. ಕೇಳಿಸಿದ್ರೆ ಇದನ್ನು ಮನಸ್ಸಿಗೆ ಇನ್ನೂ ಹಚ್ಚಿಕೊಂಡು ಗೋಳಾಡ್ತಾಳೆ....ನನ್ನ ಕಂದ ಊಟ ತಿಂಡಿ ಸರಿಯಾಗಿ ತಿಂದು ಎಷ್ಟೋ ದಿನ ಆಯ್ತು...." ಸೀತಮ್ಮ ನುಡಿದು ರೂಮಿನ ಕಡೆಗೆ ನೋಡಿದಳು. ಬಾಗಿಲು ಹಾಕಿದ್ದುದರಿಂದ ಕೇಳಿಸಿಲ್ಲವೆಂದು ಸಮಾಧಾನಗೊಂಡಳು.

'ಶಕುಂತಲ ಗೋಳಾಡ್ತಾಳೆ' ರಾಯರಿಗೆ ಸಹಿಸಲಾರದ ಮಾತಿದು.

"ಏನಾಗಿದೆ ಗೋಳಾಡಕ್ಕೆ? ಇವತ್ತಲ್ಲ ನಾಳೆ ಕಾಗ್ದ ಬರಬಹುದು.... ಬರುತ್ತೆ. ಅಲ್ಲಿ ಅವರಿಗೆ ಏನು ಕೆಲ್ಸವೊ ಏನೋ? ಏನೋ ಅನಾನುಕೂಲ ಇರಬೇಕು....ಇಲ್ದಿದ್ರೆ ಹೀಗೆ ಸುಮ್ನೆ ಇರ್ತಾ ಇರ್ಲಿಲ್ಲ. ಇಲ್ಲಿ ನಾವು ಸುಮ್ನೆ ಕಾಗ್ದ ಬರಲಿಲ್ಲ ಅಂತ ಗೋಳಾಡಿದ್ರೆ....?!" ತಂದೆಯ ಮನಸ್ಸಿನಲ್ಲಿ ಇದೇ

ವ್ಯಥೆ ದಹಿಸುತ್ತಿದ್ದರೂ ಮಗಳಿಗೂ ಈ ವ್ಯಥೆಯ ಕಾವು ತಗುಲಿದೆ ಎಂದು ತಿಳಿದಾಗ ಅದನ್ನು ಸಹಿಸದಾಗಿತ್ತು.

"ಇನ್ನೂ ಒಂದು ಕಾಗ್ದ ಹಾಕ್ತೀನಿ....ನೋಡೋಣಾ....ನೋಡಿ ದೋರು ಮಾನ ಇಲ್ಲದೋನು ಅಂದ್ರೂ ಸರಿ...." ಧ್ವನಿಯನ್ನು ತಗ್ಗಿಸಿ ಪುನಃ ನುಡಿದರು.

"ನೀವು ಕಾಗ್ದ ಬರೆಯೋದು ಬರೀರಿ....ಮೊದ್ಲು ಆ ಸುಬ್ಬಣ್ಣ ಎಲ್ಲಿದ್ದಾನೆ ಅಂತ ಯಾರ್ನಾದ್ರೂ ವಿಚಾರಿಸಬೇಕಾಗಿತ್ತು. ಅವನು ಬಂದ್ರೆ ಹೋಗಿ ವಿಚಾರ್ಸಿಕೊಂಡು ಬರ್ತಾನೆ....ಎಲ್ಲಾ ಸರಿಹೋಗುತ್ತೆ.. " ಸೀತಮ್ಮ ನುಡಿದಳು.

"ಅವನೊಬ್ಬ ದೇಶಸಂಚಾರಿ....ಇರೋಕಡೆ ಇರೋಲ್ಲ. ಪ್ರಪಂಚದ ಕಷ್ಟಾಸುಖಾ ಎಲ್ಲಾ ಬೇಕು ಅವನಿಗೆ! ಹೆಂಡ್ತೀನ ಕಳಕೊಂಡು ಇರೋ ಹುಡುಗ ಹುಡುಗೀರಿಗೆಲ್ಲಾ ಮದ್ವೆ ಮಾಡಿಸೊ ಹಟತೊಟ್ಟು ಹೊರಟಾಗಿದೆ.... ಹೋಗ್ಬೇಡ ಸುಬ್ಬಣ್ಣ ಇಲ್ಲೇ ಇರು ಅಂತ ಹೇಳಿದ್ರೆ ಇನ್ನೊಂದು ನಾಲ್ಕು ದಿನದಲ್ಲಿ ಬಂದುಬಿಟ್ಟೆ ಅಂತ ಹೋದೋನು ಇನ್ನೂ ಬರ್ತಾ ಇದ್ದಾನೆ...."

"ಇವತ್ತೊ ನಾಳೆಯೊ ನಿಜವಾಗ್ಲೂ ಬರ್ತಾನೆ... ನಮ್ಮ ಶಕುಂತಲ ಅಂದ್ರೆ ಅವನಿಗೆ ತುಂಬಾ ಪ್ರೀತಿ. ನಮಗಿಂತ ಅವನಿಗೆ ಶಕುಂತಲಳನ್ನು ಸುಖವಾಗಿರೊ ಹಾಗೆ ನೋಡಿಕೊಳ್ಳಬೇಕು ಅಂತ ಆಸೆ....ಇವತ್ತೊ ನಾಳೆಯೋ ನಿಜವಾಗ್ಲೂ ಬರ್ತಾನೆ...." ಸಾವಿತ್ರಮ್ಮ ಭವಿಷ್ಯ ನುಡಿದರೂ ನಿರಾಶೆಯಿಂದ ದೂರವಾಗಿರಲಿಲ್ಲ.

"ನಂಗೆ ಒಂದೂ ತೋಚಲ್ಲ...." ರಾಯರು ನುಡಿದು ಆರಿ ತಣ್ಣಗಾಗಿದ್ದ ಕಾಫಿಯನ್ನು ಒಂದೇ ಗುಟಕಿಗೆ ಕುಡಿದುಬಿಟ್ಟರು.

ಎರಡುದಿನಗಳ ನಂತರ ಹಿಂತಿರುಗಿದ ಸುಬ್ಬಣ್ಣ ಮನೆಯಲ್ಲಿ ರುದ್ರ ಮೌನ ಲಾಸ್ಯವೆಸಗುತ್ತಿರುವುದನ್ನು ಕಂಡು ಗಾಬರಿಗೊಂಡ, ಮುದ್ದು ಶಕುಂತಲ ಹಾರಿಬಂದು ಸ್ವಾಗತಿಸಬೇಕಾಗಿತ್ತು. ಅಜ್ಜಿ ಮುದಿಬಾಯಲ್ಲಿ ಪೂರ್ಣ ವಾತ್ಸಲ್ಯದ ಅಕ್ಕರೆಯ ಕ್ಷೇಮ ಸಮಾಚಾರದ ಪ್ರಶ್ನೆ ಬರಬೇಕಾಗಿತ್ತು. ಸೀತಮ್ಮ ಬಾಗಿಲಲ್ಲಿ ನಿಂತು 'ಯಾಕೆ ಸುಬ್ಬಣ್ಣ ಅಪರೂಪ ಆದೆ?' ಎಂದು ಎರಡುದಿನ ಎಲ್ಲಾದರೂ ಹೋಗಿ ಬಂದರೂ ಪ್ರಶ್ನಿಸಬೇಕಾಗಿತ್ತು.

ಇಂದು ಯಾವುದೂ ಇಲ್ಲ. ಅಜ್ಜಿ ಎದುರಿಗೆ ಇದ್ದರೂ ಮಾತನಾಡಿಸಲಿಲ್ಲ. ತಲೆ ಎತ್ತಿ ನೋಡಿ ಸುಮ್ಮನಾದರು.

ಶಕುಂತಲ, ಸುಬ್ಬಣ್ಣ ಬಂದ ಶಬ್ದವನ್ನು ಕೇಳಿಯೂ ರೂಮಿನಿಂದ

ಹೊರಗೆ ಬರಲಿಲ್ಲ. "ಏನು ಸಾವಿತ್ರಮ್ಮ....ಚೆನ್ನಾಗಿದ್ದೀರ....ಯಾಕೋ ನನ್ನ ಮೇಲೆ ಸಿಟ್ಟಾಗಿರೊ ಹಾಗಿದೆಯಲ್ಲ." ಅನಸೇ ಪ್ರಶ್ನಿಸಿದ.

"ಆರಿಸಿ ಆರಿಸಿ ಒಳ್ಳೇ ಸಂಬಂಧ ಮಾಡ್ಸಿದೆ...." ಸಾವಿತ್ರಮ್ಮ ಸಿಟ್ಟಾಗಿದ್ದರು.

"ಇದೇನು ಸುಬ್ಬಣ್ಣ ನಮ್ಮನೆ ಮರ್ತು ಹೋಯ್ತು ಏನೋ ಅಂತಿದ್ದೆ." ಸೀತಮ್ಮನ ಮುಖದಲ್ಲಿ ಹುಸಿನಗೆ ಕಾಣಿಸುತ್ತಿದ್ದರೂ ಕಣ್ಣಿನಲ್ಲಾ ಅದು ಪ್ರತಿಫಲಿಸುತ್ತಿರಲಿಲ್ಲ.

"ಏನು ಸುಬ್ಬಣ್ಣ ಮಾವ ಬಂದೇಬಿಟ್ಟೆ...." ರೂಮಿನಿಂದ ಶಕುಂತಲ ಹೊರಗೆ ಬಂದಳು.

"ಇದೇನೆ ಶಕುಂತಲ....!...ನೀನು ಗಂಡನ ಮನೆಗೆ ಹೋಗಿದ್ದೀಯಾ ಅಂತಿದ್ದೆ....ಇಲ್ಲೇ ಇದ್ದೀಯಲ್ಲ ...?!" ಪ್ರಶ್ನೆಯನ್ನು ಶಕುಂತಲಳನ್ನು ಕುರಿತು ಮಾಡಿದ್ದರೂ ಉತ್ತರಕ್ಕಾಗಿ ಸೀತಮ್ಮ, ಸಾವಿತ್ರಮ್ಮನವರ ಕಡೆ ದೃಷ್ಟಿ ಹೊರಳಿಸಿದ.

ಶಕುಂತಲ ರೂಮಿನೊಳಗೆ ಪುನಃ ಹೊರಟು ಹೋದಳು.

ಸುಬ್ಬಣ್ಣನನ್ನು ಕಂಡೊಡನೆ ತಡೆದಿದ್ದ ಸಿಟ್ಟು ಒಮ್ಮೆಗೇ ಬಂದಿದ್ದುದು ಆಗ ಸ್ವಲ್ಪ ಸ್ವಲ್ಪವಾಗಿ ಇಳಿಯುತ್ತಿತ್ತು. ಸುಬ್ಬಣ್ಣ ಬಂದಮೇಲೆ ಎಲ್ಲವೂ ಸರಿಹೋಗುತ್ತದೆ ಎನ್ನಿಸಿತ್ತು ಅವರಿಗೆ. ಆದ್ದರಿಂದ ಮನಸ್ಸನ್ನು ಸಮಾಧಾನ ಮಾಡಿಕೊಂಡು ನುಡಿದರು.

"ಎಲ್ಲಿಂದ ಬಂದೆ ಸುಬ್ಬಣ್ಣ....ನೀನು. ಇಷ್ಟು ದಿನ ಎಲ್ಲಿ ಹೋಗಿದ್ದಿ....ಮದ್ವೆ ಮಾಡ್ಸಿ ಹೋದೋನು ಇತ್ತ ಪುನಃ ಬಂದು ನಾಲ್ಕು ದಿನ ನಿಲ್ಲಲೇ ಇಲ್ವಲ್ಲ ...ನಾಲ್ಕೈದು ಸಾರಿ ಬಂದೆ ಓಡಿಹೋದೆ....ಈಗ ಬರ್ತಾ ಇದ್ದಿ... ?" ಸಾವಿತ್ರಮ್ಮ ನುಡಿದರು.

"ಅದಿರ್ಲಿ....ನಂದು ಇದ್ದೇ ಇರುತ್ತೆ ಗೋಳು ...ಇದ್ಯಾಕೆ ಇನ್ನೂ ಶಕುಂತಲಳನ್ನ ಗಂಡನ ಮನೆಗೆ ಕಳಿಸಿಲ್ಲ ...ನಾನು ಹಿಂದೇ ಬಂದಿದ್ದಾಗ.... ಮೈನೆರೆದಿದ್ದಳಲ್ಲ ...! ...ನಂಗೂ ಇಲ್ಲಿಗೆ ಬರ್ಬೇಕು ಶಕುಂತಲ ಗಂಡನ ಮನೆಗೆ ಹೋದಳೊ ಇಲ್ಲವೊ ...ನಂಗೆ ನಿಷೇಕದ ಊಟದ ಲಭ್ಯ ಇದೆಯೊ ಇಲ್ಲವೊ ಅಂತ ಯೋಚಿಸ್ತಾ ಇದ್ದೆ. ಆದ್ರೆ ಬರೋಕ್ಕೆ ಆಗ್ತಾ ಇರ್ಲಿಲ್ಲ. ಅವತ್ತು ನೋಡಿ ಇಲ್ಲಿಂದ ಸೀದಾ ಮಾಗಡಿಗೆ ಹೋದೆ. ಮಾಗಡಿ ಭೀಮ ರಾಯರ ಮಗಳ ಮದ್ವೆ ಅಂತ ಗಂಡನ ಕಡೆಯುವರು ನಮ್ಮದು ಹರಕೆ ಇದೆ ತಿರುಪತೀಲಿ ಮದ್ವೆ ಮಾಡಿಕೊಟ್ರೆ ಆಗಬಹುದು....ಇಲ್ದೆ ಇದ್ರೆ ಆಗೊಲ್ಲ

ಅಂತ ಹಟ ಹಿಡಿದಿದ್ರು....ಇನ್ನೇನು ಮಾಡೋದು ಒಳ್ಳೇ ಸಂಬಂಧ. ಬಿಡೋಕ್ಕೆ ಆಗ್ತಾ ಇರ್ಲಿಲ್ಲ. ಹೆಣ್ಣೋರನ್ನ ಒಪ್ಪಿಸಿ ತಿರುಪತಿಗೆ ಕರಕೊಂಡು ಹೋಗಿ ಮದ್ವೆ ಮಾಡಿಸಿದ್ದು ಆಯ್ತು ಅನ್ನಿ.. ಹಾಗೆ ಹೋದ ಮೇಲೆ ಪುಣ್ಯ ಸ್ಥಳ ಅಂತ ಕಾಳಹಸ್ತಿ,....ಅದೂ ಇದೂ, ನೋಡೋದು ಅಂತ ಹತ್ತು ಹದಿನೈದು ದಿನ ಆಗಿಹೋಯ್ತು. ಅಲ್ಲೆ ಇನ್ನೊಂದು ಮದ್ವೆವಿಷಯ ಬಂದು ಬಿಡ್ತು. ಭೀಮರಾಯರ ಅಳಿಯನ ಸ್ನೇಹಿತ ಒಬ್ಬ ಮದ್ವೆಗೆ ಬಂದಿದ್ದ. ಶಾಮರಾಯರು ಅಂತ ಒಬ್ಬರು ಮದರಾಸಿನಿಂದ ಬಂದಿದ್ದರು. ಅವರಿಗೆ ಒಬ್ಬಳು ಮಗಳಿದ್ದಳು.. ಸರಿ ಜಾತಕ ತರಿಸಿ ನಡೆಸಿ ಹುಡುಗನನ್ನು ಬಲವಂತ ಮಾಡಿ ಕರಕೊಂಡು ಹೋಗ್ಬೇಕಾಯ್ತು ಮದರಾಸಿಗೆ. ಹೋದ್ದೂ ಆಯ್ತು ....ಮದ್ವೇನೂ ನಿಶ್ಚರ್ಯವಾಯ್ತು. ಮುಂದಿನ ತಿಂಗಳಲ್ಲಿ ಮದ್ವೆ ಅನ್ನಿ. ಅಲ್ಲಿಂದ ಸ್ವಲ್ಪ ಅಲ್ಲಿ ಇಲ್ಲಿ ಸುತ್ತಿಕೊಂಡು ಇಲ್ಲಿಗೆ ಬರೋಣಾ ಅಂತಿದ್ರೆ ಬೆಂಗಳೂರಿನ ಸ್ಟೇಷನಲ್ಲೆ ನಮ್ಮೂರ ಸಿದ್ರಾಮಣ್ಣ ಸಿಕ್ಕಿದ....ಅವನಿಗೂ ಅವನ ಮಗನಿಗೂ ಮಾರಾಮಾರಿ ಆಯ್ತಂತೆ ...ಪಾಲು ಬೇಕು ಅಂತ ಕೂತಿದ್ದಾನಂತೆ....ಯಾವ್ದೋ ಹಾಳು ಹುಡುಗೀನ ಬೇರೆ ಮನೆಗೆ ಕರಕೊಂಡು ಬಂದಿದ್ದಾನೆ....ಹ್ಯಾಗಾದ್ರೂ ಮಾಡಿ ನನ್ನ ಮನೆ ಗೌರವ ಉಳಿಸಪ್ಪ ಅಂತ ಕಣ್ಣೀರು ಸುರಿಸಿ ಕೇಳ್ಕೊಂಡ. ಇಲ್ಲಿಗೆ ಹೋಗಿ ಪುನಃ ಬರ್ತೀನಿ ಅಂದ್ರೂ ಕೇಳ್ಲಿಲ್ಲ. ಊರಿಗೆ ಎಳಕೊಂಡೇ ಹೋದ....ಸರಿ ! ಅಲ್ಲಿಗೆ ಹೋಗಿ ಏನೇನೊ ಹೇಳಿ ಸಮಾಧಾನ ಮಾಡಿದ್ದು ಆಯ್ತು ಅನ್ನಿ ...ಊರಿಗೆ ಉಪಕಾರಕ್ಕೆ ಹೋದ್ದು ! ಎಷ್ಟು ಬೇಗ ಹಿಂತಿರುಗೋಣಾ ಅಂದ್ರು ಹನ್ನೆರಡು ದಿನ ಆಗಿ ಹೋಯ್ತು .. ! ...ಹೋಗ್ಲಿ ಏನು ಸಮಾಚಾರ ಇಲ್ಲೀದು ? ...ಏನು ಎಲ್ಲಾರೂ ಬಾಳ ಯೋಚಿಸ್ತಾ ಇರೊಹಾಗಿದೆಯಲ್ಲ ...?!....ಶಕುಂತಲಳ ಮುಖವೂ ಸಪ್ಪಗಿದೆ ...! ...ಏನು ಸಾವಿತ್ರಮ್ಮ ಸಮಾಚಾರ...." ಸುಬ್ಬಣ್ಣ ತನ್ನ ವಿಚಾರವನ್ನು ಕೇಳದೆ ಇದ್ದರೂ ತಾನಾಗಿ ನುಡಿದು ಸಮಾಚಾರವನ್ನು ಪ್ರಶ್ನಿಸಿದ.

"ಹುಡುಕಿ....ಹುಡುಕಿ ಒಳ್ಳೆ ಸಂಬಂಧ ಮಾಡ್ಸಿದೆಯೊ ಸುಬ್ಬಣ್ಣ. ಮದ್ವೆ ಮ್ಯಾಡಿಕೊಂಡು ಹೋಗಿ ಇಷ್ಟು ತಿಂಗಳು ಆದ್ರೂ ಕ್ಷೇಮ ಸಮಾಚಾರಕ್ಕೆ ಒಂದು ಕಾಗದ ಬರೀಬೇಡ್ವೆ. ಹೋಗ್ಲಿ ಹುಡುಗಿ ಮೈನೆರೆದಿದ್ದಾಳೆ ಅಂತ ಕಾಗ್ದ ಬರೆದ್ರೆ....ಅದಕ್ಕೂ ಒಂದು ಉತ್ತರ ಬೇಡ್ವೆ ?!" ಸೀತಮ್ಮ ನುಡಿದಳು.

"ಮೊನ್ನೆ ಗೌರಿಹಬ್ಬಕ್ಕೆ ಮನಿಆರ್ಡರು ಕಳಿಸಿದರೆ ಮನಿಆರ್ಡರ್ ಫಾರಂನಲ್ಲಿ ಏನಾರೂ ಬರೀ ಬೇಕಾಗುತ್ತೆ ಅಂತಲೊ ಏನೊ ವ್ಯಾಪಾರ ಇದ್ದ

ಹಾಗೆ ಇಪ್ಪತ್ತು ರೂಪಾಯಿಗೆ ಚೆಕ್ ಕಳಿಸಿದ್ದಾರೆ....ಅದೂ ರಾಮಕೃಷ್ಣಯ್ಯ ನವರು. ಅರಿಶಿನ ಇಲ್ಲ....ಕುಂಕುಮ ಇಲ್ಲ...! ಹುಡುಗನಿಂದ ಹೆಂಡ್ತಿಗೆ ಆಶೀರ್ವಾದದ ಒಂದು ಮಾತಿಲ್ಲ!" ಇಷ್ಟರವರೆವಿಗೂ ಸುಮ್ಮನಿದ್ದ ರಾಯರು ನುಡಿದರು.

"ಇಷ್ಟೇತಾನೆ?....ಇದಕ್ಕೇ ನೀವು ಇಷ್ಟೊಂದು ಮನಸ್ಸಿಗೆ ಹಚ್ಚಿ ಕೊಂಡು ಮಂಕಾಗಿ ಕೊಡ್ಬೇಕೆ....?....ನಂಗೆ ಈ ಯೋಚ್ನೆ ಬಂದಿರಲಿಲ್ಲ. ಬಂದಿದ್ರೆ ಎಂದೊ ಬಂದುಬಿಡ್ತಿದ್ದೆ ಎಷ್ಟು ಕಲ್ಸ ಇದ್ರೂ....! ದೊಡ್ಡೋರು ಅನ್ನೋರ ಗೋಳೆಲ್ಲಾ ಇಷ್ಟೆ ವೆಂಕಟರಾಯ. ಸ್ವಲ್ಪವಾದ್ರೂ ವ್ಯವಹಾರ ಜ್ಞಾನ ಇರೋಲ್ಲ...ಹುಡುಗರಿಗೆ ಪುರಸೊತ್ತಿಲ್ಲ....ರಾಮಕೃಷ್ಣಯ್ಯನವರು.... ವ್ಯವಹಾರವೇ ಗೊತ್ತಿಲ್ಲ. ಲಾಯರಾಗಿದ್ದು ಈಗ ಮನೇಲಿ ಕೂತಿದ್ರೂ ಲಾಯರ ಬುದ್ಧಿ ಎಲ್ಲಿ ಹೋಗುತ್ತೆ. ಕೇಸಿದ್ದ ದಿನಸೇ ಕಕ್ಷಿಗಾರರ ನೆನಪು! ಈಗ್ಲೂ ಅಷ್ಟೇ ಆಗಿರೋದು. ನಿಷೇಕಕ್ಕೆ ಎಲ್ಲಾ ಸಿದ್ಧಾನೂ ಮಾಡ್ಕೊಂಡು ಕಾಗ್ದ ಬರೆಯೋಣ ಅಂತಿರಬಹುದು. ಇದಕ್ಕೆ ನೀವು ಇಷ್ಟೊಂದು ಯೋಚಿಸ್ಬೇಕೆ...? ಸುಮ್ನಿರಿ ನಾನು ಇವತ್ತೇ ಹೋಗಿ ಎಲ್ಲಾ ಸಮಾಚಾರಾನೂ ತಿಳಕೊಂಡು ಬರ್ತೇನಿ. ಎಲ್ಲಿ ಸೀತಮ್ಮ ನಿನ್ನ ಕೈಯಿಂದ ಇಷ್ಟೊಂದು ಲೋಟಾ ಕಾಫಿ ತಂದುಬಿಡು....ಹೋದ ಕೆಲ್ಸಾ ಎಲ್ಲಾ ಸುಸೂತ್ರನಾಗಿ ಆಗುತ್ತೆ. ಮೂರು ಗಂಟೆ ಟ್ರೈನಿಗೆ ಹೊರಟುಬಿಡ್ತೇನೆ....ನಂಗೆ ಗಾಬರಿ ಆಗಿಹೋಯ್ತು. ಯಾಕೆ ಹೀಗೆ ಎಲ್ಲಾ ಸುಮ್ನೆ ಕೂತಿದ್ದಾರೆ ಅಂತ....!" ನಗುತ್ತ ನುಡಿದ ಸುಬ್ಬಣ್ಣ.

"ಊ....ಟ...." ಹೊರಗೆ ಹೋಗುವಾಗ ಊಟಕ್ಕೆ ಎಬ್ಬಿಸಬಾರ ದೆಂದು ಗೊತ್ತಿದ್ದರೂ ಊಟ ಆಗಿದೆಯೊ ಇಲ್ಲವೊ ಎಂಬ ಅನುಮಾನ ಸೀತಮ್ಮನನ್ನ ಕೊರೆದುದರಿಂದ ತೊದಲಿದಳು. "ಅದ್ಯಾಕಮ್ಮ .. ಅನುಮಾನಿಸ್ತಿ ....? ಊಟ ಆಗಿಲ್ದೆ ಇದ್ರೆ ಊಟಕ್ಕೆ ಹಾಕು ಸೀತಮ್ಮ ಅಂತ ಕೇಳ್ತಿದ್ದೆ. ನಂಗೇನು ನಾಚಿಕೇನಾ....ಕೇಳೋಕೆ ನನ್ನ ಮನೇಲಿ...." ಸುಬ್ಬಣ್ಣ ಪುನಃ ನಕ್ಕು ನುಡಿದ.

"ನೀನು ಬಂದ ಮೇಲೆ ಈಗ ಸ್ವಲ್ಪ ಧೈರ್ಯ ಬಂತು. ಹೋಗಿ ನಿಷೇಕಕ್ಕೆ ದಿನಾನೂ ಗೊತ್ತು ಮಾಡಿಕೊಂಡೇ ಬಂದುಬಿಡು. ಆದಷ್ಟು ಬೇಗ ಹುಡುಗೀನ ಗಂಡನ ಮನೆಗೆ ಕಳ್ಸಿಬಿಡೋಣಾ .. ಮದ್ವೆ ಆದ ಮೇಲೆ ಅವಳು ಗಂಡನ ಮನೇಲೆ ಇರ್ಬೇಕು.... ಧಾರೆ ನೀರು ಬಿದ್ದುಬಿಟ್ರೆ ಆಗೋಯ್ತು....ಆಗ್ಲೆ ಗಂಡನ ಮನೆ ಯೋಚ್ನೆ ಶುರುವಾಗುತ್ತೆ ..." ಸಾವಿ

ತ್ರಮ್ಮ ಶಕುಂತಲೆಯ ಕಡೆಗೆ ತಿರುಗಿ ನೋಡಿ ನಗೆಯಾಡಿದರು.

“ಅಂತೂ ಅವಳ್ಗೆ ಜೀವ ಗಂಡನ ಮನೆಗೆ ಕಳ್ಸಬೇಕು ...!” ಸುಬ್ಬಣ್ಣ ನಕ್ಕ.

“ಹೂಂ! ಸುಬ್ಬಣ್ಣ ...ನೋಡು ಹ್ಯಾಗೆ ಯೋಚಿಸಿ ಸಣ್ಣಗಾಗ್ತಾ ಇದ್ದಾಳೆ. ಊಟ ತಿಂಡಿ ಒಂದೂ ಸೇರೊಲ್ಲ ಅವಳಿಗೆ...ಗಂಡನ ಮನೆ ಸೇರಿದ್ರೆ ಸಾಕು ಅಂತಾ ಇದ್ದಾಳೆ. ಅಜ್ಜಿ, ಅಮ್ಮ ಅಪ್ಪ ಯಾರೂ ಬೇಕಿಲ್ಲ ಅವಳಿಗೆ ...” ಸುಬ್ಬಮ್ಮ ನುಡಿದಾಗ ಎಲ್ಲರೂ ನಕ್ಕರು.

## ೨೦

ಉತ್ಸಾಹ ಮತ್ತು ಸಂತೋಷದಿಂದ ಶಕುಂತಲೆಯನ್ನು ರೇಗಿಸಿ ಹಾಸ್ಯ ಮೂರ್ತಿಯಾಗಿ ದಾವಣಗೆರೆಗೆ ಹೋದ ಸುಬ್ಬಣ್ಣ ಎರಡು ದಿನಗಳ ನಂತರ ನಿರುತ್ಸಾಹ ಮತ್ತು ಅಸಂತೋಷದ ಮೂರ್ತಿಯಾಗಿ ಮನೆಗೆ ಹಿಂತಿರುಗಿದ. ರಾಯರು ಹೊರಗೆ ಇವನ ಬರುವನ್ನೇ ಕಾಯುತ್ತ ನಿಂತಿದ್ದರು.

“ವೆಂಕಟರಾಯ . ನಾನು ಮನೆ ಹಾಳನಪ್ಪ... !” ಚೀಲವನ್ನು ಅಲ್ಲಿ ಎಸೆದ। ನಡುಮನೆಗೆ ಹೋದ ಗೋಡೆಗೆ ಒರಗಿ ಕುಳಿತುಬಿಟ್ಟ. ವಯಸ್ಸಾದ ಸುಕ್ಕುಗೊಂಡ ಮುಖದಲ್ಲಿ ಕೆಂಪಗಾಗಿದ್ದ ಬಿಳಿಯ ಗುಡ್ಡೆಗಳ ಮಧ್ಯದಲ್ಲಿ ನೀಲಿಯ ಗುಡ್ಡೆ ವಿಚಿತ್ರ ಗತಿಯಲ್ಲಿ ಚಲಿಸುತ್ತಿದ್ದವು. ತುಟಿಗಳು ಒಂದನ್ನೊಂದು ಅಗಲಿ ವಿಕಾರವಾಗಿ ಬಿಳಿಯ ಒಸಡನ್ನು ತೋರಿಸುತ್ತಿದ್ದವು. ಸೋತ ದೇಹ ಬಳಲಿ ಬೆಂಡಾಗಿತ್ತು. ನಿರ್ಬಲ ಎಡಗೈ ಮುಖದ ಗೂಡಿಗೆ ಆಸರೆಯಾಗಿತ್ತು.

“ನಾನು ಮನೆ ಹಾಳು ಸೂಳೆಮಗ....! ಸಾವಿತ್ರಮ್ಮ . !! ಮನೆ ಹಾಳು ಮಾಡಿಬಿಟ್ಟೆ ...” ಸುಡಿದು ಸುತ್ತಲೂ ಕ್ಷೀಣವಾಗಿ ನೋಡಿದ. ವೆಂಕಟರಾಯ ಸೀತಮ್ಮ ಸಾವಿತ್ರಮ್ಮ ಶಕುಂತಲ ಮಂತ್ರಮುಗ್ಧರಾಗಿ ಕುಳಿತ್ತಿದ್ದರು.

ಸಾವಿತ್ರಮ್ಮನ ಹಲ್ಲಿಲ್ಲದ ಬಾಯಲ್ಲಿ ತುಟಿಗಳು ಅಲುಗಾಡುತ್ತಿದ್ದವೇ ವಿನಃ ಮಾತು ಹೊರಗೆ ಬರಲಿಲ್ಲ.

“ದಾರೀಲೇ ಟ್ರೈನಿನಿಂದ ಹೊರಗೆ ಹಾರಿ ಸತ್ತು ಹೋಗೋಣಾ ಅಂತಿದ್ದೆ. ಸತ್ತು ಸುಣ್ಣವಾಗಿ ಸುಡುಗಾಡಿಗೆ ಹೋಗೋದಕ್ಕಿಂತ ಪಾಪಿ ದೇಹಕ್ಕೆ ಪ್ರಾಯಶ್ಚಿತ್ತವಾದ್ರೂ ಆಗ್ಲಿ ಅಂತ ಇಲ್ಲಿಗೆ ಬಂದೆ ಸೀತಮ್ಮ .. ಮನಸ್ಸಿಗೆ ಬಂದಷ್ಟು ಬಯ್ಯಿ ಸೀತಮ್ಮ ...ವೆಂಕಟರಾಯ ಮೂಲೇಲಿರೊ ಪೊರಕೆ

ಕೈಗೆ ತಗೊಳಪ್ಪ ...! ಶಕುಂತಲಾ....! ಏನು ಮಾಡಿಬಿಟ್ನೇ ನಾನು....? ನಿನ್ನ ಹಾಳು ಮಾಡಿ ಬಿಟ್ಟೆನಲ್ಲೆ ?"

"ಅದೇನು ಹೇಳು ಸುಬ್ಬಣ್ಣ ..." ರಾಯರು ಆತುರದಿಂದ ಮುಂದೆ ಹೋಗಿ ನಿಂತು ಪ್ರಶ್ನಿಸಿದರು. ಏನೋ ವಿಕೃತ ಆಶಂಕೆಯಿಂದ ತುಟಿಗಳು ಕಂಪಿಸುತ್ತಿದ್ದವು.

"ನಾನು ನಿನಗೆ ಮಿತ್ರನಂತೆ ಬಂದು ಶತ್ರುವಾದ್ನಲ್ಲೋ....ವೆಂಕಟ ರಾಯ ...! ನನಗೆ ಯಾವ ನರಕ ಕಾದಿದೆಯೊ?!....ನಗ್ತಾ....ನಗ್ತಾ ಇದ್ದ ಹೂವನ್ನು ಹಿಸಕಿ ಹಾಕಿಸಿಬಿಟ್ನಲ್ಲೋ...." ದುಃಖ ಉಮ್ಮಳಿಸಿ ಬಂದಿತ್ತು.

"ಅದೇನು ಬಗುಳೋ ಬೇಗ ..." ಅಜ್ಜಿಯ ಸಹನೆ ಮೀರಿಹೋಗಿತ್ತು.

ಶಕುಂತಲಳ ದೇಹವೆಲ್ಲಾ ಕಂಪಿಸುತ್ತಿತ್ತು. ಮುಖ ಬಿಳಲಿ ಕಣ್ಣು ಕಾಂತಿಹೀನವಾಗಿತ್ತು. ಕಾಲು ನಡುಗಿ ಕುಕ್ಕರುಬಿದ್ದಳು.

ಸೀತಮ್ಮ ಏನನ್ನೂ ಅರ್ಥ ಮಾಡಿಕೊಳ್ಳಲಾರದೆ ಕಣ್ಣೀರು ಮಿಡಿಯು ತಿದ್ದಳು.

"ಹುಡುಗ ಬೇರೆ ಮದ್ವೆಯಾಗಿದ್ದಾನೆ..." ಸುಬ್ಬಣ್ಣನ ತುಟಿ ಅಲುಗಿ ನಾಲಿಗೆ ನುಡಿಯಿತು.

"ಮ....ದು....ವೆ...!!" ಹುಚ್ಚನಂತೆ ಕೂಗಿ ವಿಕಾರವಾಗಿ ಸುಬ್ಬಣ್ಣ ನನ್ನ ಅಲುಗಾಡಿಸಿದರು ರಾಯರು.

"ಮ ...ದು....ವೆ...ಆದ....ಬೇರೆ....!" ಸಾವಿತ್ರಮ್ಮ ತೊದಲಿದರು.

"ಏನಂದೆ ...! ಸುಬ್ಬಣ್ಣ....ಮದ್ವೆ??!" ತಾಯಿಯ ಹೃದಯ ಬಿರಿ ಯಿತು. "ಇದು ಕೇಳೋಕ್ಕೆ ಮುಂಚೆ ನಾನು ಸಾಯ್ಬಾರದಾಗಿತ್ತಾ....!!" ಉನ್ಮತ್ತಳಾಗಿ ಎದ್ದು ಓಡಿ ಹೋಗಿ ಶಕುಂತಲೆಯನ್ನು ತಬ್ಬಿಕೊಳ್ಳಹೋದಳು.

ಕುಸಿದು ಕುಳಿತಿದ್ದ ಶಕುಂತಲ ನೆಲದ ಮೇಲೆ ಹೊರಳಿದಳು. ಮಗ ಳನ್ನು ಬಾಚಿ ತಬ್ಬಿಕೊಂಡಳು ಸೀತಮ್ಮ.

"ಇದ್ಯಾಕೆ ಬೇರೆ ಮದ್ವೆ ಆದನಂತೆ....?!" ರಾಯರ ಪ್ರಶ್ನೆಯಲ್ಲಿ ಹೃದಯದ ಬೇನೆಗೆ ಕೋಪ ಹೊತ್ತಿ ಉರಿಯುತ್ತಿತ್ತು.

"ಒಬ್ಬಳು ಹೆಂಡತಿ ಸಾಲದಂತಾ ಅವನಿಗೆ....?" ಸಾವಿತ್ರಮ್ಮ ವಿಕಟ ವಾಗಿ ಪ್ರಶ್ನಿಸಿ ಸುಬ್ಬಣ್ಣನ ಎದುರು ನಿಂತರು.

"ನಿನ್ಗೇನು ಗತಿಬಂತೇ....ಮಗು....!!" ತಾಯಿ ಮಗಳ ಮುಂಗುರ ಳನ್ನು ತೀಡಿದಳು. ಪ್ರೈದಡವಿದಳು.

"ಯಾಕೆ ಮದ್ವೆ ಆದ್ನಂತೆ....ಇವಳ್ನ....!" ಪ್ರಶ್ನಿಸಿದರು ರಾಯರು.

ಕ್ರೂರವಾಗಿ ಸುಬ್ಬಣ್ಣನನ್ನು ದುರಗುಟ್ಟಿಕೊಂಡು ನೋಡಿದರು.

" ಬೇಕೂ ಅಂತಲೇ ಮದುವೆ ಆದನಂತೆ...." ಸುಬ್ಬಣ್ಣ ಉತ್ತರವಿತ್ತ.

" ಅಂದರೆ!?....ಮೊದ್ಲೆ ನಿರ್ಧಾರಮಾಡಿಕೊಂಡು ಮದ್ವೆ ಆದ್ನಂತಾ....? ಮದ್ವೆ ಆಗುತ್ಲು ಬಿಟ್ಟು ಬಿಡ್ತೇನಿ....ಅಂತ....!!"

" ಹೌದಂತೆ ! ಮೊದಲೇ ನಿರ್ಧಾರಮಾಡಿಕೊಂಡೆ ಮದ್ವೆ ಆದ್ನಂತೆ ! ಬಿಡುವುದಕ್ಕೇ ಮದ್ವೆ ಆದನಂತೆ....!!"

" ಕಟುಕ ...ಸೂಳೆಮಗ... ! ಅದೇನು ದ್ವೇಷ ನಮ್ಮೇಲೆ....?" ಸಾವಿತ್ರಮ್ಮ ಪ್ರಶ್ನಿಸಿದರು. ರಾಯರು ಮಾತನಾಡಲಾಗದೆ ಕೋಪ, ದುಃಖ ದಿಂದ ಹಲ್ಲು ಕಡಿಯುತ್ತ ನಿಂತಿದ್ದರು.

" ದ್ವೇಷ ಅಲ್ಲ....! ಸಾವಿತ್ರಮ್ಮ ರಾಕ್ಷಸರು ಅಂತ ತೋರಿಸ್ಕೊಳ್ಳೋಕ್ಕೆ....!" ಕೋಪ ಸುಬ್ಬಣ್ಣನಲ್ಲಿ ಹೊತ್ತಿ ಉರಿಯುತ್ತಿತ್ತು.

" ಅಂದರೆ ...?" ತೊದಲಿದರು ರಾಯರು.

" ಅವನ ಜಾತಕದಲ್ಲಿ ಎರಡು ಮದುವೆಗಳ ಯೋಗವಿದೆಯಂತೆ....!" ಇನ್ನೂ ಮುಂದುವರಿಸುವುದರಲ್ಲಿದ್ದ ಸುಬ್ಬಣ್ಣ. "ಅದನ್ನು ಸಿದ್ಧಾಂತಮಾಡಿ ತೋರಿಸಲು ಈ ಎರಡನೆ ಮದುವೆಯೊ....?!" ರಾಯರು ಪೂರ್ಣ ಉನ್ಮತ್ತ ರಂತಾದರು.

" ಎರಡನೆ ಹೆಂಡತಿ ಆಜನ್ಮ ಸಹಧರ್ಮಿಣಿಯಾಗಿರ್ತಾಳಂತೆ....!"

" ಅಂದರೆ....ಮೊದಲನೆ ಹೆಂಡತಿ....!?" ಸೀತಮ್ಮ ಪ್ರಶ್ನಿಸಿ ನಡುಗಿದಳು. ಸುಬ್ಬಣ್ಣ ಮೂಕನಾಗಿ ಸುತ್ತಲೂ ನೋಡಿದ.

" ಮಾತಾಡು ಸುಬ್ಬಣ್ಣ...." ಕೂಗಿದರು ಸಾವಿತ್ರಮ್ಮ. ಏನೊ ಆಶಂಕೆಯಿಂದ ಎದ್ದು ಹೋಗಿ ಶಕುಂತಲೆಯನ್ನು ಚಾಚಿ ತಬ್ಬಿಕೊಂಡರು. "ನನ್ನ....ಚಿನ್ನ ! ಶಕುಂತಲೆ....ನಿನ್ನ ಹಣೇಲಿ ಇನ್ನೇನು ಬರ್ದಿದೆಯೋ ?" ಭದ್ರವಾಗಿ ತನ್ನ ಎರಡು ತೋಳುಗಳಲ್ಲೂ ಹಿಡಿದುಕೊಂಡರು. "ಇದು ನೋಡೋಕೆ ನನ್ನ ಇಷ್ಟುದಿನ ಬದುಕಿಸಿದ್ದೆಯಾ....ದೇವ್ರೆ ? ನಾನು ಮುಂಚೇನೇ ಸಾಯಬಾರದಾಗಿತ್ತೆ.!" ಮೇಲೆ ನೋಡಿ ಪುನಃ "ದೇವ್ರಂತೆ ದೇವ್ರು....ನೀನು ಹಾಳಾಗಿ ಹೋಗಿದ್ದಿ...." ಶಪಿಸಿದರು.

ಸೀತಮ್ಮನ ಬಾಯಿ ಬರಿದಾಗಿತ್ತು.

" ಬಗುಳೊ ಸುಬ್ಬಣ್ಣ...ಇನ್ನು ಏನೇನು ಆಗಬೇಕಾಗಿದೆಯೊ ಅದೆಲ್ಲಾ ಆಗ್ಲಿ....ಏನಾಗ್ತಾಳೊ ನಮ್ಮ ಶಕುಂತಲ....ಯಾವ ಪಾಪಿ ಸೂಳೇ ಮಗ ಭವಿಷ್ಯ ನುಡಿದನಂತೊ...? ಅವನ ಬಾಯಿಗೆ ಹುಳ ಬೀಳ... ನಮ್ಮನೆ

ಹಾಳು ಮಾಡಿದ...." ರಾಯರು ಎಂದೂ ಇಷ್ಟು ಸಿಟ್ಟಾಗಿರಲಿಲ್ಲ.

"ಮೊದಲನೆ ಮದುವೆ ಅವನ ಜನ್ಮಕ್ಕೆ ಒಂದು ಕಂಟಕವಂತೆ....ಇದರಿಂದ ಅವನಿಗೆ ಶ್ರೇಯಸ್ಸಿಲ್ಲವಂತೆ....!"

"ಎರಡನೆ ಮದುವೇಲಿ ಅವನಿಗೆ ರಾಜಸುಖಾ ಉಂಟಂತಾ...?!"

"ಹೇಳೊ ಸುಬ್ಬಣ್ಣಾ....ಆಗೋದೆಲ್ಲಾ ಆಗ್ಲಿ ಹೇಳೊ....ಏನೇನು ಅವಳ ಹಣೇಲಿ ಬರೆದಿದೆಯೊ ಅದೆಲ್ಲಾ ಆಗ್ಲಿ. ನೀನುಮಾತ್ರ ಏನನ್ನು ಮುಚ್ಚಿಡಬೇಡ....ಎಲ್ಲಾ ನೋಡೋಕೆ ಈಹಾಳು ಮುಂದೇನ ಆ ಪಾಪಿ ಪರಮಾತ್ಮ ಬದುಕಿಸಿ ಇಟ್ಕೊಂಡಿದ್ದಾನೆ...." ಸಾವಿತ್ರಮ್ಮ ತನ್ನನ್ನೇ ಶಪಿಸಿಕೊಂಡರು.

"ನ ...ನ್ನ ಶಕುಂತಲ....!!" ತಾಯಿ ಮಗಳನ್ನು ಇನ್ನೂ ಬಿಗಿಯಾಗಿ ಅಪ್ಪಿಕೊಂಡಳು. ತಮ್ಮೆಲ್ಲರನ್ನು ಬಿಟ್ಟು ಎಲ್ಲಿಗೊ ಓಡಿ ಹೋಗುತ್ತಾಳೆಂಬ ಭಯ....! ಅವಳಿಗೆ.

ಶಕುಂತಲಳಿಗೆ ಇದೊಂದು ಮಾತೂ ಕೇಳಿಸಲಿಲ್ಲ. ಆದರೆ ಕಣ್ಣು ಗುಡ್ಡೆ ಚಲಿಸುತ್ತಿತ್ತು. ಹೃದಯ ಬಡಿದುಕೊಳ್ಳುತ್ತಿತ್ತು.

ಸುಬ್ಬಣ್ಣ ಗೋಡೆ ಒರಗಿ ಕಣ್ಣುಮುಚ್ಚಿ ಸುಮ್ಮನೆ ಕುಳಿತುಬಿಟ್ಟ.

"ಏನು ದೈತ್ಯ ಕೆಲ್ಸ ಮಾಡ್ಸಿದೆಯೊ ದೇವ್ರೆ...ನನ್ನ ಕೈಯಿಂದ—! ಇದು ನ್ಯಾಯವೆ ಭಗವಂತ....? ಏನನ್ನು ಅರಿಯದ ಆ ಮಗುವನ್ನು ಗೋಳಾಡಿಸುತ್ತಾ ಇರುವೆಯಲ್ಲ?!" ನ್ಯಾಯ ದೇವತೆಯನ್ನು ನ್ಯಾಯಕ್ಕಾಗಿ ಬೇಡಿಕೊಳ್ಳುತ್ತಿದ್ದ.

"ಎಲ್ಲಾ ನನ್ನ....ಅದೃಷ್ಟ . !" ಅದೃಷ್ಟವನ್ನು ಶಪಿಸುತ್ತ ತಾವೊಂದು ಗೋಡೆಯನ್ನು ಒರಗಿದರು ರಾಯರು.

"ನಾನು ಸತ್ತುಹೋಗಿದ್ದರೆ ಚೆನ್ನಾಗಿತ್ತು...." ಶಕುಂತಲ ತೊದಲಿದಾಗ ಸೀತಮ್ಮ "ಬಾಯಿ ಮುಚ್ಚೇ ನಾಕು ..." ಕೆನ್ನೆಗೆ ಒಂದು ಹೊಡೆದಳು. ಮರುಕ್ಷಣದಲ್ಲೆ ಎದೆಗೆ ಬಿಗಿಯಾಗಿ ಅಪ್ಪಿಕೊಂಡು .. "ಅಯ್ಯೊ....ನನ್ನ ಚಿನ್ನಾ...." ಮುದ್ದಿಸಿದಳು.

ಬಹುಹೊತ್ತು ಯಾರೂ ನುಡಿಯಲಿಲ್ಲ. ರುದ್ರ ಮೌನ ಕರಾಳವಾಗಿ ನರ್ತಿಸತೊಡಗಿತು.

ಸ್ವಲ್ಪ ಹೊತ್ತು ಮೌನವಾಗಿ ಕುಳಿತಿದ್ದು ಅನಂತರ ಸಾಂಗವಾಗಿ ಎಲ್ಲವನ್ನು ವಿವರಿಸಿದ ಸುಬ್ಬಣ್ಣ.

" ಈಗ ನೆನಸ್ಕೊಂಡರೂ ನನ್ನ ಮೈ ಝುಂ ಎನ್ನುತ್ತೆ ವೆಂಕಟರಾಯ. ಅವರ್ಯಾರೂ ಮನುಷ್ಯರಲ್ಲ ರಾಕ್ಷಸರು. ರಾಮಕೃಷ್ಣಯ್ಯನಲ್ಲಿ ಸ್ವಲ್ಪ ಮನುಷ್ಯತ್ವ ಇದ್ದರೂ ಕೆಲಸಕ್ಕೆ ಬಾರದ್ದು. ಅವನ ಮಾತಿಗೆ ಮನೆಯಲ್ಲಿ ಸ್ವಲ್ಪವೂ ಬೆಲೆಯಿಲ್ಲ. ಮನೆಯ ಸಮಸ್ತ ಅಡಳಿತವೂ ಆ ಮಾರಿ....ಶಾಂತಲಕ್ಷ್ಮಿ.... ಅದೇ ರಾಮಕೃಷ್ಣಯ್ಯನ ಹೆಂಡತಿ....ಅವಳಿಗೇ ಸೇರಿದ್ದು. ಅದ್ಯಾವ ತಂದೆ ಅವಳಿಗೆ ಆ ಹೆಸರು ಇಟ್ನೊ....?!....ಶಾಂತಲಕ್ಷ್ಮಿ ಅನ್ನೋದು ಬಿಟ್ಟು ಅಶಾಂತ ರುದ್ರಿ ಅಂತ ಇಟ್ಟಿದ್ರೆ ಬಾಳ ಚೆನ್ನಾಗಿರ್‍ತಾ ಇತ್ತು.

"ನಾನು ಅವರ ಮನೆಗೆ ಹೋಗಿ ಬಾಗಿಲಲ್ಲಿ ನಿಂತು ರಾಮಕೃಷ್ಣಯ್ಯನ ಹೆಸರನ್ನು ಹಿಡಿದು ಕೂಗಿದೆ. ಅವನ ಮಗ....ಅನಂತನಾರಾಯಣನ ಹೆಸರು ಹಿಡಿದು ಕೂಗಿದೆ. ಬಹಳ ಹೊತ್ತಾದಮೇಲೆ ಆ ಮಹಾರುದ್ರಿ (ಶಾಂತಲಕ್ಷ್ಮಿ) ಬಂದು ಬಾಗಿಲು ತೆಗೆದಳು.

" 'ಓಹೋಹೊ ! ಏನು ಸುಬ್ಬಣ್ಣೋರು....?! ಅಪರೂಪ ದರ್ಶನ....! ನೋಡೊದ್ರಲ್ಲಿ ಎಲ್ಲೊ ಸಿದ್ಧರಾಗಿ ಹೊರ್‍ಟ ಹಾಗಿದೆ ನಮ್ಮನ್ನು ನೋಡಿಕೊಂಡು ಹೋಗೊ ಶಾಸ್ತ್ರ ಮಾಡೋಕೆ ಬಂದ ಹಾಗಿದೆಯಲ್ಲ....ಪರವಾಗಿಲ್ಲ ....ಪರವಾಗಿಲ್ಲ .. ನೀವು ಬರ್‍ದೆ ಇದ್ರೂ ಪರವಾಗಿಲ್ಲ....ಅಭಿಮಾನ ಇದ್ಯಲ್ಲ.... ಅದೇ ಸಾಕು....' ನಕ್ಕಳು. ನನಗೆ ಬಹು ಸಿಟ್ಟು ಬಂದಿತ್ತು.

"'ಹ್ಞೂ' ಅರ್ಥವಾಯ್ತು....ಕಮೀಶನ್ ವಸೂಲ್ ಮಾಡೋಕೆ ಬಂದ್ರಿ ಅಂತ ಕಾಣುತ್ತೆ....? ಅಲ್ವೆ ಸುಬ್ಬಣ್ಣೋರೆ....?....ಅಲ್ಲಿ ಹೆಣ್ಣೋರ ಮನೇಲಿ ಎಷ್ಟು ಹೊಡಿದ್ರಿ ಹೇಳಿ ...ಹುಡುಗೀಗೆ ಕನ್ಯಾಸೆರೆ ಬಿಡಿಸಿದ್ದೀರಿ....ಅಲ್ಲಿ ಸ್ವಲ್ಪ ಹೆಚ್ಚಾಗಿಯೇ ಸಿಕ್ಕಿರಬೇಕು...ಸಿಕ್ಕಿಲ್ದೆ ಇದ್ರೆ ಆದಷ್ಟು ಜಾಗ್ರತೆ ವಸೂಲು ಮಾಡಿಕೊಂಡುಬಿಡಿ....!' ಎಂದು ಅಂದಾಗ ಕೆನ್ನೆಗೆ ಹೊಡೆಯುವಷ್ಟು ಸಿಟ್ಟು ಬಂದಿತ್ತು. ಆದರೆ ಸುಮ್ಮನಿದ್ದೆ.

" 'ಸ್ವಲ್ಪ ಹೊತ್ತು ಇಲ್ಲೆ ಇರಿ' .. ಕುಳಿತುಕೊಳ್ಳಿ ಅನ್ನುವಷ್ಟು ಸಹನೆಯೂ ಇರಲಿಲ್ಲ. 'ನಾನು ಒಳಗೆ ಹೋಗಿ ಬರ್‍ತೇನಿ' ನನ್ನ ಅಲ್ಲೆ ನಿಲ್ಲಿಸಿ ಸ್ವಲ್ಪ ಹೊತ್ತಿನಮೇಲೆ ನಗುತ್ತ ಹೊರಗೆ ಬಂದಳು. 'ನಮ್ಮ ಹುಡುಗನಿಗೆ ಮದ್ವೆ ಮಾಡ್ಸಿ ಕಂಟಕ ಕಳೆದಿರಿ....ತುಂಬಾ ಸಂತೋಷ....ನಿಮ್ಮ ಹುಡುಗೀಗೂ ಕನ್ಯಾಸೆರೆ ತಪ್ಸಿದ್ದಾಗೆ ಆಯ್ತು. ಇಷ್ಟೇ ಅಲ್ಲ...ಇನ್ನೂ ಏನೇನೊ ಹೇಳಿದಳು. ಅವು ಕೇಳಿದ್ರೆ ನೀವು ಅಳ್ತೀರಿ...."

" ಅದೇನು ಅಂದಳು ಆ ಮಾರಿಮುಂಡೆ ಹೇಳು ಸುಬ್ಬಣ್ಣ ನಮ್ಮ

ಮನಸ್ಸು ಕಲ್ಲಾಗಿ ಹೋಗಿದೆ." ಸಾವಿತ್ರಮ್ಮ ಕಣ್ಣಲ್ಲಿ ಉಕ್ಕುತ್ತಿದ್ದ ನೀರನ್ನು ಒರಸಿಕೊಳ್ಳುತ್ತ ನುಡಿದರು.

"ತಗೊಳ್ಳಿ ಐವತ್ತು ರೂಪಾಯಿ ಇದೆ....ಈ ಗಂಟಿನಲ್ಲಿ.' ಗಂಟನ್ನು ಮೇಲಕ್ಕು ಕೆಳಕ್ಕೂ ನಾಲ್ಕಾರು ಬಾರಿ ಎಸೆದು ಶಬ್ದ ಮಾಡಿದಳು. 'ನಿಮ್ಮ ಹುಡುಗಿ ...ಪುಣ್ಯಾತ್ಗಿತ್ತಿ ಇಷ್ಟರಲ್ಲೇ....ಮುತ್ತೈದೆಯಾಗಿ ಅರಿಶಿನ ಕುಂಕುಮ ದೊಡನೆ ಈಶ್ವರನ ಸಾನಿಧ್ಯ ಸೇರಿಕೊಳ್ತಾಳೆ....ಮುತ್ತೈದೆ ಸಾವು ಬರೋಕೆ ಅದೃಷ್ಟವಿರಬೇಕು....!' ಅವಳ ಒಂದೊಂದು ಮಾತೂ ನನ್ನ ಹೃದಯವನ್ನು ಭರ್ಜಿಯಿಂದ ಇರಿಯುತ್ತಿತ್ತು. ನನಗೆ ಅವಳು ಮಾತನಾಡುತ್ತಿರುವುದು ಏನು ಎಂಬುದು ಸರಿಯಾಗಿ ಅರ್ಥವಾಗದೇ ಇದ್ದರೂ ಮಾತಲ್ಲಿ ವ್ಯಂಗ ತಿವಿ ದಿತ್ತು. 'ನೀವು ಮನುಷ್ಯರಲ್ಲ' ಅಷ್ಟು ನುಡಿದು ಹಣವನ್ನ ನೆಲವಮೇಲೆ ಎಸೆದುಬಿಟ್ಟೆ. ಕಾರ್ಯ ಸಾಧನೆಗಾಗಿ ನಾನು ಹೋಗಿದ್ದುದರಿಂದ ಎಷ್ಟು ಹೇಳಬಾರದೆಂದು ತಡೆದರೂ ಸಾಧ್ಯವಾಗಿರಲಿಲ್ಲ. ಮನಸ್ಸು ರೊಚ್ಚಿನಿಂದ ಕೂಡಿತ್ತು.

"ನಮ್ಮ ಹುಡುಗನ ಜಾತಕದಲ್ಲಿ ಎರಡು ಕಂಕಣ ಬಲವಿದೆ. ಅದಕ್ಕೆ ನಾವು ಹೋದ ತಿಂಗಳು ನಮ್ಮ ಹುಡುಗನಿಗೆ ಬೇರೆ ಮದ್ವೆ ಮಾಡಿದೆವು.... ನೀವೂ ಬರಬೇಕಾಗಿತ್ತು. ತುಂಬಾ ಅದ್ದೂರಿಯಾಗಿ ಮಾಡಿದೆವು. ನಾವೇ ಎರಡು ಖರ್ಚೂ ಇಟ್ಟುಕೊಂಡು ಲಗ್ನಾನ ಮಾಡಿಕೊಂಡೆವು. ಹುಡ್ಗೀನೂ ಚೆನ್ನಾಗಿದ್ದಾಳೆ. ಅದಲ್ದೆ ಅವಳು ನನ್ನ ಅಣ್ಣನ ಮಗಳು. ಸೌಭಾಗ್ಯ ಲಕ್ಷ್ಮಿ ಅಂತ ಹೆಸರು. ನಮ್ಮನೆಗೆ ಸೌಭಾಗ್ಯಲಕ್ಷ್ಮಿಯಾಗಿ ಬಂದಿದ್ದಾಳೆ.' ಹೇಳಿ ಅವಳನ್ನು ಕರೆದು ನನಗೆ ತೋರಿಸಿದರು. ನನಗೆ ರಕ್ತ ಹೆಪ್ಪುಗಟ್ಟಿ ಹೋಗಿತ್ತು.

"'ನೀವು ಮನುಷ್ಯರಲ್ಲ....ರಾಕ್ಷಸರು. ನಾನು ನುಡಿದೆ. ಆಕೆ ಗಹಗಹಿಸಿದಳು. ಆದರೆ ತಕ್ಷಣವೇ ನಾನು ಹಾಗೆ ಅಂದದ್ದು ತಪ್ಪೆಂದು ತಿಳಿದು ಸ್ವರವನ್ನು ಇಳಿಸಿ ಕೋಪದಿಂದ ಕೆಂಡ ಕಾರುತ್ತಿದ್ದ ಕಣ್ಣಲ್ಲಿ ಅಸ ಹಾಯತೆಯನ್ನು ತಂದುಕೊಂಡೆ.

"'ಏನುತಾಯಿ ! ನೀವು ಮಾಡಿದ್ದು ಧರ್ಮವೆ?....ಒಬ್ಬಳ ಜೀವನವನ್ನು ಹಾಳುಮಾಡಿದಹಾಗಾಗಲಿಲ್ಲವೆ ?!' ಪ್ರಶ್ನಿಸಿದೆ. ಇನ್ನು ಬಹಳ ಧರ್ಮನೀತಿ ಯನ್ನು ವಿವರಿಸಿದೆ. ಆದರೆ ಆಕೆಯ ಮನಸ್ಸು ಪಾಷಾಣ. ಕಲ್ಲು ನಿಜ ವಾಗಿಯೂ ಕರಗಬಹುದು. ಆದರೆ ಎಂದೂ ಆಕೆಯ ಮನಸ್ಸು ಮೆದುವಾ ಗದು.

" 'ನಾನೂ ಜಾತಕ ನೋಡಿದ್ದೇನೆ. ನಮ್ಮ ಜೋಯಿಸರಿಗೂ ತೋರಿಸಿದ್ದೆ ಈ ಕಂಟಕ ಕಂಡು ಬಂದಿರಲಿಲ್ಲ.' ಎಂದು ನಾನು ನುಡಿದೆ. ಆಕೆ ವಿಕಾರವಾಗಿ ಹಲ್ಲು ಕಿರಿದರು.

" 'ಹಾಗೆ ಬೇರೆ ಜಾತ್ಕ ತೋರಿಸ್ದೆ ಇದ್ದರೆ .. ನೀವೆಲ್ಲಿ ಒಪ್ತಾ ಇದ್ದಿರಿ ?!' ಇನ್ನೂ ಜೋರಾಗಿ ನಕ್ಕಳು.

" ನಾನು, ನೀವು ಬಹಳ ಒಳ್ಳೆಯವರು ಅಂತ ತಿಳ್ಕೊಂಡಿದ್ದೆ. ನಿಮ್ಮ ಮಾತು ನನ್ನ ಮೋಸ ಮಾಡಿತ್ತು....ಹೋಗ್ಲಿ ನೀವು ಮಾಡಿದ ಕಾರ್ಯ ನಿಮಗೆ ಸಮ್ಮತವಾಗಿ ಕಾಣುವುದೆ ? ....ನ್ಯಾಯ ಧರ್ಮ ಬೇಡವೆ ?' ನಾನು ಪ್ರಶ್ನಿಸಿದೆ.

" ಧರ್ಮ !....ನ್ಯಾಯ....!! ಅವೆಂದೊ ಅಸ್ತಿತ್ವವನ್ನು ಕಳೆದುಕೊಂಡವು ಸುಬ್ಬಣ್ಣನವರೆ ' ಪುನಃ ಅದೇ ಕರಾಳ ನಗುವಿನ ಧ್ವನಿ.

" ನನಗೆ ಕೋಪ ಮಿತಿಮೀರಿ ಹೋಗಿತ್ತು.

"ಅಷ್ಟು ಹೊತ್ತಿಗೆ ಹೊರಗಸಿಂದ ಲಾ ಕಟ್ಟನ್ನು ಹಿಡಿದು ಒಳಗೆ ಬಂದ ಅನಂತನಾರಾಯಣ. ಇವಳ ಹತ್ತಿರ ಮಾತನಾಡಿ ಪ್ರಯೋಜನವಿಲ್ಲವೆಂದು ಅವನತ್ತ ನಡೆದೆ.

" ನಮಸ್ಕಾರ....ನನ್ನ ಜ್ಞಾಪಕ ಇರಬಹುದು....ನಾನು ಸುಬ್ಬಣ್ಣ " ನನ್ನ ಪರಿಚಯವನ್ನು ನಾನೇ ಮಾಡಿಕೊಂಡೆ.

" ಓಹೊಹೊ !.... ನೀವೊ ...! ನೀವು ಬಂದ ಕಾರಣ ನಂಗೆ ಗೊತ್ತಾಯ್ತು " ಮೆಟ್ಟಿಲನ್ನು ಹತ್ತಿ ಮೇಲಕ್ಕೆ ಹೋದ. ನಾನೂ ಅವನನ್ನು ಅನುಸರಿಸಿದೆ.

" ಮೇಲಕ್ಕೆ ಹೋಗ್ಬೇಡಿ ಬನ್ನಿ ಸುಬ್ಬಣ್ಣ....ಅವನು ರೆಸ್ಟ್ ತಗೊಳ್ಳೊ ಕಾಲವಿದು....' ಅವನ ತಾಯಿ ಕೆಳಗಿನಿಂದ ಬೊಬ್ಬಿಟ್ಟಳು. ಅವನನ್ನು ಅನುಸರಿಸಿ ಮೇಲಕ್ಕೆ ಹೋದೆ. ಅವನ ಹೊಸಪತ್ನಿ ಅವನ ಕೋಟನ್ನು ಕಳಚಿಟ್ಟಳು. ಅನಂತನಾರಾಯಣ ಕುರ್ಚಿಯ ಮೇಲೆ ಕುಳಿತುಕೊಂಡ

" ನಿಮ್ಮನ್ನು ನೆನೆದೂ....ನೆನೆದೂ ಶಕುಂತಲ ಹುಚ್ಚಿ ಆಗ್ತಾ ಇದ್ದಾಳೆ ....ಕೊರಗಿ ಹಂಚಿಕಡ್ಡಿ ಆಗಿಹೋಗಿದ್ದಾಳೆ " ನಾನು ಮಾತನ್ನು ನೇರವಾಗಿ ಪ್ರಾರಂಭಿಸಿದೆ.

" ನಾನು ಎಲ್ಲವನ್ನು ಊಹಿಸಬಲ್ಲೆ. ಆದ್ರೆ ನಾನು ಏನೂ ಮಾಡೊ ಹಾಗಿಲ್ಲ ..ನೋಡಿ ಇವಳು ನನಗೆ ಮೋಡಿ ಮಾಡಿದ್ದಾಳೆ. ಇವಳಿಗಾಗಿ ನಾನು ಏನು ಬೇಕಾದರೂ ಮಾಡಲು ಸಿದ್ಧ." ಪಕ್ಕದಲ್ಲೆ ನಿಂತಿದ್ದ ಅವಳ ಕೆಂಪು ಕೆನ್ನೆಯನ್ನು ಜಿವುಟಿದ. ನನಗೆ ಕರಳು ಚುಚ್ಚಿತು.

“ ನೀವು ಮಾಡಿದ್ದು ನ್ಯಾಯವೆ?... ಧರ್ಮಸಾಕ್ಷಿಯಾಗಿ ಕೈ ಹಿಡಿದ ಆಕೆಯನ್ನು ತ್ಯಜಿಸುವುದು ಸೂಕ್ತವೆ?!” ನಾನು ಪ್ರಶ್ನಿಸಿದೆ.

“ ನಾನು ಮಾಡಿದ್ದು ತಪ್ಪು....ಸುಬ್ಬಣ್ಣೋರೆ. ನಾನೇ ಒಪ್ಪಿಕೊಳ್ತೀನಿ. ನಾನು ಶಕುಂತಲಳಿಗೆ ಅನ್ಯಾಯ ಮಾಡಿದೆ ಎಲ್ಲರೂ ಹೇಳ್ತಾರೆ. ನಾನೂ ಹೇಳ್ತೀನಿ. ಆದ್ರೆ ಇವಳಿಗಾಗಿ ನೋಡಿ ನಾನು ಆ ಕಾರ್ಯವನ್ನು ಮಾಡಬೇಕಾಯ್ತು. ಇವಳ ಪ್ರೇಮ ನನ್ನನ್ನು ಏನು ಬೇಕಾದರೂ ಮಾಡಲು ಸಾಧ್ಯ ”

“ ಪ್ರೇಮ !” ಕೇಳಿ ತತ್ತರಿಸಿದೆ.

“ ಇದು ನರಹತ್ಯೆಯಲ್ಲವೆ ?....ನಿಮ್ಮ ತೃಪ್ತಿಗಾಗಿ ಆ ಹೆಣ್ಣನ್ನು ಬಲಿ ಕೊಡುವಿರಾ ? ನಾನು ಪ್ರಶ್ನಿಸಿದೆ.

“ ಹೌದು ಸುಬ್ಬಣ್ಣೋರೆ....ಇದು ಒಂದು ವಿಧದಲ್ಲಿ ಬಲಿಯೇ ಸರಿ. ನಮ್ಮ ಉಜ್ವಲ ನೈಜ ಪ್ರೇಮಕ್ಕೆ ಈ ಬಲಿ ಬೇಕಾಗಿತ್ತು.’ ಸ್ವಲ್ಪವೂ ಅಳುಕದೆ ನಗುತ್ತಲೇ ನುಡಿದ. ‘ಸ್ವರ್ಗದ ಆಸೆಗಾಗಿ ನಿಮ್ಮ ಪೂರ್ವಿಕರು ನೂರಾರು ಪಶುಗಳ ಬಲಿ ಕೊಡುತ್ತಿದ್ದರಂತೆ....’ ಈ ನಾರಿ ಹೆಂಡತಿಯತ್ತ ನೋಡಿ ಇನ್ನೂ ಜೋರಾಗಿ ಗಹಗಹಿಸಿದ. ನಮ್ಮ ಪೂರ್ವೀಕರು ಎಂದು ಹೇಳುವಷ್ಟು ಸಹನೆ ಇರಲಿಲ್ಲ ಅವನಿಗೆ.

“ ಇದನ್ನು ಒಪ್ಪಿಕೊಳ್ಳುತ್ತ ನಿಮಗೆ ನಾಚಿಕೆಯಾಗುವುದಿಲ್ಲವೆ? ಒಂದು ಹೆಣ್ಣಿನ ಜೀವನವನ್ನು ಮಣ್ಣುಪಾಲು ಮಾಡಿ ನೀವು ಹ್ಯಾಗೆ ಸುಖ ಜೀವನ ನಡೆಸಲು ಸಾಧ್ಯ ! ಆ ನೆನಪು ನಿಮ್ಮನ್ನು ಬಾಧಿಸದೆ ? ನಿಮ್ಮ ಆತ್ಮ ಈ ಕಾರ್ಯವನ್ನು ಒಪ್ಪುವುದೆ? ನಿಮ್ಮ ಈಗಿನ ಪತ್ನಿ ಇದನ್ನು ಧರ್ಮವೆಂದು ತಿಳಿದಿದ್ದಾರಾ? ಹೆಂಗಸಿಗಾದರೂ ಇನ್ನೊಬ್ಬ ಸ್ತ್ರೀಯ ನೈಜದುಃಖ ಅರಿವಾಗಬೇಡವೆ ?.... ಏನು ಸೌಭಾಗ್ಯಲಕ್ಷ್ಮಿ !” ನಾನು ಅವನ ಹೆಂಡತಿಯತ್ತ ತಿರುಗಿ ಪ್ರಶ್ನಿಸಿದೆ.

“ ನಂಗೆ ಅದೊಂದೂ ಗೊತ್ತಿಲ್ಲ....ಧರ್ಮ ! ನೀತಿ ! ಅವೆಲ್ಲಾ ಅರ್ಥವಿಲ್ಲದ ಪದ. ಅದಕ್ಕೆ ನೀವು ಏನೇನೊ ಭಾವ ತುಂಬಿ ಮಹತ್ತರವಾಗಿ ಎಣಿಸಿ ಹೇಳ್ತೀರಾ. ನಾನು ಅವೊಂದೂ ನಂಬೊಲ್ಲ. ನಾನು ನಂಬೋದು ಇವರೊಬ್ಬರನ್ನೆ....ಇವರೇನು ಮಾಡಿದರೂ ನನಗೆ ಚೆನ್ನು. ಇವರೆ ನನಗೆ ಸಮಸ್ತವೂ. ಇವರೆ ನನ್ನ ಧರ್ಮ...ನನ್ನ ನೀತಿ....ನಿಮ್ಮ ಅರ್ಥದಲ್ಲಿ.” ಆಕೆ ಗಂಭೀರಳಾಗಿ ನುಡಿದಳು. ನಾನು ಪುನಃ ಪ್ರಶ್ನಿಸುವಂತೆಯೇ ಇರಲಿಲ್ಲ. ಪುನಃ ಅನಂತನಾರಾಯಣನತ್ತ ತಿರುಗಿದೆ.

“ ಏನು ಅನಂತನಾರಾಯಣ....ನೀವು ಅಡ್ವೋಕೇಟ್ ನಿಮಗೆ ಇದು

ನ್ಯಾಯವಾಗಿ ಕಾಣುವುದೆ ?" ನಾನು ಪುನಃ ಹಳೆಯ ಪ್ರಶ್ನೆಯನ್ನೇ ಕೇಳಿದೆ.

"ನ್ಯಾಯ ...!....ಅಲ್ಲ. ಕಾನೂನು ರೀತ್ಯಾ ಅನ್ಯಾಯ....! ನೀವು ಹೇಳುವ ಧರ್ಮದ ರೀತ್ಯಾ ಅಧರ್ಮ. ನೀತಿಯ ದೃಷ್ಟಿಯಲ್ಲಿ ಅನೀತಿ. ಆದರೆ ಪ್ರೇಮದ ದೃಷ್ಟಿಯಲ್ಲಿ ನಾನು ಮಾಡಿದ್ದು ನನಗೆ ಸರಿ ಕಂಡಿದೆ. ಹಿಂದೆ ಮಾಡಿದ್ದು ಅನ್ಯಾಯವೆಂದು ಮರುಗಬೇಕಾದರೆ ನಾವು ಅದನ್ನು ತಿಳಿಯದೇ ಮಾಡಿರಬೇಕು. ತಿಳಿದೂ....ತಿಳಿದು ಬೇಕೆಂದೇ ನಾನು ಮಾಡಿದ್ದೇನೆ. ಆದ್ದರಿಂದ ಧರ್ಮದ ಭಯವಾಗಲಿ, ನೀತಿಯ ನೆಳಲಾಗಲಿ ಅವಳ ನೆನಪನ್ನು ನನ್ನ ಸ್ಮೃತಿಪಥದಲ್ಲಿ ತರುವುದಿಲ್ಲ....ಬರಲು ನಾನು ಆಸ್ಪದಾ ಕೊಡುವುದೂ ಇಲ್ಲ...."

"ವೈವಾಹಿಕ ಜೀವನವನ್ನೇ ಭವ್ಯ ಜೀವನವೆಂದು ಕಲ್ಪಿಸಿ ನಿಮ್ಮ ಕೈ ಹಿಡಿದದ್ದಕ್ಕೆ ನಿಮಗಾಗಿ ಮರುಗಿ ಪ್ರಾಣ ಕಳೆದುಕೊಳ್ಳಬೇಕೆ? ಹೀಗೆ ಸಾಯುವುದರಿಂದ ನಿಮ್ಮ ಜೀವನಕ್ಕೆ ತೃಪ್ತಿ ಲಭಿಸುವುದೆ? ಹಾಗಿದ್ದರೆ ಅವಳನ್ನು ಕರೆಸಿ ನಿಮ್ಮಿಬ್ಬರ ಪ್ರಿಯ ಜೀವನವನ್ನು ವರ್ಣಿಸಿ ನಿಮ್ಮ ಕೈಯಿಂದಲೇ ವಿಷವನ್ನು ಕೊಟ್ಟುಬಿಡಿ. ಆಕೆ ಸುಖವಾಗಿ ಕುಡಿದು ಸಾಯುತ್ತಾಳೆ. ಹೀಗೆ ಹಿಂಸೆ ಕೊಟ್ಟು ಸಾಯಿಸುವುದು ಸರಿಯಲ್ಲ. ನೀವು ಇಲ್ಲಿ ಸುಖವಾಗಿರುವುದು....! ಅಲ್ಲಿ ಅವಳು ನರಳಿ ಸಾಯುತ್ತಾ ಇರುವುದು ! ನೀವು ಮಾಡಿರುವುದು ಮನುಷ್ಯರು ಮಾಡುವ ಕಾರ್ಯವೇ? ವಿನಾಕಾರಣ ಅಗ್ನಿ ಸಾಕ್ಷಿಯಾಗಿ ಸ್ವೀಕರಿಸಿದ ಹುಡುಗಿಯನ್ನು ತ್ಯಜಿಸುವುದು ನ್ಯಾಯವೆ?" ನನ್ನ ಕೋಪ ಮಿತಿಮೀರಿ ಹೋಗಿತ್ತು.

"ಮನುಷ್ಯನಲ್ಲದೆ ಇನ್ನಾವ ಪ್ರಾಣಿಯೂ ಈ ಕಾರ್ಯವನ್ನು ಮಾಡಲಾರ ಸುಬ್ಬಣ್ಣನವರೇ." ಗಂಭೀರವಾಗಿ ನುಡಿದ. 'ಅವಳು ಆಜನ್ಮ ಪರ್ಯಂತ ನನ್ನನ್ನು ನೆನೆದು ಮರುಗ ಬೇಕಾಗಿಲ್ಲ. ನಾನು ಅವಳಿಗೆ ಕಟ್ಟಿರುವುದು ಒಂದು ತಾಳಿ.' ಮಂಗಳಸೂತ್ರ ಎಂಬ ಪವಿತ್ರ ಹೆಸರನ್ನು ಹೇಳಲು ಅವನ ಮನಸ್ಸು ಒಪ್ಪಿರಲಿಲ್ಲ. 'ಅದನ್ನು ಕಿತ್ತು ಹಾಕಿದರೆ ಅವಳಿಗೂ ನನಗೂ ಇನ್ನಾವ ಸಂಬಂಧವೂ ಇಲ್ಲ ...ಒಂದು ಕ್ಷಣ ಹಸೆಯ ಮಣೆಯ ಮೇಲೆ ಕೈಯನ್ನು ಹಿಡಿದುಕೊಂಡಿರಬಹುದು. ಅಷ್ಟು ಮಾತ್ರದಿಂದ ಅವಳ ಶೀಲ ಭಂಗವಾಯಿತು ಎಂದು ನಾನು ಹೇಳಲಾರೆ. ಅವಳು ಈಗಲೂ ಪೂರ್ಣ ಸ್ವತಂತ್ರ ಜೀವಿ. ನಾನು ಕಟ್ಟಿರುವ ತಾಳಿ ಎನ್ನುವ ಚಿನ್ನದ ಆಭರಣವನ್ನು ಕಿತ್ತು ಒಗೆದು ಇನ್ನೊಬ್ಬರನ್ನು ಯಾರನ್ನು ಬೇಕಾದರೂ ವರಿಸಿ ಮದುವೆಗಯ್ಯಾಬಹುದು." ಇಷ್ಟನ್ನು ನುಡಿಯುವಾಗ ಗಂಭೀರವಾಗಿಯೇ ಇದ್ದ.

"ನೀವು ಸತ್ಯವಾಗಿ ಮನುಷ್ಯರಲ್ಲ. ಯಾವ ಮನುಷ್ಯನೂ–ಅದೂ ಹಿಂದುವಾಗಿ ನುಡಿಯಲಾರ....ಅನಂತನಾರಾಯಣರಾಯರೆ....! ಧರ್ಮ ಸೂತ್ರ...! ಮಂಗಳಸೂತ್ರ ..! ಕರೀಮಣಿ....ಮುತ್ತೈದೆಯ ಜೀವಸೂತ್ರ.... ರಾಯರೆ! ನಿಮ್ಮ ಕಣ್ಣಿನಲ್ಲಿ ಅದು ಅಷ್ಟು ಅಲ್ಪವೆ?!" ನನಗೆ ಆವೇಶ ಬಂದಂತಿತ್ತು.

"ಅಗ್ನಿಸಾಕ್ಷಿಯಾಗಿ ಅವಳನ್ನು ಧರ್ಮ ಪತ್ನಿ ಎಂವಾಗಿ ಅಂಗೀಕರಿಸಿ ಧರ್ಮವನ್ನು ಒತ್ತಿ ಇಟ್ಟು ಕಟ್ಟುವ ಈ ಧರ್ಮಸೂತ್ರ! ಆಜನ್ಮ ಮಂಗಳಾಂಗಿ ಯಾಗಿರು ಎಂದು ಹರಸಿ ಶುಭ ಮುಹೂರ್ತದಲ್ಲಿ ಬಂಧಿಸುವ ಈ ಮಂಗಳ ಸೂತ್ರ ...! ತಂದೆ ತಾಯಿಗಳ ಮಗಳಾಗಿದ್ದ ಅವಳನ್ನು ಇನ್ನು ತನ್ನವಳೆಂದು ಭಾಷೆಯಿತ್ತು ಸ್ವೀಕರಿಸಿರುವ ಅಂಗೀಕಾರ ಮುಹೂರ್ತದ ಶುಭ ಲಾಂಛನ.... ಮಾಂಗಲ್ಯ....!!....ಮುತ್ತೈದೆಯ ಮುಖ್ಯ ಸೌಭಾಗ್ಯ....! ಹಾರ್ದಿಕ ಶುಭ ಹಾರೈಕೆಯಿಂದ ಕುಮಾರಿಯನ್ನು ಸಂಸಾರಿಯನ್ನಾಗಿ ಪರಿವರ್ತನಗೊಳಿಸಿ ಬಂಧಿಸುವ ಕರೀಮಣಿಯ ಮಕುಟ....!!....ನಿನ್ನ ಬಾಯಲ್ಲಿ ಎಷ್ಟು ಲಘು ವಾಗಿ ಹೋಗಿದೆ! ಭಾರತೀಯರಾಗಿ ನಮ್ಮ ಸುದೃಢ ಸಂಸ್ಕೃತಿ, ಹಾಗೂ ದಾಂಪತ್ಯ ಜೀವನಕ್ಕೆ ಕಿರೀಟವಾಗಿರುವ ಇದನ್ನು ಹೀಗೆ ನುಡಿಯಲು ನಿಮ್ಮ ಮನಸ್ಸು ಹ್ಯಾಗೆ ಒಪ್ಪುತ್ತೆ ಅನಂತನಾರಾಯಣ. ಇದನ್ನೇ ಹೀಗೆ ಕಟುವಾಗಿ ನುಡಿಯ ಬೇಕಾದರೆ ನೀನು ಏನು ಬೇಕಾದರೂ ಮಾಡಬಲ್ಲೆ.... ನಿನಗೆ ಧರ್ಮ ಇಲ್ಲ...ಕರ್ಮ ಇಲ್ಲ...ನೀತಿ ಕಾಣದವನು. ರೀತಿ ಮನಸ್ಸು ಬಂದಂತೆ ಮಾಡುವ ಕ್ರಮ! ಇವೆಲ್ಲ ಮಹತ್ತರ ಅಂಶಗಳ ಸಮಾಧಿಯ ಮೇಲೆ ನೀನು ನಿನ್ನ ಪ್ರೇಮ ಸಾಮ್ರಾಜ್ಯವನ್ನು ನಿರ್ಮಿಸಲಾರೆ....ಇದು ಪ್ರೇಮವಲ್ಲ. ಕಾಮ....! ವಿಕೃತ ಕಾಮ....!! ಕುರುಡು ವ್ಯಾಮೋಹ....!! ಮನದ ವಿಕಟ ಮೋಸ....!!! ಪವಿತ್ರ ಪ್ರೇಮದ ಹೆಸರಿನಲ್ಲಿ ಭಯಂಕರ ದರೋಡೆ....ನಮ್ಮ ಸಂಸ್ಕೃತಿಯ ಹತ್ಯೆ....! ನೀನು ಮಾಡುತ್ತಿರುವುದು ಅತ್ಯಾಚಾರ....ವ್ಯಭಿಚಾರ...." ಕಟುವಾಗಿ ನುಡಿದೆ. ಕೋಪದಿಂದ ಉನ್ಮತ್ತನಾಗಿದ್ದೆ.

"ನಡೀರಿ ಹೊರಗೆ ಸಾಕು....ನಿಮ್ಮ ಪಂಚಾಯ್ತಿ. ಮದ್ವೆ ಆಯ್ತು ನಮ್ಗೆ ಇಷ್ಟ ಇಲ್ಲ. ಬಿಟ್ಟುಬಿಟ್ಟೆವು ಅಷ್ಟೆ. ....ನಾವು ಗಂಡಿಸೋರು. ಏನು ಬೇಕಾದ್ರೂ ಮಾಡಬಹುದು. ನಡೀರಿ ಹೊರಗೆ...." ಮಹಾ ರುದ್ರಮ್ಮ ಆರ್ಭಟಿಸಿದಳು.

"ಸುಮ್ನಿರಮ್ಮ....ನೀನು....ಏನೇನು ಅನ್ನಬೇಕು ಅನ್ನಿಸುತ್ತೊ ಅದೆಲ್ಲಾ

ಅನ್ನಲಿ. ಸ್ವಲ್ಪ ಹೊತ್ತು ಹಾಯಾಗಿ ಕಾಲ ಕಳೆದ್ಹಾಗೆ ಆಯ್ತು. ಜಾಲಿ ಎಂಟರ್‌ಟೈನ್ಮೆಂಟ್...." ಅಳಿಯ ದೇವರು ಅಪ್ಪಣೆ ಕೊಡಿಸಿದರು. ನಾನು ಅಷ್ಟು ತೀವ್ರವಾಗಿ ಟೀಕಿಸಿ ಮಾತನಾಡಿದರೆ ಆತ ಅಷ್ಟು ಹಗುರವಾಗಿ ಅದನ್ನ ತೆಗೆದುಕೊಂಡ. ಇವರ ಹತ್ತಿರ ರೇಗಿ ಮಾತನಾಡುವುದರಿಂದ ಪ್ರಯೋಜನ ವಿಲ್ಲವೆಂದು ನಾನೆ ಮೆತ್ತಗಾದೆ.

" ಹೋಗ್ಲಿ ನಿಮ್ಮ ಮನಸ್ಸಿಗೆ ಬಂದಂತೆ ಮಾಡಿಕೊಳ್ಳಿ. ನಿಮ್ಮ ಹುಡಗೀನ ನಿಮ್ಮನೆಗೆ ಕರೆದುಕೊಂಡು ಬಂದುಬಿಡ್ತೇನೆ....ನೀವು ಏನು ಬೇಕಾದ್ರೂ ಮಾಡಿಕೊಳ್ಳಿ....ಬೇಕಾದ್ರೆ ಇಟ್ಕೊಳ್ಳಿ ಇಲ್ದಿದ್ರೆ ವಿಷ ಹಾಕಿಬಿಡಿ...." ನಾನು ಮಾತಿನ ದಾರಿಯನ್ನು ಬದಲಾಯಿಸಿದೆ.

" ಬರುವವಳು ಹೆಂಡತಿಯಾಗಿ ಮನೆಗೆ ಬಂದರೂ ನಾನು ಅವಳನ್ನು ಹೆಂಡತಿಯನ್ನಾಗಿ ಸ್ವೀಕರಿಸಲಾರೆ. ಹತ್ತಿರ ಬಂದು ಸಾಯೋತನಕ ನಮ್ಮನ್ನ ನೋಡಿ ನರಳ್ತಾ ಇರೋದಿಕ್ಕಿಂತ ಅಲ್ಲೆ ಇರೋದು ಮೇಲು. ಅವಳ ಜೀವನಕ್ಕೆ ಬೇಕಾದ್ರೆ ನಾನು ಏನು ಬೇಕಾದ್ರೂ ಕೊಡಬಲ್ಲೆ....ವರ್ಷಕ್ಕೆ ಇಷ್ಟು ಜೀವನಾಂಶ ಕೊಡಬೇಕು ಅಂತ ನೀವೇ ಹೇಳಿ ಅದನ್ನು ನಾನು ಇಂದಿನಿಂದಲೆ ಕೊಡ್ತೇನಿ. ಅವಳು ನನ್ನನ್ನೆ ನಂಬಿ ಸಾಯುವುದಾಗಿ ಹಟ ಹಿಡಿದ್ರೆ ....ಇದಕ್ಕೆ ಹೆಚ್ಚಾಗಿ ಏನನ್ನು ಮಾಡಲಾರೆ. ಇದನ್ನೇ ಮಾಡು ಎಂದೂ ಬಲವಂತಪಡಿಸಲಾರೆ....ಅವಳು ಪೂರ್ಣ ಸ್ವತಂತ್ರಳಿದ್ದಾಳೆ...." ಅವನ ರಾಗವೇ ಅವನದು.

" ಧರ್ಮ, ರೀತಿ, ನ್ಯಾಯ, ಒಂದನ್ನು ನಂಬದೇ ಇರೊ ನೀವು ಇಷ್ಟೊಂದು ಬಲವಾಗಿ ಹ್ಯಾಗೆ ಕೇವಲ ಭವಿಷ್ಯ ಒಂದನ್ನು ನಂಬಿದ್ದೀರಿ.... ಇಷ್ಟೆಲ್ಲಾ ಅನಾಚಾರಕ್ಕೆ ಅದರ ಅಸತ್ಯತೆ ಕಾರಣವಾದರೆ?....ನೀವು ನಿಮ್ಮನ್ನೇ ಮೋಸ ಮಾಡಿಕೊಂಡ ಹಾಗಲ್ಲವೆ?" ನಾನು ಪ್ರಶ್ನಿಸಿದೆ.

" ನಿಜ ನೀವು ಹೇಳುವುದು ಸತ್ಯ. ನಾನು ಯಾವುದನ್ನೂ ನಂಬುವುದಿಲ್ಲ. ನನಗೆ ಸರಿ ಕಂಡಿದ್ದನ್ನ ಮಾತ್ರ ಸತ್ಯ ಎಂದು ನಂಬುವವರು. ಆದರೆ ಭವಿಷ್ಯವನ್ನು ಪೂರ್ಣವೆಂದು ನಂಬಿದೆ. ನಂಬಿಯೂ ಇದ್ದೇನೆ. ಮೊದಲನೆಯವಳು ಅಲ್ಪ ಜೀವಿ ಎಂದೂ....ಎರಡನೆಯವಳು ಪೂರ್ಣ ಜೀವಿ ಎಂದೂ ನಮ್ಮ ಪುರೋಹಿತರು ಹೇಳಿದರು. ನಾನು ಈ ಸೌಭಾಗ್ಯಳನ್ನು ಮೊದಲಿನಿಂದ ಪ್ರೀತಿಸುತ್ತಿದ್ದೆ. ಇವಳನ್ನು ನಾನು ಮೊದಲನೆ ಹೆಂಡತಿಯನ್ನಾಗಿ ಮಾಡಿಕೊಳ್ಳಲು ಮನಸ್ಸು ಮಾಡಲಿಲ್ಲ. ಮುಖ್ಯವಾಗಿ ನಮ್ಮ ತಾಯಿಯವರು ಒಪ್ಪಲಿಲ್ಲ. Subconscious fear ಅಂತ ಹೇಳ್ತಾರಲ್ಲ. ಅದು

ನನ್ನನ್ನು ಈ ಕಾರ್ಯಕ್ಕೆ ಪ್ರೇರೇಪಿಸಿತು. ನಮ್ಮ ಪ್ರೇಮವನ್ನು ಚಿರಸ್ಥಾಯಿಯಾಗಿ ಇಡಲು ನಾನು ಈ ಕಾರ್ಯ ಮಾಡಿದೆ. ಅಕಸ್ಮಾತು ಭವಿಷ್ಯ ನಿಜವಾಗಿ ಅದರಂತೆ ಸೌಭಾಗ್ಯಳನ್ನು ಅಲ್ಪಾಯುವನ್ನಾಗಿ ಸ್ವೀಕರಿಸಲು ನಾನು ಸಿದ್ಧನಿರಲಿಲ್ಲ. ಅದಕ್ಕೆ ಅನ್ಯಾಯವೆಂದು ತಿಳಿದೂ ಹಿಂಜರಿಯಲಿಲ್ಲ. ನೀವೇ ಹೇಳುವ ಮಾತಿನಲ್ಲಿ ಈ ಕುರುಡು ಪ್ರೇಮಕ್ಕಾಗಿ....ಇವಳಿಗಾಗಿ ...' ಸೌಭಾಗ್ಯಳ ಕೈಯನ್ನು ಹಿಡಿದುಕೊಂಡ. 'ಇವಳೊಬ್ಬಳು ಇದ್ದರೆ ಸಾಕು ...ಇವಳ ಪ್ರೇಮವೊಂದು ಸತ್ಯ ...ಉಳಿದುದೆಲ್ಲಾ....ಸುಳ್ಳು....' ಪುನಃ ನುಡಿದ.

"ನಾನು ಮೂಕನಾಗಿ ಸುಮ್ಮನೆ ಕುಳಿತೆ. ಮಾತು ಹೊರಡದಾಗಿತ್ತು.

" ನನ್ನಿಂದ ನಿಮ್ಮ ಶಕುಂತಲ ಎಂದೂ ಪ್ರೇಮವನ್ನು ಪಡೆಯಲಾರಳು. ಹೆಂಡತಿಯಾಗಿ ನನ್ನ ಮನೆಗೆ ಬರುವ ಭಾಗ್ಯ ಅವಳಿಗಿಲ್ಲ....ನಮ್ಮ ಪ್ರೇಮ ಜೀವನಕ್ಕೆ ಸಹಾಯ ಮಾಡಿದ್ದಕ್ಕೆ ನಾನು ಅವಳಿಗೆ ಪೂರ್ಣ ಋಣಿ. ಜೋಯಿಸರು ಹೇಳಿದ ಭವಿಷ್ಯ ನಿಜವಾಗಲಿ, ಸುಳ್ಳಾಗಲಿ ...ಅಂತೂ ನನ್ನ ಮನಸ್ಸಿನ ಮೂಲದಿಂದ ಆ ಯೋಚನೆ ದೂರ ಸರಿದು....ಇಂದು ನಮ್ಮ ಜೀವನದಲ್ಲಿ ಪೂರ್ಣ ಸಂತೋಷ ತುಂಬಿದ್ದಾಳೆ....ಅದಕ್ಕೆ ನಾನು ತುಂಬಾ ಕೃತಜ್ಞ. ಇವಳು ಕೇಳಿದ ಜೀವನಾಂಶವನ್ನು ಮಾತ್ರ ನಾನು ಪ್ರತಿಫಲವಾಗಿ ಕೊಡಲು ಸಿದ್ಧ. ಇನ್ನೇನನ್ನೂ ನನ್ನಿಂದ ಆಶಿಸಬಾರದು. ಇಷ್ಟೇ ನಾನು ಹೇಳುವುದು. ಇನ್ನು ನೀವು ಇಲ್ಲಿಂದ ತೆರಳಬಹುದು." ಪುನಃ ತಿರುಗಿ ಕೂಡ ನೋಡದೆ ಎದುರಿನ ರೂಮಿಗೆ ಹೊರಟು ಹೋದ ಅಂನತನಾರಾಯಣ.

" ಹೂಂ ! ಕೊಡೋಕ್ಕೆ ಹೋಗ್ತಾರೆ ...! ಜೀವನಾಂಶ ? ಬೇಕಾದ್ರೆ ಕೋರ್ಟಿನಲ್ಲಿ ಪಡೀತಾರೆ...." ನನ್ನ ಕಡೆಗೆ ತಿರುಗೀ ನೋಡದೆ ಮಹಡಿಯನ್ನು ದಢ ದಢ ಇಳಿದು ಹೊರಟು ಹೋದಳು ನಿಮ್ಮ ಬೀಗಿತ್ತಿ."

—ಎಲ್ಲರೂ ಮೂಕರಾಗಿ ಕುಳಿತಿದ್ದರು. ನಾಲಿಗೆ ಒಣಗೆ ಹೋಗಿದ್ದವು.

ಸುಬ್ಬಣ್ಣನೆ ಪುನಃ ಮುಂದುವರಿಸಿದ.

" ನಾನು ಅವರ ಮನೆಯನ್ನು ಬಿಟ್ಟು ಹೊರಗಿನ ಗೇಟಿನ ಬಳಿಗೆ ಬರುವಷ್ಟರಲ್ಲಿ ರಾಮಕೃಷ್ಣಯ್ಯನವರು ಸಿಕ್ಕಿದರು. ನನ್ನ ಕುಶಲಪ್ರಶ್ನೆಯನ್ನು ಮಾಡಿದರು. ಇಲ್ಲಿನ ಯೋಗಕ್ಷೇಮವನ್ನು ವಿಚಾರಿಸಿದರು. ತಾವು ಮಾಡಿದ್ದು ಬಹಳ ಅನ್ಯಾಯವೆಂದೂ, ಸತ್ತರೂ ಈ ಅಧರ್ಮ ಅವರನ್ನು ಕಾಡುವುದೆಂದು ಬಹಳ ಹಲುಬಿದರು

ಎಲ್ಲಕ್ಕೂ ಮೂಲಕಾರಣ ಅವರ ಪತ್ನಿಯೇ ಎಂದು ಅವರ ಮೇಲೆ ರೇಗಿದರು. ಒಟ್ಟಿನಲ್ಲಿ ತಾಯಿ, ಮಗ ಒಂದಾಗಿರುವುದರಿಂದ ತಮ್ಮ ಸ್ವಾತಂತ್ರ ಊಟದಲ್ಲಿ ಮಾತ್ರ ಎಂದು ಹೇಳುವಾಗ ಕಣ್ಣೀರು ಸುರಿಸಿದರು. ತಾವು ಗಂಡಸಾಗಿ ಹುಟ್ಟಿ ಇವೆಲ್ಲಾ ಅನ್ಯಾಯವನ್ನು ಕಂಡೂ ಕಾಣದಂತೆ ಇರಬೇಕಾದ ಅಸಹಾಯಸ್ಥಿತಿಗೆ ಬಹುವಾಗಿ ನೊಂದುಕೊಂಡರು.

"ಹ್ಯಾಗಾದ್ರೂ ಆಗ್ಲಿ ...ನೋಡೋಣಾ ನಿಮ್ಮ ಹುಡುಗೀನ ತಂದು ಬಿಡಿ ನಮ್ಮನೇಲಿ....ಅವಳಿಗೆ ಪೂರ್ಣ ಸಹನೆ ಇದ್ರೆ ಒಂದಲ್ಲ ಒಂದು ದಿನ ಗಂಡನ್ನ ತಿರುಗಿಸಿಕೊಳ್ಳಬಹುದು. ಅವನ ಜಾತಕಫಲ ಸುಳ್ಳಾಗಿದ್ರೆ.... ಇದೂ ಆದ್ರೂ ಆಗ್ಬಹುದು ..." ಎಂದು ನನಗೆ ಹೇಳಿದರು.

"ಇಷ್ಟೇ ವಿಷಯ ಅಲ್ಲಿ ನಡೆದದ್ದು." ಸುಬ್ಬಣ್ಣ ನುಡಿದು ಸುಮ್ಮನಾದ. ಶಕುಂತಲ ಬಿಕ್ಕಿಬಿಕ್ಕಿ ಅಳುತ್ತಿದ್ದಳು.

"ನಾನೇ ನಿನ್ನ ದುಃಖಕ್ಕೆ ಕಾರಣ ಮಗು...." ಅವಳ ಕೈಯನ್ನು ತನ್ನ ಕೈಯಲ್ಲಿಟ್ಟುಕೊಂಡು ಕೆನ್ನೆಗೆ ಒತ್ತಿಕೊಂಡು ಕಣ್ಣೀರನ್ನು ಮಿಡಿದ ಸುಬ್ಬಣ್ಣ.

"ಶಾಮಾಶಾಸ್ತ್ರಿಗಳಿಗೆ ಹೀಗೇ ಆಗುತ್ತೆ ಅಂತ ಗೊತ್ತಿತ್ತು ಅಂತ ಕಾಣುತ್ತೆ. ಅದಕ್ಕೆ ಲಗ್ನಸತ್ರಿಗೆ ಬರ್ದುಕೊಡಲಿಲ್ಲ ..." ಬಹು ಹೊತ್ತು ಮೌನವಾಗಿ ಕುಳಿತಿದ್ದ ಸಾವಿತ್ರಮ್ಮ ನುಡಿಯುವಾಗ ಉಕ್ಕುತ್ತಿದ್ದ ಕಣ್ಣೀರನ್ನು ಸೆರಗಿನಿಂದ ಒರಸಿಕೊಂಡರು. ಒಂದು ಕ್ಷಣದಲ್ಲಿ ಹಿಂದಿನ ವಿಷಯವೆಲ್ಲಾ ಅವರ ಮನಃಪಟಲದ ಮುಂದೆ ಸರಿದು ಹೋಯಿತು.

"ಯಾರ್ನ್ಯಾದ್ರೂ ಕಳ್ಸಿ ಮದ್ವೆಗೆ ಬೇಕಾದ ಕುಂಡಲಿ ಗುರ್ತು ಹಾಕಿ ಕಳಿಸ್ತೀನಿ .." ಶಾಸ್ತ್ರಿಗಳು ಹೇಳಿದ್ದ ಮಾತು ನೆನಪಿಗೆ ಬಂದಾಗ ತತ್ತರಿಸಿದರು.

"ಆದ್ದು ಆಗಿಹೋಯ್ತು....ಈಗ ನನ್ನ ಮಗಳ ಗತಿ....??" ಬೃಹದಾಕಾರ ತಾಳಿ ತಾಯಿಯ ಮುಂದೆ ವಿಕೃತವಾಗಿ ನಿಂತಿತ್ತು ಈ ಪ್ರಶ್ನೆ.

"ಹೌದು ಮುಂದೇನು ಗತಿ....?!" ಸಾವಿತ್ರಮ್ಮನವರ ಮನಸ್ಸಿನಲ್ಲೂ ಇದೇ ಪ್ರಶ್ನೆ ಕೆರಳಿ ನಿಂತಿತ್ತು.

"ಶಕುಂತಲಳ ಭವಿಷ್ಯ!!" ಸುಬ್ಬಣ್ಣನ ಮನಸ್ಸು ಅಲ್ಲೋಲ ಕಲ್ಲೋಲವಾಗಿತ್ತು.

"ನಾನು ಅಲ್ಲೇ ಸಾಯ್ತೀನಿ....ನನ್ನ ಅಲ್ಲೆ ಕರೆದುಕೊಂಡು ಹೋಗಿ ಬಿಟ್ಬುಬಿಡಿ." ನಿರ್ಧರಿಸಿ ನುಡಿದಳು ಶಕುಂತಲ. ಕಣ್ಣಲ್ಲಿ ಸುರಿಯುತ್ತಿದ್ದ ನೀರನ್ನು ಒರಸಿ ಕೊಂಡಳು.

"ಸಾಯುವ ಮುನ್ನ ಗಂಡನ ಮನೆ ಸೇರಿಯಾದರೂ ಸಾಯೋಣ.... ನಾನು ಏನೇನೋ ಯೋಚಿಸಿದ್ದೆ. ಹೀಗಾಗಬಹುದೆಂದು ಕನಸಿನಲ್ಲೂ ಎಣಿಸಿರಲಿಲ್ಲ..." ಸುಬ್ಬಣ್ಣ ನುಡಿದ ಭವಿಷ್ಯದ ಮಾತು ಆಗಲೇ ಸಾಕಷ್ಟು ಅವಳ ಮನಸ್ಸನ್ನು ಛಿದ್ರಮಾಡಿತ್ತು.

"ಸುಮ್ನಿರೇ ಶಕುಂತಲಾ....!" ತಾಯಿ ಅಳಲನ್ನು ತಡೆಯಲಾರದೆ ಕೂಗಿಕೊಂಡಳು.

"ನನ್ನ ಮಗಳನ್ನು ಬಹಳ ಸುಖಿಯಾಗಿಡಬೇಕು ಅಂದುಕೊಂಡಿದ್ದೆ....! ಇಲ್ದಾಗೇ ಆಯ್ತು...." ರಾಯರು ಮೇಲೆ ನೋಡುತ್ತಿದ್ದರು. ನಾಲಿಗೆ ನುಡಿದಿತ್ತು.

ತೆರದ ಬಾಯಿಂದ ಬಿಸಿಯುಸಿರು ನುಗ್ಗಿ ಬಂತು.

"ಶಕುಂತಲ ಗಂಡನ ಮನೆಗೆ ಹೋಗಿ ಸುಖವಾಗಿರೊದನ್ನ ನೋಡಿ ಸಾಯೋಣಾ ಅಂತ ಜೀವ ಹೊತ್ತು ಬದುಕಿದ್ದೆ...." ಅಜ್ಜಿಗೆ ಬದುಕಿ ಉಳಿದು ಬಹಳ ಕೆಟ್ಟ ಕೆಲಸ ಮಾಡಿದೆನೆನಿಸಿತ್ತು.

"ನಾನು ಹುಟ್ಟಿದ್ದು ನಿಮ್ಗೆ ಸುಖಾ ಕೊಡೋಕೆ ಅಲ್ಲ ಅಜ್ಜಿ...." ಕೊರಳು ಉಬ್ಬಿ ಕಣ್ಣೀರಿನ ಮಹಾಪೂರ ಹೊರಗೆ ನುಗ್ಗಿ ಬಂದು ಮಾತು ಮುಂದುವರಿಯಲಿಲ್ಲ.

"ಇವತ್ತೇ ನನ್ನ ಕಳ್ಸಿಬಿಡಿ ಅಪ್ಪ....ನಾನು ಹೊರಟು ಹೋಗ್ತೀನಿ ....ಅವರ ಕಾಲಿಗೆ ಬಿದ್ದು ಬೇಡಿಕೊಳ್ತೀನೆ.. ನನ್ನ ಕೈ ಬಿಡಬೇಡಿ ಅಂತ. ಇರೋ ನಾಲ್ಕು ದಿನ ಅವರ ಕಣ್ಣೆದುರಿಗಾದ್ರೂ ಇದ್ದು ಕಣ್ಣು ಮುಚ್ಚಿಕೊಳ್ತೀನೆ...." ತನ್ನ ಮಾತಿನಿಂದ ಆಗಬಹುದಾದ ದುಃಖದ ಪರಿಜ್ಞಾನವಿರಲಿಲ್ಲ ಅವಳಿಗೆ.

"ನೀನು ಸತ್ಯವಾಗಿ ಮನುಷ್ಯಳಲ್ಲ....ಶಕುಂತಲ...ದೇವರ ಅಂಶ ಕಣಮ್ಮ ನೀನು...." ಮೊಮ್ಮಗಳ ಕೆನ್ನೆಯನ್ನು ಸವರಿ ಕಣ್ಣೀರನ್ನು ಒರಸಿದರು. "ಹೋಗಿಬಾ ಮಗು....ಹೋಗಿಬಾಮ್ಮ....ಮದುವೆಯಾದ ಮೇಲೆ ಗಂಡನೇ ನಿನಗೆ ಸರ್ವಸ್ವ....ಕಷ್ಟಸುಖಾ ಎಲ್ಲಾ ಜೊತೇಲೆ ಅನುಭವಿಸಬೇಕು...ಭವಿಷ್ಯ ಸುಖ್ವಾಗಿ.. ನಿನ್ನ ಗಂಡನ್ನ ನೀನು ಆಳು...ಶಕುಂತಲ...." ಸಾವಿತ್ರಮ್ಮ ಹರಸಿದರು. ಕಣ್ಣೀರನ್ನು ತಡೆದು ತಲೆಯನ್ನು ನೇವರಿಸಿದಳು.

ಮುದಿ ದೇಹದಲ್ಲಿ ಅಳಲಿನ ಆಳ ಅತಿಯಾಗಿ ದಡ ಕಳಚಿಕೊಳ್ಳಲು ಆಗಲೇ ಮೊದಲಾಗಿತ್ತು.

ಸೀತಮ್ಮನ ನಾಲಿಗೆ ನುಡಿಯದೆ ತುಟಿಗಳು ಅಲುಗಿ ಕಣನ್ನು ಮುಚ್ಚಿ

ಮಗಳನ್ನು ಆಲಿಂಗಿಸಿ ಮುದ್ದಿಟ್ಟಳು. ಭುಜಕ್ಕೆ ತಲೆಯನ್ನು ತಿಕ್ಕಿದಳು. ಕಣ್ಣೀರು ಕಟ್ಟೆ ಒಡೆದು ಹರಿದಿತ್ತು.

"ಸುಬ್ಬಣ್ಣ ಇವತ್ತೇ ಹೋಗಿ ಬಿಟ್ಟು ಬಾರಪ್ಪ. ಅವಳ ಹಣೇಲಿ ಬರ್ದಿರುವ ಹಾಗೆ ಆಗಲಿ." ಸುಡುತ್ತಿದ್ದ ಬೇಗೆಯನ್ನು ಸಹಿಸಿ ನುಡಿದರು ಅಜ್ಜಿ. ಮೊಮ್ಮಗಳ ಕಣ್ಣೀರನ್ನು ಒರಸಿ ಮುಂಗುರುಳನ್ನು ತಿದ್ದಿದರು. ಕೂಸಿನಂತೆ ಮತ್ತೆ ಮತ್ತೆ ಮುದ್ದಿಸಿದರು.

"ನಾನು ಏನೊ ಎಣಿಸಿದೆ. ಏನೊ ಆಗಿಹೋಯಿತು!" ರಾಯರು ಬಹು ಮೆಲ್ಲಗೆ ನುಡಿದರು.

"ನಾನು ಹುಟ್ಟಿ ನಿಮಗೆಲ್ಲಾ ದುಃಖ ಕೊಟ್ಟೆ...." ಮಗಳು ನುಡಿದಾಗ ತಾಯಿ ಬಾಯನ್ನು ಭದ್ರವಾಗಿ ಮುಚ್ಚಿದಳು.

"ಸಾಕು....ಸುಮ್ನಿರೇ....ತಲೆ ಎಲ್ಲಾ ಹರ್ಟಬೇಡ..." ಅಜ್ಜಿ ಅರುಚಿದರು.

ಸಂಜೆ ರೈಲುಗಾಡಿಗೆ ಶಕುಂತಲ ಸುಬ್ಬಣ್ಣನ ಜೊತೆಯಲ್ಲಿ ಗಂಡನ ಮನೆಗೆ ಹೊರಟುಬಿಟ್ಟಳು.

ಸಾವಿತ್ರಮ್ಮನವರು ಬಯಸಿದ ಭವಿಷ್ಯ ಬರಡಾಗಿ ಬಾಳು ಬರಿದಾಗಿತ್ತು.

## ೨೧

ಶಕುಂತಲ ಗಂಡನ ಮನೆಗೆ ಹೋಗಿ ಆರು ತಿಂಗಳುಗಳು ಕಳೆದು ಹೋದವು. ಆದರೆ ಸಾವಿತ್ರಮ್ಮನವರಿಗೆ ಇದೊಂದರ ಪರಿವೆಯೂ ಇಲ್ಲ. ಅಂದು ಶಕುಂತಲ ಊರಿಗೆ ಹೋದ ದಿನ ಮಲಗಿದವರು ಈಗ ಸಂಪೂರ್ಣವಾಗಿ ನಿತ್ರಾಣವಾಗಿದ್ದಾರೆ. ಕಣ್ಣಿನ ಆಲಿಗಳು ಆಡುತ್ತಿವೆ. ಹೃದಯ ಚಲಿಸುತ್ತಿದೆ. ವೆಂಕಟರಾಯರ ಮನೆಗೆ ಬಂದೊಡನೆಯೇ ನಿತ್ರಾಣವಾದ ದೇಹದಲ್ಲಿ ತುಟಿಗಳಿಗೆ ಚಲನೆ ಬರುತ್ತದೆ.

"ಏನು ವೆಂಕಣ್ಣ....ಕಾಗ್ದ ಬಂತೆ?....ಸುಖವಾಗಿದ್ದಾಳಂತೆ ನಮ್ಮ ಶಕುಂತಲ?" ನಾಲಿಗೆ ಪ್ರತಿ ದಿನವೂ ಇಷ್ಟನ್ನು ಪ್ರಶ್ನಿಸುತ್ತದೆ. ರಾಯರು ಹಳ್ಳದಲ್ಲಿನ ಕಣ್ಣಿನಿಂದ ತಾಯಿಯತ್ತ ಮೂಕರಾಗಿ ನೋಡಿ ಕೈಯನ್ನು ಅಲ್ಲಾಡಿಸಿ ಇಲ್ಲವೆಂದು ಉತ್ತರಿಸುತ್ತಾರೆ.

ಸೀತಮ್ಮ ಸಂಪೂರ್ಣ ಮೌನಿಯಾಗಿದ್ದಾಳೆ. ಮನೆಗೆಲಸವನ್ನೆಲ್ಲಾ ಒಂದೂ ತಪ್ಪದಂತೆ ಮಾಡುತ್ತಾಳೆ. ಕೆಲಸವಿಲ್ಲದೆ ಹೋದರೆ ದೇವರ ಮುಂದೆ

ಕೈ ಮುಗಿದು ಕುಳಿತುಬಿಡುತ್ತಾಳೆ. ಎಷ್ಟು ಹೊತ್ತು ಸರಿದರೂ ಅವರ ಪರಿ ವೆಯೇ ಇರುವುದಿಲ್ಲ. ಸೀತಮ್ಮ ಇಂದೂ ಅಡಿಗೆಯನ್ನು ಮಾಡುತ್ತಾಳೆ. ಒಲೆಗೆ ಸೌದೆಯನ್ನು ಇಡುತ್ತಾಳೆ. ಆದರೆ ಸೌದೆ ಉರಿಯಲೇಬೇಕೆಂಬ ನಿಯಮವೇನೂ ಇಲ್ಲ. ಅಕ್ಕಿಯನ್ನು ತೊಳೆದು ನೀರಿಗೆ ಹೊಯ್ದು ಎಷ್ಟೋ ಕಾಲದ ಮೇಲೆ ಕೆಳಗೆ ಇಳಿಸಿ ಅನ್ನವೇ ಆಗಿಲ್ಲವೆಂದು ರಾಯರು ಊಟಕ್ಕೆ ಕುಳಿತಾಗ ಅವಳಿಗೆ ಅರಿವಾಗಿದೆ. ಸಾರು, ಹುಳಿ ಇವಕ್ಕೆ ಪ್ರತಿನಿತ್ಯವೂ ಉಪ್ಪೊ, ಹುಳಿಯೊ ಏನಾದರೂ ಹೆಚ್ಚಾಗಲೇಬೇಕು. ಇಲ್ಲದಿದ್ದರೆ ಪೂರ್ಣ ಲೋಪವಾಗಿರಬೇಕು. ಏನು ಅಡಿಗೆ ಮಾಡಲಿ ಇಂದು ಅದರಲ್ಲಿ ಇದೇ ಅವ್ಯವಸ್ಥೆ....!

ಹೃದಯದಲ್ಲಿ ಶಾಂತಿಯಿಲ್ಲ ಮನಸ್ಸಿನಲ್ಲಿ ಸಂತೋಷವಿಲ್ಲ. ಉತ್ಸಾಹ ವಿಲ್ಲ.

ಸಾವಿತ್ರಮ್ಮನವರ ಮುದಿದೇಹ ಹೊರಗಡೆ ಪ್ರತಿನಿತ್ಯವೂ "ಊಟ ಮಾಡಿದೆಯಾ ಸೀತಾ?" ಎಂದು ಕೂಗುವುದರಿಂದ ಸೀತಮ್ಮ ಊಟಕ್ಕೆ ಎಲೆಯ ಮುಂದೆ ಕುಳಿತುಕೊಳ್ಳಲೇಬೇಕಾಗುತ್ತದೆ. ಅನ್ನವನ್ನು ಕಲಸಿದ ಕೈ ಎಷ್ಟು ಬಾರಿ ಬಾಯಿಯ ಬಳಿಗೆ ಬಂದದ್ದು ಪುನಃ ಎಲೆಗೆ ಹಿಂತಿರುಗಿ ಬಂದದ್ದುಂಟು. ಬಾಯಿ ಎಂಜಲನ್ನೆ ಮಾಡದೆ ಹಲವು ದಿನ ಎಲೆಯನ್ನು ಹೊರಗೆ ಎಸೆದು ಬಾಯಿ ಮುಕ್ಕಳಿಸಿ ಉಗುಳುವುದನ್ನು ರಾಯರೂ ಎಷ್ಟೋ ಬಾರಿ ನೋಡಿದ್ದಾರೆ. ಸಾವಿತ್ರಮ್ಮನಿಗೆ ಶಕ್ತಿ ಇಲ್ಲದೇಹೋದರೂ ಇದನ್ನು ಅರಿತು "ಸೀತಾ ಹೀಗೆ ಮಾಡಬಾರದು" ಎಂದು ನಿತ್ಯವೂ ಹೇಳುತ್ತಾರೆ. "ಇಲ್ಲ...ಅಮ್ಮ ನಂಗೇನು ಮೊದಲಿನ ಹಾಗೆ ಮಾಡ್ತಾ ಇದ್ದೀನಿ...." ಉತ್ತರವಾಗಿ ನುಡಿಯುತ್ತಾಳೆ ಸೀತಮ್ಮ.

"ಹಾಲು ಕುಡೀರಿ...ಅಮ್ಮ. ಸುಮ್ನೆ ಹಾಲು ನೀರು ಇಲ್ದೆ ನೀವು ಮೆತ್ತಗಾಗ್ತ ಇದ್ದೀರ....!" ಸೀತಮ್ಮ ಅತ್ತೆಯನ್ನು ಬಲವಂತ ಪಡಿಸಿದರೆ "ಆಯ್ತು ಸೀತಾ....ನನ್ನ ಕಾಲವೆಲ್ಲಾ ಮುಗ್ದು ಹೋಯ್ತು. ಸುಖಪಟ್ಟದ್ದೆಲ್ಲಾ ಆಯ್ತು. ಇನ್ನು ನನಗೆ ಉಳಿದಿರೋದೊಂದೆ....ಸ್ಮಶಾನ ಯಾತ್ರೆ....! ಅದೂ ಹತ್ತಿರ ಬರ್ತಾ ಇದೆ. ಆದ್ರೆ ನಾನೇ ಇನ್ನೂ ತಡೀತಾ ಇದ್ದೀನಿ. ಇವತ್ತಲ್ಲ ನಾಳೆ ಶಕುಂತಲಳ ಗಂಡ ಅವಳನ್ನು ಪ್ರೀತಿಸಬಹುದು....ಸುಖವಾ ರಬಹುದು ಅಂತ....ಅವಳಲ್ಲಿ ನಿಜವಾಗಿಯೂ ಆ ಗುಣ ಇದೆ ಸೀತಾ.. ನಿನ್ನ ಮಗಳು ಸಾಮಾನ್ಯೆ ಅಲ್ಲ ಸೀತಾ....ಅವಳ ಗುಣ ಭಕ್ತಿ ಕಲ್ಲನ್ನು ಕರಗಿಸಿ ನೀರು ಸುರಿಸುತ್ತೆ. ಅಂತೋದ್ರಲ್ಲಿ ಅವಳ ಗಂಡ ಕರಗಲ್ವೆ.. ? ಕರಗ್ತಾನೆ.

ನಿಜವಾಗ಼್ಲೂ...ಶಕುಂತಲ ಗಂಡನ್ನ ಒಲೀತಾಳೆ....ಸುಖವಾಗಿ ಇರ್ತಾಳೆ... ಮಗೂನೂ ಕನಕೊಂಡು ಬಂದು ಅಜ್ಜೀ ಅಂತಾ ನನ್ನ ತಬ್ಬಿಕೊಳ್ತಾಳೆ. ನೋಡ್ತಾ ಇರು. ಆವಾಗ ದಿನ ಸುಖವಾಗಿ ಸಾಯ್ತೀನಿ....ಅಲ್ಲೀವರ್ಗೆ ನಿಜ ವಾಗ಼್ಲೂ ಸಾಯೋಲ್ಲ. ನಾನು ದೇಹ ಹೊತ್ತು ಸರಳ್ತಾನೆ ಬಿದ್ದಿರ್ತೀನಿ. ಅತ್ತೇ ಅಧಿಕಾರದ ನಿನ್ನ ಮೇಲೆ ಚಲಾಯಿಸ್ತೀನೆ...." ಕಣ್ಣೀರನ್ನು ಸುರಿಸುತ್ತ ಉನ್ಮತ್ತರಂತಾಗಿ ಹೇಳುತ್ತಾರೆ.

"ಸುಮ್ಮನಿರಿ ಅಮ್ಮ. ನೀವೂ ಹೀಗಾದರೆ ನಂಗೆ ಇನ್ಯಾರು ಸಮಾ ಧಾನ ಹೇಳ್ಬೇಕು...ಅವಳ ಹಣೇಲಿ ಬರೆದಿರೊ ಹಾಗೆ ಆಗುತ್ತೆ. ಯೋಚಿ ಸಿದ್ರೇನು ಫಲ...." ಸೀತಮ್ಮನ ನಾಲಿಗೆ ಇದನ್ನು ನುಡಿದರೂ ಕಣ್ಣು ದುಃಖ ವನ್ನು ಮುಚ್ಚಿಡಲು ಅಶಕ್ತವಾಗುತ್ತಿತ್ತು. ಸೆರಗಿನಿಂದ ಮುಖವನ್ನು ಮರೆ ಮಾಡಿಕೊಂಡು ಅಡಿಗೆ ಮನೆಗೆ ಹೋಗಿ ದೇವರ ಮುಂದೆ ದೀಪ ಹಚ್ಚಿ ಸುಮ್ಮನೆ ಮೌನವಾಗಿ ಬಹು ಹೊತ್ತು ಕುಳಿತರೆ ಮನದ ಮಾಲಿನ್ಯ ದೂರ ಸರಿಯುತ್ತಿತ್ತು.

ಯಂತ್ರವತ್ತಾಗಿ ರಾಯರ ಜೀವನ ನಾಗುತ್ತಿದ್ದರೂ ಶಾಂತಿಯಿಲ್ಲದೆ ನೀರಸವಾಗಿದೆ. ಪ್ರತಿ ದಿನವೂ ಕಛೇರಿಗೆ ಹೋಗುತ್ತಾರೆ. ಹಣವನ್ನು ಎಣಿಸಿ ಎಣಿಸಿ ಕೊಡುತ್ತಾರೆ. ತೆಗೆದುಕೊಂಡು ಪೆಟ್ಟಿಗೆಗೆ ಸೇರಿಸಿ ಮುದ್ರೆ ಯನ್ನು ಒತ್ತುತ್ತಾರೆ. ಕಾಗದದಲ್ಲಿ ಲೆಕ್ಕವನ್ನು ಲೇಖನಿ ಗುರುತು ಹಾಕು ತ್ತದೆ. ಕಣ್ಣು ಇವೆಲ್ಲಕ್ಕು ಸಾಕ್ಷಿಯಾಗಿದ್ದರೂ ಮನಸ್ಸು ಒಂದರಲ್ಲೂ ನೆಟ್ಟಿ ರುವುದಿಲ್ಲ.

## ೨೨

ವೆಂಕಟರಾಯರು ಮಧ್ಯಾಹ್ನ ಊಟ ತೀರಿಸಿ ಕಛೇರಿಗೆ ಹೊರಟಿ ದ್ದರು. ಮುಗಿಲಿನಲ್ಲಿ ಕರಾಳವಾಗಿ ಕಪ್ಪು ಮೋಡ ಚಲಿಸುತ್ತಿದ್ದುದರಿಂದ ಕೊಡೆಯನ್ನು ಕೊಂಕಳಿನಲ್ಲಿ ಇರಕಿಕೊಂಡು ಹೊರಗೆ ಬಂದರು.

ಶಕುಂತಲ ಕೂಲಿಯವನ ಕೈಯಲ್ಲಿ ಟ್ರಂಕು, ಹಾಸಿಗೆಗಳನ್ನು ಹೊರಸಿ ಕೊಂಡು ಎದುರಿಗೆ ಬರುತ್ತಿದ್ದಳು. ವೆಂಕಟರಾಯರಿಗೆ ನಂಬಿಕೆ ಬರಲಿಲ್ಲ. ಕಣ್ಣುಜ್ಜಿ ನೋಡಿದರು. ಹೌದು! ಅದೇ ಶಕುಂತಲ. ಅನುಮಾನವಿಲ್ಲ..! ಆದರೆ ಬಹು ಬಡಕಲಾಗಿದ್ದಾಳೆ. ನಡಿಗೆಯಲ್ಲಿ ಮೊದಲಿದ್ದ ಒಂದು ಗಂಭೀ ರತೆ ಮಾಯವಾಗಿ ವೇಗ ಹೆಚ್ಚಿದೆ. ದೂರದಲ್ಲೆ ತಂದೆಯನ್ನು ಕಂಡು "ಅಣ್ಣಾ ...!" ಅಂದಳು. ಓಡಿ ಬಂದಳು. ನಾಲ್ಕು ಮೆಟ್ಟಿಲನ್ನು ಒಟ್ಟಿಗೆ

ಇಳಿದು ರಾಯರು "ಮಗೂ...." ಎಂದು ಕೂಗಿ ಮಗಳನ್ನು ಆಲಂಗಿಸಿ ಕೊಂಡರು. "ಬಂದ್ಯಾ ನನ್ನ ಕಂದ....! ಹ್ಯಾಗಿದ್ದೀಯೊ ಅಂತ ಉಂಡ ಅನ್ನ ಕರಗ್ತಾ ಇರಲಿಲ್ಲ....ಯೋಚ್ಸಿ... ಯೋಚ್ಸಿ ಸಾಯ್ತಾ ಇದ್ದೆ.... ಹ್ಯಾಗಾಗಿ ಹೋಗಿದ್ದೀಯೇ ಶಕುಂತಲ.. ! ಆ ಪಾಪಿ ಜನ ಅನ್ನಾನೂ ಹಾಕ್ತಾ ಇರಲಿಲ್ವೇನೆ!....ಹೋಗ್ಲಿ....ಬಾಮ್ಮ... ಒಳಕ್ಕೆ ಹೋಗೋಣಾ....?" ಅವಳ ರಟ್ಟೆಯನ್ನು ಹಿಡಿದುಕೊಂಡು ಒಳಗೆ ಕರೆದುಕೊಂಡು ಬಂದರು.

ಸಾವಿತ್ರಮ್ಮನಿಗೆ ಇದೇ ತಾನೆ ಕುಡಿಯಲು ಹಾಲು ಕೊಟ್ಟು ಎಲೆಯ ಮುಂದೆ ಕುಳಿತಿದ್ದಳು ಸೀತಮ್ಮ. ಶಕುಂತಲಳ ಶಬ್ದ ಕೇಳಿ ಹೊರಗೆ ಓಡಿ ಬಂದಳು.... "ಇದೇನೆ ಶಕುಂತಲಾ... ಬಂದೇ ಬಿಟ್ಟೆ....ಎಷ್ಟು ಬಡವಾಗಿ ಹೋಗಿದ್ದೀಯೆ....!" ತಾನು ಮಡಿ ಎಂಬುದನ್ನೂ ಸೆನೆಯದೆ ಮಗಳನ್ನು ಬಾಚಿ ತಬ್ಬಿಕೊಂಡಳು ... "ಒಂದು ಕಾಗ್ದಾನಾದ್ರೂ ಹಾಕೋಕಿಲ್ವೆನೆ....! ....ಅವರಾದ್ರೂ ಟ್ರೈನಿನ ಹತ್ರ ಬರ್‍ತಾ ಇದ್ದರು...." ಮಗಳ ಕಣ್ಣಲ್ಲಿ ಸುರಿಯು ಹತ್ತಿದ್ದ ಕಣ್ಣೀರನ್ನು ತನ್ನ ಸೆರಗಿನಿಂದ ವರಸಿದಳು.

"ಬಂದ್ಯಾ ಮಗು ...! ಬಾಮ್ಮ ಶಕುಂತಲ....ಕೂತ್ಕೊ ಬಾ. ನನ್ನ ಹತ್ರ....ನಿನ್ನ ಕಣ್ಣ ತುಂಬಾ ನೋಡ್ತೇನಿ ನೀನು ಬರೋದನ್ನ ಕಾಯ್ತಾ ಇದ್ದ ಮಗು....ನಿನ್ನೊಮ್ಮೆ ನೋಡಿ ಸಾಯೋಣಾ ಅಂತಿದ್ದೆ....ಹೋಗಿ ಬಂದ್ಯಲ್ಲ ...ಹೀಗೇ ಆಗಬಹುದು ಅಂತ ಸ್ವಲ್ಪ ಅನುಮಾನವಿದ್ರೂ ಇನ್ನೂ ಆಸೆಯಿತ್ತು....ಮಗು. ಸುಬ್ಬಣ್ಣನೂ ಅಲ್ಲೆ ನಿಂತ ಮೇಲೆ ನಿನ್ನ ಭವಿಷ್ಯ ಬದಲಾವಣೆ ಆಗಿದ್ದರೂ ಆಗಿರಬಹುದು ಅಂತಿದ್ದೆ. ನಿನ್ನ ಚಿನ್ನದಂತ ಗುಣ ...? ಗೆದ್ದರೂ ಗೆಲ್ಲಬಹುದು ಎಂತಾ ಊಹಿಸಿದ್ದೆ... ಈಗ ನಿನ್ನ ನೋಡಿ ದ್ಮೇಲೆ ನನ್ನೂಹೆ ಎಲ್ಲಾ ಸುಳ್ಳು ಅನ್ನುಸ್ತು....ಹೋಗ್ಲಿ ಊಟಕ್ಕೆ ಏಳು.... ಊಟ ಮಾಡಿ ಎಷ್ಟು ದಿನ ಆಗಿದೆಯೋ ನೀನು ...!" ಶಕುಂತಲಳ ತಲೆಯನ್ನು ನೇವರಿಸಿದರು. ಮೈದಡವಿದರು. ಕಣ್ಣೀರು ಸುರಸಿದರು.

ಸೀತಮ್ಮ ಆಗಲೇ ಮಗಳಿಗೆ ಒಂದು ಎಲೆಯನ್ನು ಹಾಕಿ ನೀರನ್ನು ಇಟ್ಟು ಸಿದ್ಧಪಡಿಸಿದ್ದಳು. ಶಕುಂತಲ ಮೌನವಾಗಿಯೇ ಎದ್ದು ಹೋಗಿ ಕೈಕಾಲು ತೊಳೆದು ಊಟಕ್ಕೆ ಕುಳಿತಳು.

ವೆಂಕಟರಾಯರು ಕಛೇರಿಗೆ ಹೋಗಲಿಲ್ಲ.

ಶಕುಂತಲ ಮಾತಿಲ್ಲದೆ ಊಟ ಮಾಡಿ ಮುಗಿಸಿ ನೀರನ್ನು ಕುಡಿದು ತೇಗಿದಳು. ನಿಸ್ತೇಜವಾಗಿದ್ದ ಬಡಕಲು ತುಟಿಗಳ ಮಧ್ಯೆ ಬರಗಾಲದ ನಗೆ ಯೊಂದು ಅರಳಿತು. "ಇಲ್ಲಿಂದ ಹೋದ ಮೇಲೆ ಪುನಃ ಇವತ್ತೇ ನಾನು

ಸರಿಯಾಗಿ ಊಟ ಮಾಡಿದ್ದು...." ಬಹು ಹೊತ್ತಿನ ನಂತರ ನುಡಿದಳು.

"ಅಲ್ಲಿ ನಿಂಗೆ ಅನ್ನವೂ ಹಾಕ್ತಾ ಇರಲಿಲ್ಲ ಅಂತ ಕಾಣುತ್ತೆ....! ಹಾಕಿದ್ರೆ ಯಾಕೆ ಹೀಗಿರ್ತಿದ್ದಿ?" ಮಗಳು ಊಟ ಮಾಡಿದ್ದ ರೀತಿಯನ್ನು ನೋಡಿ ತೀರ್ಮಾನಿಸಿ ನುಡಿದಳು.

"ಮನಸ್ಸಿಲ್ಲದ ಊಟ ಎಷ್ಟು ಉಂಡರೇನಮ್ಮ........! ಮೈಗೆ ಹತ್ತಲ್ಲ..." ಶಕುಂತಲ ಕೈತೊಳೆಯಲು ಹೊರಗೆ ಹೋಗದೆ ಅಲ್ಲೆ ಎಲೆಯ ಮುಂದೆ ಕುಳಿತು ಕೈಯನ್ನು ನೆಕ್ಕುತ್ತ ನುಡಿದಳು.

"ಹೋಗು....ಮಗು ಕೈಯನ್ನು ತೊಳೆದುಕೊಂಡು ಬಾ...." ಸುಮ್ಮನೆ ಉಂಡ ಕೈಯನ್ನೆ ನೆಕ್ಕುತ್ತ ಕುಳಿತಿದ್ದ ಮಗಳನ್ನು ನೋಡಿ ನುಡಿದಳು ತಾಯಿ.

"ಹೋದ್ರಾಯ್ತು ಹೇಳಮ್ಮ....ನಿಂದೂ ಊಟವಾಗ್ಲಿ....ಯಾಕಮ್ಮ ನೀನೂ ಬಡವಾಗಿ ಹೋಗಿದ್ದೀಯಲ್ಲಾ? ಅಣ್ಣನೂ ಬಡವಾಗಿ ಹೋಗಿದ್ದಾನೆ. ಅಜ್ಜೀನಂತೂ ನೋಡೋಕೆ ಆಗೋಲ್ಲ. ಮುಂಚೇ ವಯಸ್ಸಾದ ಶರೀರ....! ಈಗಂತೂ ಎಲುಬಿನ ಗೂಡಾಗಿ ಹೋಗಿದೆ...." ಶಕುಂತಲೆಯ ಕಣ್ಣು ಆಗಲೇ ನೀರಾಡಹತ್ತಿತ್ತು. ತನ್ನನ್ನೆ ನೆನದು ಈ ಎಲ್ಲಾ ಜೀವಗಳೂ ಸೊರಗಿ ಈ ಅವಸ್ಥೆಗೆ ಬಂದಿವೆ ಎಂಬುದು ಸಹಿಸಲಾರದ ವೇದನೆಗೆ ಕಾರಣವಾಗಿತ್ತು.

"ನೀನು ಅಳಬೇಡ ಶಕುಂತಲ....ನನ್ನ ಕರಳು ಕಿತ್ತು ಬರುತ್ತೆ....!" ಹೊರಗಿನಿಂದ ಅಜ್ಜಿ ನುಡಿದರು. "ನೀನು ಅಳೋದು ನೋಡೋಕಲ್ಲ ನಾನು ಬದುಕಿರೋದು ...ನೀನು ನಗೋದು ನೋಡೋಕೆ....ಅಂತ....ಆದರೆ....?!" ಮುಂದುವರಿಸಲಾಗದೆ ಬಿಸಿಯುಸಿರನ್ನು ಬಿಟ್ಟರು.

ರಾಯರು ಮೌನವಾಗಿ ಬಾಗಿಲಿನ ಬಳಿಯಲ್ಲಿ ಕುಳಿತಿದ್ದರು.

"ಸುಬ್ಬಣ್ಣ ಎಲ್ಲಿ ಬರಲಿಲ್ವಲ್ಲ. ನಿನ್ನ ಜೊತೇಲಿ ಹೋದೋನು ಈವರೆಗೂ ಬಂದಿಲ್ಲ...ಏನು ಅಲ್ಲೂ ಇರಲಿಲ್ವೆ....? ನಿನ್ನ ಅಲ್ಲಿ ಬಿಟ್ಟು ಸುಮ್ನೆ ಹೊರ್ಟು ಹೋದ್ನಾ! ದೇಶ ಸಂಚಾರಕ್ಕೆ....!" ಅಜ್ಜಿಯ ಮಾತಿನಲ್ಲಿ ಆಗಲೇ ಕೋಪ ಉರಿಯ ಹತ್ತಿತ್ತು.

"ಪಾಪ! ಸುಬ್ಬಣ್ಣ ಅಲ್ಲೇ ಇದ್ದ. ನಿನ್ನೆದಿನವೂ ಮನೆಯ ಹತ್ತಿರ ಬಂದಿದ್ದ. ನಾನು ಹೀಗೆ ಹೋಗ್ತೀನಿ ಅಂತ ಹೇಳಿರಲಿಲ್ಲ. ಹೇಳಿದ್ರೆ ನಿಜವಾಗ್ಲೂ ನನ್ನ ಜೊತೇಲಿ ಬರ್ತಾ ಇದ್ದ...ಪಾಪ ನನ್ನಿಂದ ಅವನ ಮನಸ್ಸಿಗೂ ಶಾಂತಿಯಿಲ್ಲ. ಅವಮಾನ ಸಹಿಸಬೇಕಾಯ್ತು...." ಹೇಳಿ ಒಣಗಿದ ಕೈಯ ಮೇಲೆ ಸ್ವಲ್ಪ ನೀರನ್ನು ಹಾಕಿಕೊಂಡಳು.

" ನನ್ನಿಂದ ನೀನು ಹಾಳಾದೆಯಲ್ಲ ಮಗು....ಅಂತ ದಿನವೂ ಅಳ್ತಾನೆ. ನನ್ನ ಹಣೇಲಿ ಬರೆದಿದ್ದಕ್ಕೆ ಅವನೇನು ಮಾಡೋಕೆ ಸಾಧ್ಯ ಹೇಳು. ಅಂತೂ ನಾನು ಹುಟ್ಟಿ ಯಾರಿಗೂ ಸುಖಕೊಡಲಿಲ್ಲ...." ಅನೇಕ ಭಾವನೆಗಳು ಒಮ್ಮೆಗೆ ಉಕ್ಕಿಬಂದುದರಿಂದ ಏನನ್ನೂ ಮುಂದುವರಿಸಲಾಗದೆ ಬಿಕ್ಕಿ ಬಿಕ್ಕಿ ಜೋರಾಗಿ ಅತ್ತುಬಿಟ್ಟಳು.

" ಅಳಬೇಡ ಸುಮ್ನಿರು....ಶಕುಂತಲಾ...." ತಂದೆ ನುಡಿದಾಗ ಅಜ್ಜಿ ಗದರಿಸಿದರು. "ಅಳಲಿ ಸುಮ್ನಿರು....ವೆಂಕಣ್ಣ....ಅತ್ತೂ ಅತ್ತೂ ಮನ ಸನ್ನು ಹಗುರಮಾಡಿಕೊಳ್ಳಿ...." ಶಕುಂತಲಳ ಕಡೆಗೆ ತಿರುಗಿ "ಅಳು.... ಶಕುಂತಲ....ಎಷ್ಟು ಬೇಕೊ ಅಷ್ಟು ಅಳಮ್ಮ....ನೀನು ಅಳಲೇ ಬೇಕು...." ನುಡಿದು ತಾವೂ ಮಲಗಿ ಕಂಬಳಿಯನ್ನು ಹೊದುಕೊಂಡು ಒಳಗೇ ಬಿಕ್ಕಳಿಸಿ ದರು. ಅಳಲಿನ ಆಳ ಅತಿಯಾಗಿತ್ತು.

" ಯಾರು ಎಷ್ಟುಬೇಕಾದರೂ ಬದಲಾಯ್ಸಬಹುದು. ನಮ್ಮತ್ತೆ ಮನೆಯವರು ಬದಲಾಯ್ಸೋ ಹಾಗಿಲ್ಲ. ಕಲ್ಲೂ ಕರಗಬಹುದು. ಅವರು ಜಿದರುವ ಹಾಗೂ....ಇಲ್ಲ...." ನುಡಿದಾಗ ಶಕುಂತಳಿಗೆ ಉದ್ವೇಗ ಹೆಚ್ಚಿ ಹತ್ತಿತ್ತು. ಕಣ್ಣೀರನ್ನು ಒರಸಿಕೊಂಡಳು.

" ಏನೂ ಹೇಳಬೇಡ ಶಕುಂತಲ. ಈಗ ಸುಮ್ನೆ ನಿನ್ನ ರೂಮಿಗೆ ಹೋಗಿ ಹಾಯಾಗಿ ಮಲಿಕ್ಕೊ ರಾತ್ರಿನೊ....ನಾಳೇನೊ ಹೇಳ್ವಿಂತಿ...." ಸೀತಮ್ಮ ನುಡಿದಳು.

" ನಿಧಾನವಾಗಿ ಹೇಳ್ವಿಂತಿ ಮಗು....ಈಗೇನು ಅವಸರಇಲ್ಲ. ನಾವೆಲ್ಲಾ ಊಹಿಸಿದ್ದೇವೆ. ನೀನು ಮನಸ್ಸಿಗೆ ಹಚ್ಚಿಕೊಳ್ಳಬೇಡ. ಸುಮ್ನೆ ರೂಮಿಗೆ ಹೋಗಿ ಇವತ್ತಾದ್ರೂ ಸುಖವಾಗಿ ಸ್ವಲ್ಪ ಹೊತ್ತು ನಿದ್ದೆಮಾಡು ಹೋಗು...." ರಾಯರೂ ನುಡಿದರು

" ನಂಗೆ ನಿದ್ದೇನೆ ಹೊರ್ಟು ಹೋಗಿದೆಯಮ್ಮ. ಇವತ್ತೇನಾದ್ರು ಬಂದ್ರೂ ಬರಬಹುದು...." ಹೇಳಿ ಎದ್ದು ಕೈ ತೊಳೆಯಲು ಹೊರಟಳು.

" ಹ್ಯಾಗಮ್ಮ ಬರುತ್ತೆ ಹೇಳು....? ಮನಸ್ಸು ಸರಿಯಾಗಿದ್ರೆ ತಾನೆ ನಿದ್ದೆ ಬರೋದು" ಹೊರಗಡೆ ಅಜ್ಜಿ ಮುಸಕಿನ ಮರೆಯಲ್ಲೆ ನುಡಿದರು.

## ೨೩

" ಶಕುಂತಲಾ " ಎಂದು ಕೂಗುತ್ತಲೇ ಪ್ರಭಾ ಮನೆಯೊಳಗೆ ಧಾವಿಸಿ ಬಂದಳು.

" ಪ್ರಭಾ....!" ಕೂಗಿದಳು ಶಕುಂತಲ.

ಇಬ್ಬರೂ ಕೈಗಳನ್ನು ಚಾಚಿ ಒಬ್ಬರನ್ನೊಬ್ಬರು ಬಿಗಿಯಾಗಿ ಅಪ್ಪಿಕೊಂಡರು. ಪ್ರಭಾ ತನ್ನ ಎರಡು ಕೈಗಳಲ್ಲೂ ಅವಳ ತಲೆಯನ್ನು ಹಿಡಿದುಕೊಂಡು ಕೂದಲು, ಕಣ್ಣು, ಮೂಗು, ಕಿವಿ, ಕೆನ್ನೆ.. ದೇಹ ಎಲ್ಲವನ್ನು ಹೊಸದಾಗಿ ಕೊಂಡ ಬೊಂಬೆಯನ್ನು ಪರೀಕ್ಷಿಸುವಂತೆ ನೋಡಿದಳು.

" ಏನು ಅವಸ್ಥೆ ಬಂತೇ ನಿನಗೆ....ಶಕುಂತಲ ...!" ತುಂಬಿದ ದುಃಖ ಕಟ್ಟೆಯೊಡೆದು ಹರಿಯಿತು.

" ಯಾವುದನ್ನು ಕೆದಕಿ ಮಾತನಾಡಬೇಡ ಪ್ರಭಾ....ಮೊದಲೆ ನೊಂದ ಜೀವ...." ಅಜ್ಜಿ ಎಚ್ಚರಿಕೆ ಕೊಟ್ಟರು.

" ನನ್ನ ಮನಸ್ಸಿನಲ್ಲಿರೊ ಈ ದುಃಖಾನ ತೋಡಿಕೊಂಡ ಹೊರತೂ ನನಗೂ ಸಮಾಧಾನವಿಲ್ಲ ಪ್ರಭಾ. ನನ್ನ ರೂಮಿಗೆ ಹೋಗೋಣಾ....ನಡಿ ...." ಕೈ ಹಿಡಿದು ಅವಳ ಕೊಠಡಿಗೆ ಕರೆದುಕೊಂಡು ಹೋದಳು. " ಹೋಗ್ಲಿ ಪ್ರಭಾ ...ನೀನು ಚೆನ್ನಾಗಿದ್ದೀಯ. ನಿನ್ನ ನೋಡಿ ನಂಗೆ ತುಂಬಾ ಸಂತೋಷವಾಯ್ತಮ್ಮ. ನಾನಂತೂ ಜೀವನದಲ್ಲಿ ಸುಖಾ ಪಡೆದು ಬಂದಿಲ್ಲ ..." ಕಣ್ಣೀರು ಸುರಿಯುಹತ್ತಿತ್ತು. " ನನ್ನಿಂದ ಇನ್ನೊಬ್ಬರಿಗೂ ಸುಖಾ ಇಲ್ಲ. ನೋಡು ಅಮ್ಮ, ಅಣ್ಣ, ಅಜ್ಜಿ ಹ್ಯಾಗಾಗಿ ಹೋಗಿದ್ದಾರೆ. ಅಲ್ಲಿ ಆ ಹಾಳು ಮನೇಲಿ ಇರೋಕ್ಕಿಂತ ಇಲ್ಲಿಯಾದ್ರೂ ಇವರನ್ನೆಲ್ಲಾ ನೋಡಿಕೊಂಡು ಇದ್ರೆ ಸ್ವಲ್ಪ ದುಃಖ ಕಡಿಮೆಯಾಗುತ್ತೋ ಏನೊ ಅಂತ ಬಂದುಬಿಟ್ಟೆ....ಪ್ರಭಾ...."

" ಆದರೆ ನಾನು ಒಂದು ಮಾತ್ನ ಹೇಳ್ತೀನೆ....ನೀನು ತಪ್ಪು ತಿಳಿದುಕೊಳ್ಳಬೇಡ. ನೀನು ದುಡುಕಿದೆ."

" ಇಲ್ಲ ಪ್ರಭಾ ...ನಾನು ದುಡುಕಿಲ್ಲ. ನನ್ನ ಸ್ಥಿತಿಯಲ್ಲಿ ಅಲ್ಲಿ ಇನ್ಯಾರಾದ್ರೂ ಇದ್ದಿದ್ರೆ ಹದಿನೈದು ದಿನ ಇರ್‍ತಿರಲಿಲ್ಲ. ನಾನು ಮನಸ್ಸನ್ನು ಕಲ್ಲು ಮಾಡಿಕೊಂಡು ಕಿವಿಯನ್ನು ಕಿವಿಡು ಮಾಡಿಕೊಂಡು ಇಷ್ಟು ದಿವಸ ಇದ್ದೆ...."

" ಹಾಗಾದರೆ ..." ತೊದಲಿದಳು ಪ್ರಭಾ.

" ಅಲ್ಲಿರುವವರಿಗೆ ಯಾರಿಗೂ ಹೃದಯವಿಲ್ಲ. ಎಲ್ಲರೂ ಪಾಷಾಣ ಹೃದಯರು, ದಯೆ, ಮಮತೆ, ಪ್ರೀತಿ, ವಾತ್ಸಲ್ಯ, ಕರ್ಮ, ಧರ್ಮ, ನೀತಿ ಒಂದೂ ಅವರು ಕೇಳದ ಅಸ್ತಿತ್ವರಹಿತ ವಸ್ತುಗಳು ಪ್ರಭಾ. ಅವರು ಕಂಡದ್ದು ಸತ್ಯ. ಮಿಕ್ಕೆಲ್ಲವೂ ಮಿಥ್ಯ. ಅವರ ಮನಸ್ಸು ಬಯಸಿದ್ದು ಧರ್ಮ. ಇದನ್ನು ಪಡೆಯಲು ಏನು ಬೇಕಾದರೂ ಮಾಡಲು ಅವರು ಸಿದ್ಧ. ಇದೇ ಅವರಿಗೆ ಕರ್ಮ. ನೀತಿ ಧರ್ಮ ಭಾವಜೀವಿಯ ವಸ್ತುಗಳಂತೆ....! ಸಹಿಸಿ

ಸಹಿಸಿ ಸಾಕಾಯಿತು ಪ್ರಭಾ ನನಗೆ ಎತ್ತಿನ ಹಾಗೆ ದುಡಿದೆ. ಅವರ ಕಾಲನ್ನು ಹಿಡಿದು ಬೇಡಿಕೊಂಡೆ. 'ನಿಮ್ಮ ದಾಸಿಯನ್ನಾಗಿ ನನ್ನ ಸ್ವೀಕರಿಸಿ. ನಿಮಗಾಗಿ ಮುಡುಪಾಗಿರುವವಳು ನಾನು. ನೀವು ಬಿಟ್ಟರೆ ನನ್ನ ಜೀವನ ವ್ಯರ್ಥ. ನನ್ನ ಪಾಲಿಗೆ ನೀವೇ ಪ್ರತ್ಯಕ್ಷ ದೇವರು. ನಿಮ್ಮ ಧರ್ಮಪತ್ನಿಯಾಗಿರುವ ಭಾಗ್ಯ ಲಭಿಸದೆ ಹೋದರೂ ನಿಮ್ಮನ್ನು ನೋಡಿಕೊಂಡು ....ನಿಮ್ಮ ಸೇವೆಯನ್ನು ಮಾಡಿಕೊಂಡಿರುತ್ತೇನೆ. ಈ ಭಿಕ್ಷೆಯನ್ನಾದರೂ ನೀಡಿ' ಎಂದು ಆತ್ಮಾಭಿಮಾನವನ್ನು ಬಿಟ್ಟು ಬೇಡಿಕೊಂಡೆ. ಸೌಭಾಗ್ಯಳನ್ನು ಯಾಚಿಸಿದೆ. 'ವಾರಿಗೆಯಲ್ಲಿ ನಾನು ನಿನ್ನ ಅಕ್ಕ. ನಿನಗಿಂತ ಮೊದಲು ಈ ಮನೆಗೆ ಮದುವೆಯಾಗಿ ಬಂದವಳು. ಧರ್ಮರೀತ್ಯಾ ಪಾಣಿಗ್ರಹಣವಾದವಳು. ಸ್ವಲ್ಪ ನನ್ನ ಮೇಲೂ ದಯೆ ಇಡು, ಸೌಭಾಗ್ಯ. ಅವರ ಪಾದಸೇವೆ ಮಾಡುವ ಭಾಗ್ಯವನ್ನು ತಪ್ಪಿಸಬೇಡ .. ಹೆಣ್ಣಾಗಿ ಹುಟ್ಟಿರುವ ನಿನಗೆ ನನ್ನ ದುಃಖ ಗೊತ್ತಾಗುವುದಿಲ್ಲವೆ?'....ಎಂದು ಅವಳನ್ನು ಬೇಡಿಕೊಳ್ಳುವ ಸ್ಥಿತಿಗೆ ಬಂದಿತ್ತು ನನ್ನ ಮನಸ್ಸು. ಉತ್ತರವಾಗಿ ವಿಕಟವಾಗಿ ನಕ್ಕಳು. ನನ್ನ ನೋಡಿ ರೂಮಿನೊಳಗೆ ಹೊರಟುಹೋದಳು. ನೀನೇ ಯೋಚಿಸು ಪ್ರಭಾ....ನಾನು ಈ ಸ್ಥಿತಿಗೆ ಬರಬೇಕಾದರೆ ನನ್ನ ಮನಸ್ಸು ಎಷ್ಟು ನೊಂದಿರಬೇಕು....." ಹೇಳಿ ನಿಟ್ಟುಸಿರನ್ನು ಬಿಟ್ಟಳು.

"ಸತ್ತು ಸುಡುಗಾಡಿಗೆ ಹೋಗೋಳಿಗೆ...ಗಂಡನ ಮನೆ ಬೇರೆ ಬೇಕು...! .." ವಿಕಟವಾಗಿ ನಕ್ಕಿದ್ದರು ಅವರ ಅತ್ತೆ. ಮುಖವನ್ನು ತಿವಿದು "ತೊಲಗಿಹೋಗೆ....ಹೊರಗೆ....ನಿಮ್ಮಪ್ಪನ ಮನೆಗೆ...." ದರದರನೆ ಕೈಯನ್ನು ಹಿಡಿದು ಹೊರಗೆ ತಳ್ಳಿದ್ದಳು. ಗಂಡ ಮಧ್ಯಾಹ್ನ ಮನೆಗೆ ಬಂದಾಗ ಅಸಹಾಯಳಾಗಿ ಅತ್ತು ನೋಡಿ ಅವರಲ್ಲಿ ಬೇಡುವ ರೀತಿಯಲ್ಲಿ ಕೈಯನ್ನು ಚಾಚಿ ಮುಂದೆ ಬಂದಾಗ ಆತ ನಕ್ಕು ಮಹಡಿ ಹತ್ತಿ ಹೊರಟುಹೋಗಿದ್ದ.

ಸಾಯಂಕಾಲ ಮನೆಗೆ ಬಂದ ಮಾವ ಕನಿಕರದಿಂದ ಆದರಿಸಿ ಊಟವನ್ನೂ ಹಾಕಿಸಿದ್ದರು. ಸಾಮಾನನ್ನು ತೆಗೆದಿರಿಸಿ ಅವಳಿಗೆ ಒಂದು ಕೊಠಡಿಯನ್ನು ಬಿಡವು ಮಾಡಿಕೊಟ್ಟಿದ್ದರು.

ಈ ನೆನಪಿನ ಜೊತೆಯಲ್ಲೆ ಸುಬ್ಬಣ್ಣನ ನೆನಪು ಬಂದೊಡನೆ ಕಂಪಿಸಿದಳು.

"ಸುಬ್ಬಣ್ಣ ಮಾವ....! ಸುಬ್ಬಣ್ಣ ಮಾವ .. !" ತತ್ತರಿಸಿದಳು.

"ಸುಬ್ಬಣ್ಣಮಾವ ನನಗೋಸ್ಕರ ಇದ್ದ ಮರ್ಯಾದೆಯನ್ನು ಕಳಕೊಂಡರು. ನನ್ನ ಜೊತೆಯಲ್ಲಿ ಬಂದಾಗ ಎಲ್ಲರ ಕಾಲಿಗೂ ಬಿದ್ದು ನನ್ನನ್ನು

ಹಾಳುಮಾಡಬೇಡವೆಂದು ಬೇಡಿಕೊಂಡರು. ಕಲ್ಲು ಮನಸ್ಸು ಕರಗುವಂತಿರಲಿಲ್ಲ...ಅತ್ತೆ! ಅಲ್ಲ ಕತ್ತೆ ಎಂದ್ರೂ ಪಾಪ ಬರೊಲ್ಲ. ಸುಬ್ಬಣ್ಣ ನನ್ನು ಕತ್ತು ಹಿಡಿದು ಹೊರಗೆ ತಳ್ಳಿಸಿದಳು. ನಾನು ನನಗಾಗುವ ಎಲ್ಲಾ ಅವಮಾನವನ್ನು ಸಹಿಸಬಲ್ಲೆಯಾಗಿದ್ದೆ. ಆದರೆ ನನಗಾಗಿ ಬಂದವರಿಗೆ ಈ ಅವಮಾನ ಪ್ರತಿಫಲವಾಗಿ ಸಿಕ್ಕುವುದು ನನಗೆ ಸಹಿಸದ ವೇದನೆಯನ್ನು ಕೊಟ್ಟಿತು. ಬಹಳ ಬಲವಂತ ಮಾಡಿ "ನೀವು ಎಲ್ಲಿಯಾದರೂ ಹೋಗಿ. ನನಗಾಗಿ ದಯವಿಟ್ಟು ನೀವು ಹೋಗಿ. ನಿಮಗಾಗುವ ಅವಮಾನ ನಾನು ಸಹಿಸಲಾರೆ. ಈ ಮನೆಗೆ ಬಂದವಳು ನಾನು. ಎಲ್ಲವನ್ನೂ ಸಹಿಸಬೇಕಾದ್ದು ನನ್ನ ಧರ್ಮ...." ಹೀಗೇ ಬಹಳ ಹೇಳಿದ ಮೇಲೆ ಮನಸ್ಸಿಲ್ಲದ ಮನಸ್ಸಿನಿಂದ ಹೊರಗೆ ಹೋದರು. ಪ್ರತಿದಿನವೂ ಬಂದು ಬಾಗಿಲಿನ ಹೊರಗೇ ನಿಂತು ನನ್ನ ಯೋಗಕ್ಷೇಮವನ್ನು ಆಳಿನ ಮೂಲಕ ವಿಚಾರಿಸಿ ಹೋಗುತ್ತಿದ್ದರು. ಮನೆಯ ಬಾಗಿಲಿಗೆ ಬರುತ್ತಿರಲಿಲ್ಲ ನನ್ನನ್ನು ನೋಡುವ ಆಸೆ ಅತಿಯಾದಾಗ ಹೊರಗೇ ಬಹಳ ಹೊತ್ತು ಸುತ್ತಾಡುತ್ತಿದ್ದು ಒಳಗೆ ಕೆಲಸ ಮಾಡುತ್ತಿದ್ದ ನನ್ನನ್ನು ನೋಡಿ ಕಣ್ಣೀರು ಮಿಡಿದು ಹೋಗುತ್ತಿದ್ದರು. ಅಲ್ಲೆ ಎಲ್ಲೊ ಪಕ್ಕದ ಹಳ್ಳಿಯಲ್ಲಿ ಸ್ನೇಹಿತರ ಮನೆಯಲ್ಲಿ ವಾಸವಾಗಿದ್ದಾರಂತೆ. ನೋಡು ಪ್ರಭಾ....ನನ್ನ ಜೀವನವನ್ನು ಬೆಳಗಲು ಯತ್ನಿಸಿದವರಿಗೆ ದೊರೆತಿದ್ದು ಈ ಪ್ರತಿ ಫಲ .." ಹೇಳಿ ಸುತ್ತಲೂ ನೋಡಿದಳು.

ಅಲ್ಲಿ ನಡೆದ ಒಂದೊಂದು ಘಟನೆಯೂ ತನ್ನ ಸ್ಮೃತಿಪಥನಲ್ಲಿ ಸುಳಿಯ ಹತ್ತಿದಾಗ ಉದ್ವಿಗ್ನಳಾದಳು. ಭಾವದ ಉದ್ವೇಗದಿಂದ ಬೆವರಿನ ಹನಿಗಳು ಮುಖದ ಮೇಲೆ ಮೂಡಿದವು.

"ದೇವರಂತೆ....ದೇವರು ...!....ಹಾಳು ದೇವರು ..! ದೇವರಿದ್ರೆ ಆ ಅನರ್ಥ ಆಗ್ತಾ ಇತ್ತೆ?....ಇಲ್ಲ ಪ್ರಭಾ. ದೇವರಿಲ್ಲ ಕಲ್ಲಾಗಿ ಕತ್ತಲಾಗಿ ಕೂತಿರೋನು ನಿಜವಾಗ್ಲೂ ದೇವರಲ್ಲ....ನಮ್ಮ ಮನಸ್ಸಿನ ಭಯವೇ ದೇವರು ....ಭಯವಿಲ್ಲದವರಿಗೆ ನಿಜವಾಗ್ಲೂ ದೇವರಿಲ್ಲ. ನೋಡು ನಮ್ಮತ್ತೆ ಮನೆಯಲ್ಲಿ ದೇವರನ್ನು ಯಾರೂ ಕನಸಿನಲ್ಲೂ ನೆನೆಯೋದಿಲ್ಲ. ಅವರಿಗೆ ಧರ್ಮ, ನೀತಿಯ ಭಯವೇ ಇಲ್ಲ. ಸುಖವಾಗಿದ್ದಾರೆ. ಸುಖದಿಂದ ಉಬ್ಬಿ ಹೋಗ್ತಾ ಇದ್ದಾರೆ. ದೇವರು ದಿಂಡರೂ ಎಲ್ಲಾ ಹೆದ್ರಿಕೊಳ್ಳೋ ನಮ್ಗೆ ಪ್ರಭಾ. ಕಲ್ಲನ್ನು ದೇವರಂತಾ ನಂಬಿದ್ದಕ್ಕೆ ನಾವು ಸುಖಾ ಅನುಭವಿಸದೆ ಸಾಯ್ತಾ ಇರೋದು. ನಂಗೆ ಇದ್ರಲ್ಲಿ ಪೂರ್ಣ ನಂಬಿಕೆ ಹೊರಟುಹೋಯ್ತು ಪ್ರಭಾ....ಧರ್ಮದಲ್ಲೂ ನಂಬಿಕೆ ಹೋಗ್ತಾ ಇದೆ. ನಾನೂ ವಸ್ತುವಾದಿ ಆಗ್ತಾ

ಇದ್ದೀನಿ....ನನ್ನಲ್ಲಿ ಆಗಿರೊ ಪರಿವರ್ತನೆ ನೆನಸ್ಕೊಂಡ್ರೇ ನಂಗೇ ಭಯ ವಾಗುತ್ತೆ .. ಇದು ಇನ್ನೆಲ್ಲಿಗೆ ತೆಗೆದುಕೊಂಡು ಹೋಗಿ ಪೂರ್ಣಾಹುತಿ ತೆಗೆದು ಕೊಳುತ್ತೋ ಅಂತ....!....ನನ್ನ ಕಣ್ಣೀರಿನ ಒರತೆ ಬತ್ತಿಹೋಗಿದೆ ಪ್ರಭಾ. ಐದಾರು ತಿಂಗಳಿಂದ ಅತ್ತಿರುವುದು ನಾನು ಇದೆ ಮೊದಲು. ಎಂದೂ ಕಣ್ಣಲ್ಲಿ ನೀರು ಬರುತ್ತಿರಲಿಲ್ಲ. ಇಂದು ಕೋಡಿ ಕಿತ್ತು ಹರಿಯುತ್ತಾ ಇದೆ. ಕಣ್ಣೀರಿನಿಂದ ಯಾವುದೂ ಸಾಧಿಸದು ಅಂತ ನಾನು ನಿದರ್ಶನದಿಂದ ತಿಳಿದಿದ್ದೇನೆ...."

"ಕಣ್ಣೀರು ಹರಿಸಿ ಮನೆ ತೊಳೆಯೊಕ್ಕೆ ಮಾಡಿದ್ದೀಯೆನೆ....' ಅಂದು ಅತ್ತೆ ಬೆನ್ನಿನ ಮೇಲೆ ಗುದ್ದಿದ್ದಳು. ಅಸ್ವಾತಂತ್ರ್ಯ, ಅನಾದರಣೆ, ತಿರಸ್ಕಾರ, ಪ್ರೇಮಶೂನ್ಯವಾದ ನೀರಸ ಬಾಳ್ವೆಯನ್ನು ನೆನದು ಯಾರಿಗೂ ಬೇಡದ ಬಾಳ್ವೆಗಾಗಿ ಮರುಗಿ ಕಣ್ಣೀರನ್ನು ಮಿಡಿಯ ಹತ್ತಿದಾಗ ಬೆನ್ನಿನ ಮೇಲೆ ಗುದ್ದಿದ್ದಳು ಅತ್ತೆ.

"ಕಣ್ಣೀರು ಪರತಂತ್ರವಾಗಿ ಅಂದು ಬಳಲಿತು.

"ಒಂದು ಕಾಲದಲ್ಲಿ ಹೆಂಗಿಸಿದ ಕಣ್ಣೀರು ಏನೂ ಮಾಡಲೂ ಶಕ್ಯವಿತ್ತು. ಹೆಣ್ಣಿನ ಕಣ್ಣೀರೆ ನಮ್ಮ ಇತಿಹಾಸದ ಜೀವಾಳ. ಆದರಿಂದಲೇ ಎಲ್ಲಾ ಘಟನೆಗಳು ನಡೆದಿರೋದು. ಇಂದು ಇದಕ್ಕೆ ಬೆಲೆಯಿಲ್ಲ. ಸಹಾನುಭೂತಿಯೂ ಇಲ್ಲ ..."

—ಶಕುಂತಲ ದೀರ್ಘವಾಗಿ ಉಸಿರನ್ನು ಬಿಟ್ಟಳು.

ಇದ್ದಕ್ಕಿದ್ದ ಹಾಗೆಯೇ ಗಹಗಹಿಸಿದಳು. ಒಂದು ನಿಮಿಷ ಏನನ್ನೋ ನೆನೆದು ನೆನೆದು ನಕ್ಕಳು.

"ಮುತ್ತೈದೆಯಾಗಿ ಸುಮಂಗಲೆಯಾಗಿ ಸಾಯೋ ಭಾಗ್ಯ ಸಾಮಾನ್ಯವಾಗಿ ಎಲ್ಲರಿಗೂ ಲಭಿಸೋಲ್ಲ. ನೀನು ಒಂದು ವಿಧದಲ್ಲಿ ಪುಣ್ಯಮಾಡಿದ್ದಿ.... ಶಕುಂತಲ...." ಅತ್ತೆ ಹಲವು ಬಾರಿ ನುಡಿದಿದ್ದರು.

"ಜೀವನದ ಸೌಖ್ಯ ಅಂದರೇನು ಎಂಬುದನ್ನೆ ಅರಿಯದ ನಾನು ಸತ್ತು ಸುಡುಗಾಡಿಗೆ ಹೋಗುವುದು ಸೌಭಾಗ್ಯವಂತೆ....!...." ಪುನಃ ನಕ್ಕಳು. ಪ್ರಭಾನ ಬೆನ್ನಿನ ಮೇಲೆ ಗುದ್ದಿ ಪುನಃ ನಕ್ಕಳು.

"ಸ್ವಲ್ಪ ಸಮಾಧಾನ ಪಟ್ಟುಕೊ ಶಕುಂತಲ....ಉನ್ಮತ್ತಳಾಗ ಬೇಡ...." ಪ್ರಭಾ ನುಡಿದಳು.

"ನನ್ನ ಜೀವನದಲ್ಲಿ ಉಳಿದಿರೋದು ಅದೊಂದೆ ಘಟ್ಟ ಪ್ರಭಾ.... ಉನ್ಮತ್ತತೆ....ಹುಚ್ಚು....!!...ಇನ್ನೂ ನಾಲ್ಕು ದಿನ ಅಲ್ಲಿದ್ದಿದ್ದರೆ ಅದು ನಿಜ ವಾಗಿಯೂ ಸಂಭವಿಸುತ್ತಿತ್ತು. ಈಗಲೂ ಕಾಲ ಕ್ರಮೇಣ ಅದು ಹಿಡಿದರೆ

ಹೆಚ್ಚೇನಲ್ಲ...” ಹೇಳಿ ಗಂಭೀರವಾಗಿ ಕುಳಿತಳು. ತೆರೆದ ಕಣ್ಣಿನಿಂದ ಪ್ರಭಾಳನ್ನು ದಿಟ್ಟಿಸಿದಳು.

“ಐಶ್ವರ್ಯವಂತರು....! ನೆಮ್ಮದಿಯಾಗಿ ಇರ್ತಾರೆ ಅಂತ ಯೋಚಿಸಿ ಮದ್ವೆ ಮಾಡಿ ಕೊಟ್ಟು .. ಮೋಸ ಹೋದೆ .” ತಂದೆ ಹೊರಗಡೆ ತಮ್ಮನ್ನೇ ಹಳಿದುಕೊಂಡರು.

“ಧನ ..! ಹಣ...!! ರೂಪಾಯಿ !!! ....ಇದೊಂದೇ ನೋಡು ಪ್ರಭಾ ಇಂದಿನ ಸತ್ಯ ದೇವರು. ಈತ ಒಲಿದರೆ ಪ್ರಪಂಚದ ಸೌಖ್ಯವೆಲ್ಲಾ ಸಿಕ್ಕಿದ ಹಾಗೆ ... ಈತ ಮುನಿದರೆ ಪ್ರಪಂಚವೆಲ್ಲಾ ಮುನಿದ ಹಾಗೆ.... ಬಾಳು ಬೇಸರ. ಜೀವನ ನೀರಸ. ಅಸೌಖ್ಯ, ಅಶಾಂತಿ ಅತೃಪ್ತಿಗಳ ಜೇನು ಗೂಡಾಗುತ್ತದೆ ಮನಸ್ಸು. ಇದು ಸಾಮಾನ್ಯ ಎಲ್ಲಾ ಜನರ ವಿಷಯವಾಗಿ ಹೇಳಬೇಕಾದರೆ. ಆದರೆ ಮುಖ್ಯವಾಗಿ ಧನದಲ್ಲೇ ಅತೃಪ್ತಿ, ಅಶಾಂತಿ, ಅಡ ಗಿದೆ. ಅಡಗಿದ್ದೂ ಐಶ್ವರ್ಯದ ಉಬ್ಬರದಲ್ಲಿ ಸುಪ್ತವಾಗಿರಬೇಕಾಗುತ್ತಯೇ ಹೊರತು ಹೊರಗೆ ತಲೆ ಎತ್ತಿ ಮೆರೆಯಲಾರದು.

“ಹಣ ಎಲ್ಲಾ ಸೌಖ್ಯವನ್ನು ಒದಗಿಸುತ್ತದೆ ಎಂಬುದು ಸುಳ್ಳುನಂಬಿಕೆ. ನೋಡು ತಮ್ಮ ಸೌಖ್ಯಕ್ಕಾಗಿ ನಮ್ಮ ಅವರು....ಅವರು ಎಂದು ಗೌರವವನ್ನು ಕೊಡುವಾಗ ನನಗೇ ನಾಚಿಕೆಯಾಗುತ್ತದೆ. ಅವರು ನಿಜವಾಗಿಯೂ ಅನರ್ಹರು. ಆದರೆ ನನ್ನ ಮನಸ್ಸು ಏಕವಚನದಲ್ಲಿ ಕರೆಯಲು ಒಪ್ಪುತ್ತಿಲ್ಲ. ನನ್ನ ಮನಸ್ಸು ಕಲ್ಲಾಗಿ, ಹೃದಯ ಕರಗಿ ಹೋಗಿದ್ದರೂ ಇನ್ನು ನನ್ನ ಬುದ್ಧಿ ಗೌರವ ಕೊಡಲು ಬಯಸುತ್ತಿದೆ. ಹೋಗಲಿ....ಅವರು ಈ ಹಣದಿಂದಲೇ ತಮ್ಮ ಸೌಖ್ಯಕ್ಕಾಗಿ ನನ್ನ ಬಾಳನ್ನು ಬರಿದುಮಾಡಿ ತಮ್ಮ ಬಾಳಿನಲ್ಲಿ ತುಂಬಿ ಕೊಂಡರು. ಅವರ ಸೌಖ್ಯಕ್ಕಾಗಿ ನಾನು ಬೇಕಾಗಿತ್ತಂತೆ. ನನ್ನನ್ನು ಅಂಗಡಿಯ ಮಾಲಿನಂತೆ ಮದುವೆಯ ಮಾರ್ಕೆಟ್ಟಿನಲ್ಲಿ ಒಡವೆ ಕೊಟ್ಟು ಕೊಂಡುಕೊಂಡರಂತೆ. ಈಗ ಬೇಡವಾದಾಗ ಬಿಸಾಡುತ್ತಿದ್ದಾರೆ. ಏಕೆ ಬಿಸಾಡುತ್ತೀರಿ ಎಂದು ಪ್ರಶ್ನಿಸಿದರೆ ಅವರ ಬಾಯಿ ಹಲ್ಲು ಕಿರಿದು ಅಣಕಿಸು ತ್ತದೆ. ನಗೂಕೂಡ ತನ್ನ ಸ್ವೈಜ ಗುಣವನ್ನು ಕಳೆದುಕೊಂಡಿದೆ. ಇದು ತೃಪ್ತಿ, ಸೌಖ್ಯದ ದ್ಯೋತಕವಲ್ಲ ಪ್ರಭಾ ಮನದ ಮಾಲಿನ್ಯವನ್ನು ಮುಚ್ಚಿ ಡುವ ಮಾಯಾ ಸಾಧನ. ಸ್ವಾರ್ಥಸಿದ್ಧಿಯ ಸಿದ್ಧೌಷದ. ಐಶ್ವರ್ಯದ ವಿಕೃತಿ ಪ್ರದರ್ಶನ !....ಏನಂತಿ ಪ್ರಭಾ....ನಾನು ಹೇಳಿದ್ದು ಸರಿತಾನೆ....” ಜೋರಾಗಿ ನಕ್ಕಳು.

" ನನ್ನ ನಗು ಏನು ತಿಳಿಸಿತು ಪ್ರಭಾ .. ?! .. ಏನನ್ನೂ ತಿಳಿಸಲಿಲ್ಲ ಅಲ್ಲವೆ....?!" ಪುನಃ ಗಹಗಹಿಸಿದಳು

ಪ್ರಭಾ ನಗಬಾರದೆಂದಿದ್ದರೂ ತುಟಿಗಳು ಬಿರಿದವು.

"ನೀನು ನಗುತ್ತಿದ್ದೀ ಪ್ರಭಾ ...ನಿನ್ನ ನಗು ಏನನ್ನು ತಿಳಿಸುತ್ತಿದೆ ?" ಪ್ರಭಾ ಗಾಬರಿಯಿಂದ ತಲೆ ಕೊಡವಿ "ಇಲ್ಲ ...ನಾನು ನಗಲಿಲ್ಲ...." ನುಡಿದಳು. ನಕ್ಕಿಲ್ಲವೆಂಬ ನಂಬಿಕೆ ಇತ್ತು. ನಕ್ಕಿದ್ದರೆ ಅದು ತನ್ನ ತಪ್ಪೆಂಬ ಅರಿವೂ ಇತ್ತು.

" ನೋಡು ... ಈಗ ನೀನು ನಿಜವಾಗಿ ನಕ್ಕೆ .. ಆದರೆ ಅದರ ಅರಿವೇ ಇಲ್ಲ ನಿನಗೆ ...ಅದಕ್ಕೇ ನಾನು ಹೇಳಿದ್ದು ನಗು ಸ್ವತಂತ್ರವಾದದ್ದು. ಭಾವ ಶೂನ್ಯವಾದ್ದು ಅಂತ...." ಪುನಃ ಹುಸಿಯಾಗಿ ನಕ್ಕಳು.

" ನಿನ್ನಲ್ಲಿ ಇಷ್ಟು ಪರಿವರ್ತನೆಯಾಗಬೇಕಾದರೆ ನಿನ್ನ ಮನಸ್ಸು ಎಷ್ಟು ನೊಂದಿರಬೇಕು....! ಅವರು ನಿಜವಾಗಿಯೂ ಮನುಷ್ಯರೆ....ಅಂತ ಅನುಮಾನ ಬರುತ್ತೆ ನನಗೆ. ನಿನ್ನ ಚಿನ್ನದಂತಾ ಗುಣ, ಅಪರಂಜಿ ಅಂತಾ ಮನಸ್ಸು ಸ್ವಲ್ಪವೂ ಅವರನ್ನು ಕರಗಿಸಲಿಲ್ವಲ್ಲಾ....!" ಪ್ರಭಾ ಆಶ್ಚರ್ಯ ಸೂಚಿಸಿದಳು.

" ಗುಣ ...! ...ಮನಸ್ಸು....!! ನಿನ್ನ ಪ್ರಶ್ನೆ ನಗುತರುತ್ತದೆ ಪ್ರಭಾ. ನಿನ್ನ ಮನಸ್ಸಿನಂತೆ ಪ್ರಪಂಚ ತಿಳಿಯಾಗಿಲ್ಲ. ನಾನೂ ಹೀಗೇ ತಿಳಿದು ಸಂಪೂರ್ಣವಾಗಿ ಮೋಸ ಹೋದೆ. ಯಾವುದೋ ಬಯಕೆಗಾಗಿ ನನ್ನ ಜೀವನವನ್ನೇ ಬರಿದುಮಾಡಿಕೊಂಡೆ. ಈಗೀಗ ನಾನು ಪ್ರಪಂಚವನ್ನು ಸರಿಯಾಗಿ ಅರ್ಥಮಾಡಿಕೊಳ್ಳುತ್ತ ಇದ್ದೇನೆ ...ಗುಣ ...! ಆದರ್ಶ .. ಇದು ತ್ರೇತಾಯುಗದ ಮಾತಾಯಿತು ಪ್ರಭಾ. ಇಂದು ಇದಕ್ಕೆ ಸ್ವಲ್ಪವೂ ಬೆಲೆ ಕೊಡುವ ಜನವಿಲ್ಲ. ನಮ್ಮ ಮಾವನವರನ್ನೇ ಉದಾಹರಣೆಗಾಗಿ ತೆಗೆದುಕೊ. ಅವರ ಸ್ವಭಾವ ಹಾಲಿನಷ್ಟು ಸ್ವಚ್ಛ. ಗುಣ ನೀನು ಹೇಳುವ ಮಾತಿನಲ್ಲಿ ಅಪರಂಜಿ....ಆದರೆ ಕೆಲಸಕ್ಕೆ ಬಾರದ್ದು. ತಮ್ಮ ಮನೆಯಲ್ಲಿ ತಾವು ಅಸ್ವಾತಂತ್ರ್ಯ ಜೀವಿಯಾಗಿ ತಮ್ಮ ಮನಸ್ಸಿನ ಶಾಂತಿಯನ್ನು ಹಾಳು ಮಾಡಿಕೊಂಡು ಹೆಂಡತಿಯ ಬಾಯಿಗೆ ಹೆದರಿ ಮುದುರಿ ಕುಳಿತಿದ್ದಾರೆ. ಮಾತನಾಡುವ ಸ್ವಾತಂತ್ರ್ಯವಿಲ್ಲ. ಯಜಮಾನರಾಗಿ, ಹಿರಿಯರಾಗಿ ತಮ್ಮ ಮನಸ್ಸಿನಂತೆ ವ್ಯವಹರಿಸುವ ಸ್ವಾತಂತ್ರ್ಯವಿಲ್ಲ. ಧೈರ್ಯವೂ ಇಲ್ಲ. ಮನಸ್ಸಿಗೆ ವ್ಯಥೆಯಾದಾಗ ಒಬ್ಬರೇ ಕುಳಿತು ಬಟ್ಟೆಯನ್ನು ಮುಸಕು ಹಾಕಿಕೊಂಡು ರಾತ್ರಿಯ ಹೊತ್ತು ಅಳುತ್ತಾರೆ. ಇದೊಂದಕ್ಕೆ ಇನ್ನೂ ಪಾರತಂತ್ರ್ಯಕ್ಕೆ

ಸಿಕ್ಕಿಲ್ಲ....ಇದೇ ಅಲ್ಲವೇ ಒಳ್ಳೆಯ ಗುಣ, ತಿಳಿಯಾದ ಮನಸ್ಸನ್ನು ಹೊಂದಿರುವ ಫಲ....!?....ನಮ್ಮತ್ತೆಯವರು ಇದಕ್ಕೆ ಸಂಪೂರ್ಣವಾಗಿ ವಿರುದ್ಧ ಮನೋಭಾವದವರು. ಸಂಪೂರ್ಣ ಸುಖಿಯಾಗಿದ್ದಾರೆ. ಮನಸ್ಸಿಗೆ ತೋಚಿದ್ದನ್ನು ನಡಸಿ ಅಟ್ಟಹಾಸದಿಂದ ನಗುತ್ತಾ ಇರುತ್ತಾರೆ....ಗುಣ....! ಮನಸ್ಸು....! ಇವು ಹ್ಯಾಗಿರಬೇಕು ನೀನೇ ಯೋಚಿಸು ಪ್ರಭಾ...." ಪ್ರಭಾಳನ್ನು ತೀಕ್ಷ್ಣವಾಗಿ ನೋಡಿದಳು.

" ಸೌಭಾಗ್ಯಳಿಗಾಗಿ ನಾನು ಏನು ಬೇಕಾದರೂ ಮಾಡಲು ಸಿದ್ಧ.... ನಿನ್ನನ್ನು ತ್ಯಜಿಸುತ್ತ ನನಗೆ ಸ್ವಲ್ಪವೂ ದುಃಖವಾಗುತ್ತಿಲ್ಲ...." ಎಂದು ಅಲ್ಲಿಗೆ ಹೋದ ಬಹುದಿನದ ಮೇಲೆ ಒಂದು ದಿನ ಅವರನ್ನು ಬೇಡಿಕೊಂಡಾಗ ನುಡಿದಿದ್ದರು.

" ಸುಖಾ....! ಸುಖಾ....! ಅವರ ಸುಖದ ಮುಂದೆ ಇನ್ನೊಬ್ಬರ ದುಃಖದ ಪರಿವೇ ಇಲ್ಲ...ಅನ್ಯಾಯದ ಭಾವನೆಯೋ ಎಂದೂ ಅವರಲ್ಲಿ ಉದಯಿಸುವುದಿಲ್ಲ.

" ನಾನು ಮಾಡಿದ್ದು ಅನ್ಯಾಯವೆಂದು ಪೂರ್ಣ ಒಪ್ಪಿಕೊಳ್ಳಲಾರೆ.... ಆಗ ನಿನ್ನನ್ನು ಮದುವೆಯಾಗುವುದು ಅಗತ್ಯವಿತ್ತು. ಒಂದು ತಾಳಿಯನ್ನು ಕಟ್ಟಿದೆ. ಜೋಯಿಸರು ಹೇಳಿದ ಭವಿಷ್ಯ ಸಂಪೂರ್ಣವಾಗಿ ನಿಜವಾಗುತ್ತದೆ ಎಂಬ ನಂಬಿಕೆಯಿಲ್ಲವಿದ್ದರೂ ಅಕಸ್ಮಾತು ಆಗುವುದಾದರೆ....ನಾನು ಪೂರ್ಣವಾಗಿ ಬರಡಾಗುತ್ತಿದ್ದೆ. ನನ್ನ–ಸೌಭಾಗ್ಯಳ ಪ್ರೇಮ ಅಷ್ಟು ಅಗಾಧವಾಗಿದೆ. ಅವಳನ್ನು ತ್ಯಜಿಸಲಾರೆ ನಿನ್ನ ಮದುವೆಯಾದುದು ನೆಪಮಾತ್ರಕ್ಕೆ.'

" ನೋಡು ಪ್ರಭಾ ಅವರಿಗೆ ಮದುವೆ ಎಂಬುದು ಮಕ್ಕಳ ಆಟದ ಸಮಾನ! ನೆಪಮಾತ್ರಕ್ಕೆ ಮದುವೆ....! ನೆಪಮಾತ್ರಕ್ಕೆ ಹೆಂಡತಿ....! ಈ ನೆಪಕ್ಕೆ ಇನ್ನೊಬ್ಬಳ ಆತ್ಮ ಬಲಿ....ಬೇಕು....! ನೆಪ ಹಿರಿದು....! ಒಬ್ಬ ಹೆಂಗಸಿನ ಜೀವನ ಕಿರಿದು....

" ಅವರು ಇನ್ನು ನುಡಿದಿದ್ದರು. ನುಡಿಯುತ್ತ ಸ್ವಲ್ಪವೂ ಅಳುಕಿರಲಿಲ್ಲ. ತಾವು ಮಾಡುತ್ತಿರುವುದು ತಪ್ಪೆಂಬ ಭಾವನೆಯೂ ಇರಲಿಲ್ಲ. ನಿನ್ನೊಡನೆ ಅಂದು ನೆಪಮಾತ್ರದ ಮದುವೆ....! ಭವಿಷ್ಯ ನಿಜರಾದರೆ ನಿನ್ನನ್ನು ಕೊಂದ ಪಾಪದ ಭಯ ಎಂದಾದರೂ ನನ್ನ ಸ್ವಲ್ಪ ಅಳುಕುವಂತೆ ಮಾಡಬಹುದು ...ಬಹುಶಃ ಮಾಡಲಾರದು. ಅದಕ್ಕೆ ಬಗ್ಗದ ಮನುಷ್ಯ ನಾನು. ಅದು ಸುಳ್ಳಾದರೆ ಆಗ ನೀನು ಪೂರ್ಣ ಸ್ವತಂತ್ರಳಿರುತ್ತಿ....ನೀನು ಏನು ಮಾಡಿದರೂ ನನಗೆ ದುಃಖವಿಲ್ಲ ...'

"ನೋಡು ಪ್ರಭಾ....ಇದು ನನ್ನ ಗಂಡ ಆಡಿದ ಮಾತು. ಸತ್ತು ಸುಣ್ಣವಾದರೆ ಅವರಿಗೆ ಸ್ವಲ್ಪವೂ ದುಃಖವಿಲ್ಲ. ಬದುಕಿ ಉಳಿದು ಏನು ಮಾಡಿದರೂ ಅದರ ಚಿಂತೆಯಿಲ್ಲ...! ನಾನು ಏನು ಮಾಡಲು ಸ್ವತಂತ್ರಳು ....!....ನಾನು ಸ್ವತಂತ್ರಳು..." ಜೋರಾಗಿ ಗಹಗಹಿಸಿದಳು. "ಇಂತಹ ಆದರ್ಶವಾದಿಗಳು ಯಾರಾದರೂ ಸಿಕ್ಕುತ್ತಾರೆಯೇ ಪ್ರಭಾ....?! ಗಂಡ ಹೆಂಡತಿಗೆ ಪೂರ್ಣ ಸ್ವಾತಂತ್ರ ಕೊಡುತ್ತಾನೆ. ಮಾನಭಂಗವಾಗಿ ಶೀಲ ಶೇಷವಾದರೆ ಆಗ ತೃಪ್ತಿಯ ನಗುವನ್ನು ಅರಳಿಸುತ್ತಾರೆ....ಇವರು....ನನ್ನ ಗಂಡ....!" ಪುನಃ ವಿಕಟವಾಗಿ ನಕ್ಕಳು.

"ನೀನು ಏನು ಮಾಡಿದರೂ ನನಗೆ ದುಃಖವಾಗೋಲ್ಲ....ಓದಿದ ಹುಡುಗಿ....ನಿನಗೆ ಹೀಗೆ ಮಾಡೆಂದು ನಾನು ಹೇಳಬೇಕಾಗಿಲ್ಲ. ಯಾರನ್ನು ಬೇಕಾದರೂ ಕೂಡಿ ಸುಖವಾಗಿರ ಬಹುದು. ಇಲ್ಲವೆಂದರೆ ಜೀವನಾಂಶ ಕೊಡುತ್ತೇನೆ. ತಿಂದು ಸುಖವಾಗಿ ನಿನ್ನ ತಂದೆಯ ಮನೆಯಲ್ಲಿರು. ಇಲ್ಲಿರ ಬೇಡ. ನನ್ನ ಸುಖ ಜೀವನಕ್ಕೆ ಮುಳ್ಳಾಗ ಬೇಡ' ....ಅವರೇ ಪುನಃ ನುಡಿದಿದ್ದರು.

"ಇದು ಗಂಡ ಹೆಂಡತಿಗೆ, ಧರ್ಮರೀತ್ಯಾ ಕೈ ಹಿಡಿದ ಪತ್ನಿಗೆ ಉಪದೇಶಿಸಿದ್ದು. ಹೆಂಡತಿಗೆ ಸೂಳೆಯಾಗೆಂದು ಗಂಡನಿಂದಲೇ ಉಪದೇಶ....!! ನೋಡು ಪ್ರಭಾ ಹ್ಯಾಗಿವೆ....? ಗಂಡ ಹೆಂಡತಿಗೆ ಸಾಕ್ಷಾತ್ ದೈವವಂತೆ....! ಪತಿಯೇ ಪರದೈವ....! ನಾನೂ ಹಾಗೆಯೇ ತಿಳಿದಿದ್ದೆ. ಏನೇನೋ ಯೋಚಿಸಿ ಬಯಸಿದ್ದೆ....? ಆದರೆ ಎಲ್ಲವೂ ಶೂನ್ಯವಾಯಿತು. ಬಯಕೆಯ ಬಳ್ಳಿ ಬಾಡಿ ಮುದುರಿತು..." ಹಿನ್ನೆಲೆಯಲ್ಲಿ ದುಃಖ ಒತ್ತರಿಸಿ ಬಂತು.

ಪ್ರಭಾ ನೀರವಳಾಗಿದ್ದಳು.

ಶಕುಂತಲ ಕಣ್ಣೀರನ್ನು ಒರಸಿಕೊಂಡು ವಿಕಟವಾಗಿ ಗಹಗಹಿಸಿದಳು. ಪ್ರಭಾಳ ಭುಜವನ್ನು ಹಿಡಿದು ಜೋರಾಗಿ ಅಲುಗಾಡಿಸಿ ಮುಖದ ಹತ್ತಿರ ಮುಖ ಇಟ್ಟು ಪುನಃ ನಕ್ಕಳು.

'ಕರೀಮಣಿಯ ಭಾಗ್ಯ ಹೆಣ್ಣಿಗೆ ಬಹು ಮುಖ್ಯ..' ಹಿಂದೆ ಅಜ್ಜಿ ನುಡಿದಿದ್ದರು.

"ಕರೀಮಣಿಯ ಭಾಗ್ಯ....!" ಹೇಳಿ ನಕ್ಕಳು. "ಹೆಣ್ಣಿನ ಭಾಗಕ್ಕೆ ಭಾಗ್ಯದ ಬೀಗ ಮುದ್ರೆ ಬಿದ್ದಿರುವಾಗ ಕರೀಮಣಿಯ... ಭಾಗ್ಯ....! ನಿರ್ಜೀವ ವಸ್ತು ಕರೀಮಣಿ....ಸಜೀವ ಹೆಣ್ಣಿಗೆ....ಭಾಗ್ಯ....!" ಹೇಳಿ ವಿಕಟವಾಗಿ ಒಂದು ಕ್ಷಣ ನಗುತ್ತಲೇ ಇದ್ದಳು.

'ತೊಲಗು ಆಚೆ ...ನಾನು ಕಟ್ಟಿರುವ ಕರೀಮಣಿ.... ತಾಳಿ ಕಿತ್ತು ಹಾಕಿದರೆ ...ಆಗ ನನಗೂ ನಿನಗೂ ಯಾವ ಸಂಬಂಧವೂ ಇಲ್ಲ....' ಕತ್ತಿನ ಮೇಲೆ ಕೈಯನ್ನು ಹಾಕಿ ತಳ್ಳಿದ ರಭಸಕ್ಕೆ ಬೆರಳಿಗೆ ಸಿಕ್ಕಿದ ಕರೀಮಣಿಯ ಧಾರ ಕಿತ್ತು ಸಾವಿರ ದಾರಿ ಹಿಡಿದಿತ್ತು. ಜೀವವೇ ಹೋದಂತೆ ಕಂಪಿಸಿ ಒಂದು ಕ್ಷಣದಲ್ಲಿ ಅದನ್ನು ಆರಿಸಿ ಯಾರಿಗೂ ಕಾಣದಂತೆ ಭಯದಿಂದ ಪುನಃ ತಾನೇ ತನ್ನ ಕೊರಡಿಯಲ್ಲಿ ಕಟ್ಟಿಕೊಂಡಿದ್ದಳು. ಎಂಟು ದಿನ ಪೂರ್ತಿ ಯಾಗಿ ಅವಳ ಕಣ್ಣಿಗೆ ನಿದ್ದೆ ಹತ್ತಿರಲಿಲ್ಲ. ಏನೋ ಆಶಂಕೆಯಿಂದ ಕಂಪಿ ಸುತ್ತಿದ್ದಳು. ಅನಂತನಾರಾಯಣನನ್ನು ಕಂಡಾಗ ತೃಪ್ತಿಯ ನಗುವೊಂದು ಬಳಲಿದ ತುಟಿಗಳ ಮಧ್ಯೆ ಹಣಕಿ ನೋಡುತ್ತಿತ್ತು.

ಇದನ್ನು ನೆನದು ಅವಳಿಗೆ ನಗುಬಂತು ಈಗ.

ಸೌಭಾಗ್ಯ ಮುಟ್ಟಾಗಿ ಹೊರಗೆ ಕುಳಿತಿದ್ದಾಗ ಸರಿಯಾದ ಸಂದರ್ಭ ಇದೇ ಎಂದು ಹೋಗಿ ಗಂಡನ ಕಾಲನ್ನು ಹಿಡಿದು ತನ್ನನ್ನು ಹೆಂಡತಿಯನ್ನಾಗಿ ಸ್ವೀಕರಿಸಬೇಕೆಂದು ಬೇಡಿಕೊಂಡಾಗ ಈ ಘಟನೆ ನಡೆದಿತ್ತು.

'ಜೀವನಾಂಶ ಕೊಡುತ್ತೇನೆ. ತಿಂದು ಸುಖವಾಗಿರು ..' ಹೆಣ್ಣಿನ ಜೀವನ ಕೇವಲ ತಿಂದು ತೇಗುವುದರಲ್ಲಿ ಕೊನೆಯಾಗುತ್ತದೆಯೆ ? ಸುಖ .. ! ಆಸೆ....ಆಕಾಂಕ್ಷೆ ಒಂದೂ ತನ್ನದೆನ್ನುವುದು ಇಲ್ಲವೆ ಹೆಣ್ಣಿಗೆ ? ಅಂದಿನಿಂದ ಇವಳನ್ನು ಈ ಪ್ರಶ್ನೆ ಕೆಣಕುತ್ತಲೆ ಇವೆ. ಪ್ರತಿಸಾರಿ ಇದನ್ನು ನೆನದಾಗಲೂ ತಾನಾಗಿ ಮೈ ಬೆವರಿತ್ತದೆ.

"ನಿನ್ನ ಕಥೆ ಕಠೋರವಾಗಿದೆ ಶಕುಂತಲಾ....?" ಪ್ರಭಾ ಪೂರ್ಣ ಅನುಕಂಪದಿಂದ ನುಡಿದಳು.

"ಇಷ್ಟನ್ನೆ ಕಠೋರವೆಂದು ಕರೆದರೆ ಮುಂದಿನದನ್ನು ಕೇಳಿ ಏನೆಂದು ಕರೆಯುತ್ತಿ ಪ್ರಭಾ ? ನಿನಗೆ ಬಹುಶಃ ಮಾತೇ ಸಿಗಲಾರದು. ಅಲ್ಲಿ ನಡೆದ ಎಲ್ಲಾ ಘಟನೆಗಳನ್ನು ವಿವರಿಸುವುದು ಸಾಧ್ಯವಿಲ್ಲ. ಹೃದಯದ ನೋವನ್ನು ಒಳಗೆ ಹುದುಗಿಟ್ಟು ಎಲ್ಲವನ್ನೂ ಸಹಿಸಿ ಸುಮ್ಮನಿದ್ದೆ. ನಾನು ಅಲ್ಲಿಗೆ ಹೋದ ಸ್ವಲ್ಪ ದಿನಗಳಲ್ಲೆ ಆ ನಮ್ಮತ್ತೆ ಇಬ್ಬರು ಕೆಲಸದವರನ್ನು ಓಡಿಸಿದಳು. ಅವರ ದರ್ಶನ ಭಾಗ್ಯವೊಂದು ಲಭಿಸಿದರೆ ಸಾಕೆಂಬ ನೀರಸ ಬಯಕೆಯೊಂದನ್ನೊತ್ತು ಸುಮ್ಮನಿದ್ದೆ. ಸೌಭಾಗ್ಯಳ ಸೀರೆ ಒಗೆಯುವುದರಿಂದ ಅವಳ .. ಅವರ ಹಾಸಿಗೆಯನ್ನು ಸಿದ್ಧಪಡಿಸುವವರೆಗೆ ಎಲ್ಲವನ್ನು ಮಾಡುತ್ತಿದ್ದೆ. ಸೌಭಾಗ್ಯ ಳನ್ನು ನಾನು ಎಂದೂ ತಿರಸ್ಕಾರ, ಅಥವ ಅಸೂಯೆಯಿಂದ ನೋಡುತ್ತಿರ ಲಿಲ್ಲ. ಅವರನ್ನು ಕಂಡಾಗ ಮನಸ್ಸಿನಲ್ಲಿ ಎಷ್ಟೇ ಸಿಟ್ಟು ದುಃಖ ತುಂಬಿದ್ದರೂ

ಬದಿಗಿರಿಸಿ ಹುಸಿ ನಗುತ್ತಿದ್ದೆ. ಒಂದು ಸಾರಿಯೂ ಇದಕ್ಕೆ ಪ್ರತಿಫಲ ದೊರೆ ತಿರಲಿಲ್ಲ. ಮೊದಲು ಮೊದಲು ಸೌಭಾಗ್ಯಳೂ ನನ್ನ ಮೇಲೆ ದ್ವೇಷತೋರಿಸು ತ್ತಿರಲಿಲ್ಲ. ತಿರಸ್ಕಾರ, ಅಧಿಕಾರ ಪ್ರದರ್ಶಿಸುವುದು ಅವಳ ಹುಟ್ಟು ಗುಣ ವಾದರೂ ಸ್ವಲ್ಪ ಕನಿಕರಿಸುತ್ತಿದ್ದಳು. ಭವಿಷ್ಯ ಸುಳ್ಳಾಗಿಸಿ ವರ್ಷ ಕಳೆದ ಮೇಲೂ ಬದುಕಿ ಉಳಿದೆ. ಸೌಭಾಗ್ಯ ಬದಲಾದಳು. ಅತ್ತೆ ಪೂರ್ಣ ಸಿಂಹಿಣಿ ಯಾದರೂ. ಅವರ ಮುಖ ದರ್ಶನದ ಭಾಗ್ಯವೂ ದೊರೆಯದಂತೆ ಎಲ್ಲಾ ಏರ್ಪಾಟೂ ಮಾಡಿದಳು ಸೌಭಾಗ್ಯ. ಸಂಪೂರ್ಣವಾಗಿ ಮಹಡಿಯ ಮೇಲೆ ಪ್ರವೇಶವಿಲ್ಲವಾಯಿತು ನನಗೆ. ಸುಮ್ಮಸುಮ್ಮನೆ ಸಿಟ್ಟಾಗುತ್ತಿದ್ದಳು. ಅತ್ತೆ ಕೂದಲು ಹಿಡಿದು ಎಳೆಯುವುದರಿಂದ ಪ್ರಾರಂಭಿಸಿ ಹೊಡೆಯುವವರೆಗೂ ಸಿದ್ಧಳಾದಳು. ಸಣ್ಣಪುಟ್ಟ ಕಳ್ಳತನಗಳನ್ನು ಹೊರಸಿದಳು. ಒಂದು ದಿನ ಸುಬ್ಬಣ್ಣಮಾವ ಹೊರಗೆ ನನ್ನ ನೋಡಲು ಬಂದು ದಾರಿಯಲ್ಲಿ ಸುತ್ತು ತ್ತಿದ್ದ. ಮನೆಯಲ್ಲಿನ ಆಭರಣವನ್ನು ಕದ್ದು ಸಾಗಿಸಲು ತಾನು ಪ್ರಯತ್ನಿಸು ತ್ತಿರುವಾಗಿ ಕೂಗಾಡಿ ನನ್ನ ಬೆನ್ನಿಗೆ ಥಳಿಸಿದಳು. ಸುಬ್ಬಣ್ಣ ಮಾವನನ್ನು ಕಳ್ಳ ದಳ್ಳಾಳಿ ಎಂದು ಹೀನಾಮಾನವಾಗಿ ಬೀದಿಯಲ್ಲಿ ನಿಂತು ಬೈದಳು.

'ಪಾಪಿ ಮುಂಡೇದು ಸಾಯ್ತಾಳೆ ಅಂತಿದ್ರೆ ಬದುಕಿ ಸಂಜೀವಿನಿ ಸೇವಿಸಿ ಮುಳ್ಳಾಗಿ ಬಿದ್ದಿದ್ದಾಳೆ.... ಕಳ್ಳಿ...." ಸೌಭಾಗ್ಯ ನನ್ನನ್ನು ಶಪಿಸಿದಳು. ಅತ್ತೆಯ ಬಾಯಿಗೆ ಎಂದೂ ಕಡಿವಾಣವೇ ಇಲ್ಲ. ಅಂದಂತೂ ಚೆನ್ನಾಗಿ ಬೈದರು. ಅಂದಿನಿಂದ ಸುಬ್ಬಣ್ಣಮಾವ ಸಂಪೂರ್ಣವಾಗಿ ಮನೆಯ ಕಡೆ ಸುಳಿಯುವುದನ್ನು ನಿಲ್ಲಿಸಿದ. ದೂರದಲ್ಲೆ ಯಾರಿಂದಲಾದರೂ ನನ್ನ ಯೋಗ ಕ್ಷೇಮವನ್ನು ವಿಚಾರಿಸಿ ಹೊಗುತ್ತಿದ್ದ. ಇನ್ನು ಬಹಳ ನಡೆಯಿತು ಪ್ರಭಾ. ಒಟ್ಟನಲ್ಲಿ ನಾನು ಎಲ್ಲರಿಗೂ ಮುಳ್ಳಾಗಿದ್ದೆ. ಮಾವನವರು ಯಾವಾಗ ಲಾದರೂ ಒಬ್ಬಳೆ ಇದ್ದಾಗ ಸ್ವಲ್ಪ ಕನಿಕರ ತೋರಿಸುತ್ತಿದ್ದರು. ಇದರ ಬಲದಮೇಲೆ ನಾನು ಅಲ್ಲಿ ಇದುವರೆವಿಗೂ ಇದ್ದೆ.... ಇಷ್ಟೇ ಆಗಿದ್ದರೆ.... ನಾನು ಕಂಡಿತ ಇಲ್ಲಿಗೆ ಬರುತ್ತಿರಲಿಲ್ಲ ಪ್ರಭಾ...." ಮಾತನ್ನು ನಿಲ್ಲಿಸಿದಳು. ದುಃಖ ಹೆಚ್ಚಾಗಿ ಕಣ್ಣು ನೀರಲ್ಲಿ ತುಂಬಿಬಂತು.

"ಇನ್ನೇನಾಯ್ತು....? ಮಗು ..." ರಾಯರು ಒಳಕ್ಕೆ ಧಾವಿಸಿದರು.

"ಇಂತಹ ಕಟು ಮನುಷ್ಯರನ್ನು ನಾನು ನೋಡೇ ಇಲ್ಲ ..." ಅಜ್ಜಿ ಹಾಸಿಯ ಮೇಲೆ ನರಳಿದರು.

"ಇನ್ನೇನು ಶಕುಂತಲ ...!" ತಾಯಿಯೂ ರೂಮಿನೊಳಗೆ ಬಂದಳು.

"ಅಮ್ಮಾ ನೀನು ಕೇಳಿದ್ರೆ ತುಂಬಾ ಗೋಳಾಡ್ತಿಯಮ್ಮ.... ನೀನು

ಹೊರಗೆ ಹೋಗಮ್ಮ. ನೀನು ಕೇಳಬಾರದ ವಿಷಯ....ನೀವೂ ಅಣ್ಣ. ನಿಮಗೆ ಹೇಳಿ ಸುಮ್ಮನೆ ದುಃಖವನ್ನು ಹೆಚ್ಚಿಸಲಾರೆ. ಇನ್ನೆಂದಾದ್ರೂ ಹೇಳ್ತೀನಿ....ದಯವಿಟ್ಟು ಹೊರಗೆ ಹೋಗಿ. ಪ್ರಭಾಳಿಗೆ ಎಲ್ಲವನ್ನೂ ಹೇಳಿ ನನ್ನ ಮನಸ್ಸನ್ನು ಹಗುರಮಾಡಿಕೊಳ್ತೀನಿ...."

"ಹೇಳೇ ಶಕುಂತಲ...ಏನು ಬೇಕಾದ್ರೂ ಹೇಳು. ನನ್ನ ಮನಸ್ಸು ಎಂದೋ ಕಲ್ಲಾಗಿಹೋಗಿದೆ. ಎಂಥಾ ದುಃಖದ ವಿಷಯ ಬೇಕಾದ್ರೂ ಕೇಳ್ತೀನೆ...ಎಲ್ಲಾ ಕೇಳಿ ಈ ಹಾಳು ಕಿವಿ ತೃಪ್ತಿಪಡಲಿ." ತಾಯಿ ನುಡಿದಳು.

ಶಕುಂತಲ ಸುತ್ತಲೂ ನೋಡಿದಳು. ಘಟನೆಯನ್ನು ವಿವರಿಸಲು ನಾಲಿಗೆ ಅಂಜುತ್ತಿತ್ತು.

'ಸೂಳೆ ಮುಂಡೆ....! ವ್ಯಭಿಚಾರಿ...' ಅತ್ತೆ ಆಡಿದ್ದ ಮಾತು ನೆನಪು ಬಂದೊಡನೆ ಶಕುಂತಲಳ ದೇಹವೆಲ್ಲಾ ನಡುಗಿತು.

ಗಂಡನ ಮನೆಯಲ್ಲೆ ಹೆಂಡತಿ ಸೂಳೆಯೇ....?! ಗಂಡನ ಎದುರಿಗೇ ಹೆಂಡತಿ ಮುಂಡೆಯೇ...?!

"ಅಯ್ಯೋ....! ಹೇಳಲಾರೆನಮ್ಮ.." ಚೀರಿದಳು. ಉಳಿದವರು ಯಾರೂ ಮಾತನಾಡುವ ಧೈರ್ಯಮಾಡಲಿಲ್ಲ. ಸ್ವಲ್ಪ ಹೊತ್ತಿನನಂತರ ಅವಳೇ ಚೇತರಿಸಿಕೊಂಡಳು.

"ನಾನು ವ್ಯಭಿಚಾರಿಯಂತಮ್ಮ....ನಾನು ಸೂಳೆಯಂತೆ....ನಮ್ಮತ್ತೆಯ ತಮ್ಮನ ಸಂಸಾರವನ್ನು ಹಾಳು ಮಾಡಲು ಪ್ರಯತ್ನಿಸಿದ್ದೆನಂತೆ... ನಾನು....!" ತಾಯಿಯನ್ನು ಬಾಚಿ ತಬ್ಬಿಕೊಂಡಳು. ಬಹಳ ಹೊತ್ತು ಇಬ್ಬರೂ ಅತ್ತರು.

ತಂದೆ ರೂಮಿನಿಂದ ಹೊರಗೆ ಹೋಗಿ ತಲೆ ತಗ್ಗಿಸಿ ಶಥಪಥ ತಿರುಗತೊಡಗಿದರು.

"ನಮ್ಮತ್ತೆಯ ತಮ್ಮ. ನಾರಾಯಣ ಅಂತ ಹೆಸರು. ಮನೆಗೆ ಬಂದು ಹೋಗುತ್ತಿದ್ದ. ನನ್ನಲ್ಲಿ ಸ್ವಲ್ಪ ಕನಿಕರ ಇಟ್ಟು ಮಾತನಾಡುತ್ತಿದ್ದ. ನಾನು ಹಿರಿಯವನೆಂಬ ಭಾವನೆಯಿಂದ ಭಕ್ತಿಯನ್ನಿಟ್ಟಿದ್ದೆ. ಆತನಿಗೂ ಮದುವೆಯಾಗಿ ಒಂದು ಮಗುವಿದೆಯಂತೆ. ಮಾವನವರ ಜೊತೆಗೆ ಇವರೊಬ್ಬರು ಒಳ್ಳೆಯ ಮನುಷ್ಯರು ಇವರ ವಂಶದಲ್ಲಿದ್ದಾರೆ ಎಂದು ಸಂತೋಷಪಟ್ಟಿದ್ದೆ. ಮುಖದ ಮಾಟದಿಂದ ಮನದ ಆಳವನ್ನು ಅಳೆಯುವುದು ಬಹಳ ಕಷ್ಟ....ನಿಜವಾಗಿಯೂ ಆತ ಅತ್ತೆಯ ತಮ್ಮನೇ ಸರಿ....! ಒಂದೇ ರಕ್ತ

ವಲ್ಲವೆ? ಮನುಷ್ಯ ಆಕಾರದ ಹುಲಿ....! ನರ ರಾಕ್ಷಸ. ನಾನು ಒಂದು ದಿನ ಬಚ್ಚಲು ಮನೆಗೆ ಕೈಕಾಲು ತೊಳೆಯಲು ಹೋದಾಗ ಅಪದ್ಧ ಮಾತ ನಾಡಿ ಹಿಡಿದು ಕೊಳ್ಳಲು ಬಂದ. ನನಗೆ ರೇಗಿತು ಕೆನ್ನೆಗೆ ಒಂದು ಬಾರಿಸಿ ಹೊರಗೆ ಬರುವಷ್ಟರಲ್ಲಿ ನಮ್ಮತ್ತೆ ಬಾಗಿಲಿಗೆ ಬಂದಳು.

"ಒಳ್ಳೆ ಸೊಸೇನ ಮನೇಲಿ ಇಟ್ಕೊಂಡಿದ್ದೀಯ ಅಕ್ಕ. ಸದ್ವಂಶಸ್ಥರು ಮನೇಗೆ ಬಂದ್ರೆ ಗೌರವ ಉಳಿಯೋ ಹಾಗೇ ಇಲ್ಲ...." ಹೇಳಿಕೊಂಡು ಅಲ್ಲಿ ನಿಲ್ಲದೆ ಮುಖ ತಗ್ಗಿಸಿ ಹೊರಗೆ ಹೋದ. ಅವನ ಮಾತು ಕೇಳಿ ನಾನು ಕಂಪಿಸಿದೆ.

"ಅತ್ತೆ ನನ್ನ ಬೈದರು. ಹೊಡೆದರು. ನಾನು ಎಷ್ಟು ನಿಜಸ್ಥಿತಿಯನ್ನು ವಿವರಿಸಿದರೂ ಅದು ಅವರಿಗೆ ನಾಟುವಂತಿರಲಿಲ್ಲ. ಮನೆಯೆಲ್ಲಾ ಕೂಗಾಡಿ ಕತ್ತು ಹಿಡಿದು ಹೊರಗೆ ತಳ್ಳಿ ಬಾಗಿಲನ್ನು ಹಾಕಿಕೊಂಡರು.

"ಎಂತಾ ಹೊಲೆರಂಡೇನೆ ನೀನು.. ಮನೆಗೆ ಸೊಸೆ ಅಂತ ಬಂದು ನನ್ನ ತಮ್ಮನ್ನ ಬಲೆಗೆ ಹಾಕಿ ಕೊಳ್ಳೋಕೆ ಪ್ರಯತ್ನಿಸಿದ್ದೆಯಲ್ಲ...! ಹಾಳು ಮುಂಡೆ...ಹಿಂದೆ ಎಷ್ಟು ಮಾಡಿದ್ಯೋ....ಇಂಥಾ ವಿದ್ಯಾನ....ಕಲಿತದ್ದು ಎಲ್ಲಿ ಹೋಗುತ್ತೆ..! ಹುಲಿಗೆ ತನ್ನ ಕಾಡಾದರೇನು ಪರರ ಕಾಡಾದರೇನು...?" ಬಾಯಿಗೆ ಬಂದಂತೆ ಕೂಗಾಡಿದರು. ನನ್ನ ಕಿವಿ ಕಿವುಡಾಗಿತ್ತು.

"ನೀನು ಇಷ್ಟು ಕೃತಘ್ನಳಾಗುತ್ತಿ ಅಂತ ತಿಳಿದಿರಲಿಲ್ಲ. ನೀನು ಸ್ವತಂತ್ರಳು ಅಂತ ಹೇಳಿದ್ದೇ ತಡ....ಸ್ವತಂತ್ರಳಾಗಿ ನಾರಾಯಣನನ್ನೆ ಸ್ವಾಹಾ ಮಾಡೋಕೆ ಪ್ರಯತ್ನಿಸಿದ್ದೆ ಪರವಾಗಿಲ್ಲ.. ನಿಂಗೆ ಇನ್ನಾಗೂ ಹೊರ ಗ್ನೋರು ಸಿಕ್ತಾ ಇರಲಿಲ್ವೆ....! ನಿನ್ನನ್ನೆ ನಾನು ನಂಬಿದ್ರೆ ಚೆನ್ನಾಗಿ ಸುಖ ಪಡ್ತಾ ಇದ್ದೆ. ತೊಲಗಿ ಹೋಗು ಹೊರಗೆ....ಪ್ರಪಂಚ ವಿಶಾಲವಾಗಿದೆ ನಮ್ಮನೆ ಅಷ್ಟೆ ಅಲ್ಲ ಪ್ರಪಂಚ....!" ಕೂಗಿ ನನ್ನ ಅವರು....ಕೈಹಿಡಿದವರು ಹೊರಗೆ ತಳ್ಳಿದರು. ಯಾರದು ತಪ್ಪೆಂದು ವಿಚಾರಿಸಲಿಲ್ಲ. ಅವರಿಗೆ ಅದು ಪ್ರಕೃತವೂ ಇರಲಿಲ್ಲ... ನಾನು ಹೊರೆಯಾಗಿದ್ದೆ.

"ನೀನು ಇಂಥಾ ಹೆಂಗ್ಸು ಅಂತ ನಾನು ಕನಸ್ನಲ್ಲೂ ತಿಳಿದಿರಲಿಲ್ಲ." ನಮ್ಮ ಮಾವನವರು ಕಣ್ಣೀರು ತುಂಬಿ ನುಡಿದಾಗ ನನ್ನ ದುಃಖ ತಡೆಯ ಲಾಗಲಿಲ್ಲ.

"ನೀವೂ....ನಂಬ್ತೀರಾ ...?!...." ನಾನು ದೈನ್ಯದಿಂದ ಅವರತ್ತ ನೋಡಿದಾಗ ನಮ್ಮತ್ತೆ ಅರುಚಿದರು 'ಹೋಗೇ ...ಜಾರಿಣಿ ...!' ನಾನು ಪುನಃ ಹಿಂದೆ ತಿರುಗಿ ನೋಡಲಿಲ್ಲ. ಸುಮ್ಮನೆ ಹೊರಟುಬಂದೆ.

"ಇಂಥಾ ವಿದ್ಯೆಮೋಳೇ...ಅಂತ ನಾನು ಅಂದೇ ಯೋಚಿಸಿದ್ದೆ...." ಸೌಭಾಗ್ಯ ಹಿಂದೆ ನುಡಿದಳು. ನಾನು ಸಿಟ್ಟಿನಿಂದ ಹಿಂದೆ ತಿರುಗಿ ನೋಡಿದೆ.

"ಸಿಟ್ಟು ಬೇರೆ ಕೇಡು ಇವಳ್ಗೆ... ವ್ಯಭಿಚಾರ ಮಾಡೋಳ್ಗೆ...." ಹಿಂದೆ ಯಾರೊ ನುಡಿದರು. ನನಗೆ ಹಿಂದೆ ತಿರುಗಿ ನೋಡುವ ಧೈರ್ಯವಿರಲಿಲ್ಲ.

"ಎಲ್ಲರೂ ಗಹಗಹಿಸಿದರು. ನಾನು ಬಹುದೂರ ಬರುವವರೆಗೂ ಈ ಕ್ರೂರ ನಗು ನನ್ನ ಬೆನ್ನಟ್ಟಿತ್ತು."

—ಹೇಳಿ ಸ್ತಬ್ಧಳಾದಳು ಶಕುಂತಲ.

"ಅಯ್ಯೋ! ಶಕುಂತಲ...! ಅದ್ಯಾವ ಬಾಯಿ ನುಡೀತೆ ನಿನ್ನ.... ಹಾಗೆ....?!....ನಿನ್ನ ಹೆಸರ್ಹೇಳಿದೋರ್ಗೂ ಅಂತ ವಿದ್ಯೆ ಬರೋಲ್ವಲ್ಲೆ....!" ಅಜ್ಜಿಗೆ ಕೆಮ್ಮು ಒತ್ತರಿಸಿ ಬಂತು. ಬಹು ಹೊತ್ತಿನ ನಂತರ ಸುಧಾರಿಸಿ ಕೊಂಡು ಹಾಸಿಗೆ ಮೇಲೆ ಎದ್ದಿದ್ದವರು ಪುನಃ ನಿಶ್ಚೇಷ್ಟಿತರಾಗಿ ಬಿದ್ದು ಬಿಟ್ಟರು. ದುಃಖ ಅಸವಳವಾಗಿ ಮಾತು ಹೊರಡದಾಗಿತ್ತು.

ತಾಯಿ ಬಹು ಹೊತ್ತು ಮೂಕರಾಗಿ ಕುಳಿತು ಮಗಳನ್ನು ತಬ್ಬಿ ಕೊಂಡು ಅತ್ತಳು. ಪ್ರಭಾ ರಾತ್ರಿಯವರೆವಿಗೂ ಅವಳ ಬಳಿಯಲ್ಲಿ ಕುಳಿತು ಸಮಾಧಾನ ಮಾಡಿದಳು. "ಅನ್ನುವ ಬಾಯಿಗೇನು ಶಕುಂತಲ. ಏನನ್ನು ಬೇಕಾದರೂ ನುಡಿಯಬಹುದು. ಎಲುಬಿಲ್ಲದ ನಾಲಿಗೆ....! ಮನಸ್ಸು ಬಂದ ಹಾಗೆ ಮಾತು...! ಇದನ್ನು ಮನಸ್ಸಿಗೆ ಹಚ್ಚಿಕೊಳ್ಳಬಾರ್ದು. ಹಿಂದೆ ಆದ್ದನೆಲ್ಲಾ ಮರತುಬಿಡು. ಮದ್ವೇನೇ ಆಗಿಲ್ಲ ಅಂತ ಸುಮ್ನೆ ಇದ್ದುಬಿಡು...." ಪ್ರಭಾ ಸುಲಭವಾಗಿ ಹೇಳಿದರೂ ಮರೆಯುವುದು ಅಷ್ಟು ಸುಲಭವಾಗಿರಲಿಲ್ಲ.

ಬಹು ಹೊತ್ತಿನ ನಂತರ ಪ್ರಭಾ ಮನೆಗೆ ಹೋದಳು.

ಶಕುಂತಲ ತಲೆ ತಗ್ಗಿಸಿ ಕುಳಿತುಬಿಟ್ಟಳು. ನೆಲದ ಮೇಲೆ ಬಿದ್ದ ಕಣ್ಣೀರಿನಲ್ಲಿ ಬೆರಳು ಚಿತ್ರ ಬರೆಯುತ್ತಿತ್ತು.

ಪ್ರಖರ ಮಧ್ಯಾನ್ಹ ಸಂಜೆಯ ಹೊಬಿಸಿಲಾಗಿ ರಾತ್ರಿಯ ಅಂಧಕಾರ ವಾದರೂ ಅವಳು ಅಲ್ಲಿಯೇ ಕುಳಿತಿದ್ದಳು.

## ೨೪

ಹಿಂದಿನ ದಿನ ದೇವರಿಲ್ಲವೆಂದು ಸಾರಿ ಹೇಳಿದ ಶಕುಂತಲ ಇಂದು ತಾಯಿ "ಮಡಿ ಉಟ್ಟು ತುಳಸಿಪೂಜೆ ಮಾಡ್ಹೋಗೆ" ಎಂದು ಹೇಳಿದ ಮೇಲೆ ಮಾತಿಲ್ಲದೆ ಮಡಿ ಉಟ್ಟು ತುಳಸಿ ಪೂಜೆಗೆ ಹಿತ್ತಲಿಗೆ ಹೋದಳು. ಸಾಮಾನ್ಯವಾಗಿ ಮನೆಯ ಮುಂದೆ ತುಳಸೀ ಗಿಡ ಇರುವುದು ವಾಡಿಕೆ

ಯಾದರೂ ಮನೆಯ ಮುಂದೆ ಬಯಲಿಲ್ಲದೆ ಬೀದಿಯ ಬಳಿಯಲ್ಲೆ ಬಾಗಿಲಿದ್ದುದರಿಂದ ಹಿತ್ತಲಿನಲ್ಲೆ ತುಳಸಿಯ ಕಟ್ಟೆಯಿತ್ತು. ಶಕುಂತಲ ತುಳಸಿಯ ಕಟ್ಟೆಗೆ ನೀರನ್ನು ಹಾಕಿ ಅರಿಶಿನ, ಕುಂಕುಮವನ್ನು ಪೂಜಿಸಿ ಹೂವನ್ನು ಸಿಕ್ಕಿಸಿದಳು. ಹಾಡನ್ನು ಒಳಗೇ ಗೊಣಗುತ್ತ ಮೂರು ಸುತ್ತು ಬಂದು ಸಾಷ್ಟಾಂಗ ನಮಸ್ಕಾರ ಮಾಡಿದಳು. ಎದ್ದು ನಿಂತು ಒಂದು ಕ್ಷಣ ಧ್ಯಾನಾಸಕ್ತಳಾದಳು.

"ಇದೇನೇ ಶಕುಂತಲ... ತುಳಸೀನ ಅಷ್ಟೊಂದು ಪ್ರಾರ್ಥಿಸುತ್ತಾ ಇದ್ದೀಯಾ....ಒಳ್ಳೇ ಸಾಹುಕಾರ ಗಂಡ ಸಿಕ್ಕಿದ್ದಾನೆ....ಇನ್ನೇನು ಬೇಕೇ ನಿನಗೆ...? ಆಗ್ಲೇ ಗಂಡುಮಗು ಬೇಕು ಅಂತ ಪ್ರಾರ್ಥಿಸುತ್ತಾ ಇದ್ದೀಯೇನೆ ?" ಪಕ್ಕದ ಮನೆಯ ಹಿತ್ತಲಿನಲ್ಲಿ ಕಾಂಪೌಂಡು ಗೋಡೆಯ ಅತ್ತ ನಿಂತು ಪ್ರಶ್ನಿಸಿದಳು ಲಲಿತ.

ಶಕುಂತಲ ಹಿಂದೆ ತಿರುಗಿ ನೋಡಿದಳು. ಲಲಿತ ನಗುತ್ತ ನಿಂತಿದ್ದಳು.

"ಓಹೊಹೊ...! ಲಲಿತಾನ....! ಗುರ್ತು ಸಿಕ್ಕದ ಹಾಗೆ ಆಗೋಗಿದ್ದೀಯಲ್ಲೆ ...ಟೊಮೋಟೊ ಊದಿದ ಹಾಗೆ ಒಳ್ಳೆ ಕೆಂಪಗೆ ಊದಿಕೊಂಡು ಚೆನ್ನಾಗಿದ್ದೀಯೇ ಲಲಿತ... ನಿನ್ನ ನೋಡಿ ನಂಗೆ ತುಂಬಾ ಸಂತೋಷವಾಯ್ತಮ್ಮ. ನಿನ್ನ ಯೋಚ್ನೆ ಎಲ್ಲಾ ಬಗೆಹರೀತು. ಅದಕ್ಕೇ ನೀನು ದಪ್ಪಗಾದ್ದು...." ಹೇಳಿ ನಕ್ಕಳು ಶಕುಂತಲ.

"ನೀನ್ಯಾಕೆ ಸ್ವಲ್ಪ ಇಳಿದುಹೋಗಿದ್ದೀಯಲ್ಲ. ಮುಖಾ ಎಲ್ಲಾ ಬಿಳಚಿಕೊಂಡು ಹೋಗಿದೆ. ಏನು ಎರಡು ಮೂರು ತಿಂಗಳು ಅಂತ ಕಾಣುತ್ತೆ...." ಶಕುಂತಲೆಯ ಸಮಸ್ತ ವಿಷಯವೂ ಗೊತ್ತಿದ್ದರೂ ಬೇಕೆಂದೇ ಪ್ರಶ್ನಿಸಿದಳು. "ನಿನ್ನ ಗಂಡನೂ ಬಂದಿದ್ದಾರಾ ?" ಪುನಃ ಮುಂದುವರಿಸಿದಳು.

ಶಕುಂತಲೆಯ ಮುಖದಲ್ಲಿ ಅರಳಿದ್ದ ನಗೆಮಲ್ಲಿಗೆ ಒಮ್ಮೆಗೇ ಬಾಡಿ ತೊಟ್ಟು ಕಳಚಿ ಬಿದ್ದುಹೋಯಿತು.

"ಇಲ್ಲಮ್ಮ....ಅವರು ಬಂದಿಲ್ಲ...." ಗುಹೆ ಇಂದ ಶಬ್ಧ ಬಂದಂತೆ ಬಹು ಭಾರವಾಗಿ ಮಾತು ಬಂತು. ಎತ್ತಿದ್ದ ತಲೆಯನ್ನು ತಗ್ಗಿಸಿ ಅರಿಶಿನ ಕುಂಕುಮದ ತಟ್ಟೆಯನ್ನು ಕೈಗೆತ್ತಿಕೊಂಡಳು. "ಶೀನಿ ಬಂದಿದ್ನೆ....? ಲಲಿತ .. ಅವನೂ ಚೆನ್ನಾಗಿದ್ದಾನಾ ?....ನಿಮ್ಮ ಮದುವೆ ಯಾವಾಗ ?" ಪ್ರಶ್ನಿಸಿದಳು.

" ನನ್ನ ಮದ್ವೆ ಆಗಿಹೋಯ್ತು...."

" ನನ್ನ ಕರೀಲೇ ಇಲ್ವಲ್ಲೆ .. ಲಲಿತ. ಒಂದು ಲಗ್ನಪತ್ರಿಕೆ ಹಾಕಿದ್ರೆ ನಾನು ನಿಜವಾಗ್ಲೂ ಬರ್ತಾ ಇದ್ದೆ....ನಾನು ಆಗ ಬೇಕಾಗಿತ್ತು....ಈಗ ಯಾಕೆ ಹೇಳು ...!" ಮುಖದಲ್ಲಿ ನಗುವನ್ನು ಬಲವಂತದಿಂದ ತಂದು ಕೊಂಡಳು.

" ನುಡಿಯಮ್ಮ ...ಏನೇನು ಬಾಯಿಗೆ ಬರುತ್ತೋ ಅದೆಲ್ಲಾ ನುಡಿ ಯಮ್ಮ , ನಿಂಗೂ ಇದು ಕಾಲ, ಏನ್ಹೇಳಿದ್ರೂ ಆಗುತ್ತೆ. ನಾವು ಏನಾದ್ರೂ ಹೇಳಿದ್ರೆ ತಾನೆ....ಅದು ಕೆಟ್ಟದ್ದಾಗಿ ಕಾಣೋದು ! ಮಂತ್ರ ಹಾಕಿ ಶೀನೀನ ಕುಣಿಸ್ತಾ ಇರು ? ನನ್ನ ಅಣಕಿಸು ಮದ್ವೆ ಆಯ್ತಾ ಅಂತ....!" ಸಿಟ್ಟಾಗಿ ನುಡಿದಳು ಲಲಿತ.

ಶಕುಂತಲಳಿಗೆ ನಿಜವಾಗಿಯೂ ಲಲಿತಳ ವಿಷಯ ಗೊತ್ತಿರಲಿಲ್ಲ.

" ನಂಗೆ ನಿಜವಾಗ಼್್ಲೂ ಏನೂ ಗೊತ್ತಿಲ್ಲ....ಲಲಿತ. ನನ್ನ ಮಾತ್ನಿಂದ ನಿನಗೆ ದುಃಖವಾಗಿದ್ರೆ ಕ್ಷಮಿಸು ...ಯಾಕೆ ಶೀನಿ ನಿನ್ನ ಮದ್ವೆ ಆಗ್ಲಿಲ್ವೆ....?"

" ನಿನ್ನ ರೂಪ ಅವನ್ನ ಕುಣಿಸ್ತಾ ಇರಬೇಕಾದ್ರೆ ನನ್ನಂತಾ ಗೂಬೇನ ಮದ್ವೆ ಆಗ್ತಾನಾ ...ನಾನೂ ಸ್ವಲ್ಪ ದಿನ ಕಾದೆ. ಕೊನೆಗೆ ಆಗೋಲ್ಲ ಅಂತ ಖಂಡಿತವಾಗಿ ಹೇಳಿಬಿಟ್ಟ. ನಮ್ಮ ತಂದೆ ಬೇರೆ ಮದ್ವೆ ಮಾಡಿದರು. ನಾನು ಈಗ ಸುಖವಾಗಿದೀನಿ ಅನ್ನು. ಶೀನೀನೆ ಆಗಿದ್ರೆ ಈ ಸುಖಾ ಎಲ್ಲಾ ಲಭಿಸ್ತಾ ಇರಲಿಲ್ಲ. ನೋಡು ನಾಲ್ಕು ಎಳೆ ಸರ, ಎರಡು ಜೊತೆ ಚಿನ್ನದ ಬಳೆ, ಮುತ್ತಿನ ಓಲೆ, ವಜ್ರದ ಮೂಗುತಿ, ಬಿಳಿಯ ಹರಳಿನ ಶಾವಂತಿಗೆ ಹೂ, ಎಂಟು ದೊಡ್ಡ ದೊಡ್ಡ ಸೀರೆಗಳು ಎಲ್ಲಾ ಇಟ್ಟಿದ್ದಾರೆ....ದೊಡ್ಡ ಬಂಗಲೆ ಇದೆ. ಓಡಾಡಲು ಕಾರಿವೆ." ಹೇಳಿ ನಕ್ಕಳು. " ನಮ್ಮನೆಯೋರಿಗೆ ನಿಮ್ಮ ಯಜಮಾನರೇ ಲಾಯರಂತೆ ...!" ನನ್ನ ಗಂಡ ಹಣ ಕೊಟ್ಟರೆ ನಿಮ್ಮ ಯಜ ಮಾನರಿಗೆ ಉಂಟು ಇಲ್ಲದಿದ್ದರೆ ಇಲ್ಲವೆನ್ನುವ ಅಣಕವಿತ್ತು ಮಾತಿನಲ್ಲಿ.

' ನೀನು ನನಗಾಗಿ ಶೀನಿಯನ್ನು ದಾನಮಾಡಬೇಕು ಶಕುಂತಲ. ನಿನ್ನ ವ್ಯಾಮೋಹ ಅವನಿಗೆ ಅತಿಯಾಗಿದೆ. ನಾನು ಅವನನ್ನು ಮದುವೆಯಾಗದೆ ಉಳಿಯಲಾರೆ. ನೀನು ಬೇಡವೆಂದು ನನಗಾಗಿ ದಾನ ಮಾಡಿ ಪುಣ್ಯ ಕಟ್ಟಿಕೊ—ಶಕುಂತಲ' ....ಸೆರಗೊಡ್ಡಿ ಬೇಡಿಕೊಂಡಿದ್ದಳು ಅತ್ತು ಅತ್ತು ಕಣ್ಣೀರಿನ ಕೋಡಿಯನ್ನೇ ಹರಿಸಿದ್ದಳು. ' ಶೀನಿಯನ್ನು ಒಲಿಸಿಕೊಳ್ಳ ಲಾರದ ಹೇಡಿ ಎಂದು ಹೀಯಾಳಿಸುತ್ತಾರೆ ನಮ್ಮ ತಂದೆ....ಶಕುಂತಲ....ನಿನ್ನ ದಾನವೇ ನನ್ನ ಬಾಳ್ವೆ ಬೆಳಗಬೇಕು....' ದೀನಳಾಗಿ ಅಂದು ಬೇಡಿ ಪಡೆದಿ

ದ್ದಳು. ಇಂದು ಅವಳ ಮಾತಿನ ಸರಣಿಯನ್ನು ಕಂಡು ಶಕುಂತಲಳಿಗೆ ಆಶ್ಚರ್ಯವಾಯಿತು. ಆದರೆ ಅದನ್ನು ವ್ಯಕ್ತಗೊಳಿಸಲಿಲ್ಲ.

"ಹೋಗ್ಲಿ ಲಲಿತ ಹ್ಯಾಗಾದ್ರೂ ಸುಖವಾಗಿದ್ದಿಯಲ್ಲಾ....ಅಷ್ಟೇ ಸಾಕು. ನೀನು ಮದ್ವೆಗೆ ಕರೀದೇ ಇದ್ದರೂ ಪರವಾಗಿಲ್ಲ. ಸುಖವಾಗಿದ್ದೀ ಅಂತ ಕೇಳಿ ತುಂಬಾ ಸಂತೋಷವಾಯ್ತು." ಶಕುಂತಲ ತುಂಬು ಪ್ರೇಮ ದಿಂದ ನುಡಿದಳು.

"ಏನೊ ಅಮ್ಮ ಇಷ್ಟರಮಟ್ಟಿಗೆ ಇದ್ದೀನಿ. ಏನಾದ್ರೂ ನಿನ್ನ ಸುಖ ಎಲ್ಲಮ್ಮ ಬರ್ಬೇಕು ನನಗೆ. ನಿಂಗೆ ಸಾಹುಕಾರ ಗಂಡ ಸಿಕ್ಕಿದ್ದಾನೆ. ಸುಂದರನಾಗಿದ್ದಾನೆ. ತುಂಬಾ ಪ್ರೀತಿಸ್ತಾನೆ ಅಂತ ಕಾಣ್ಸುತ್ತೆ. ನನ್ನ ಅವರು ನಿನ್ನ ಗಂಡನಷ್ಟು ಸುಂದರವಾಗಿಲ್ಲದಿದ್ದರೂ ನನ್ನೇನೊ ಪ್ರೀತಿಸ್ತಾರೆ. ನನ್ನ ಕಂಡ್ರೆ ಅವರಿಗೆ ತುಂಬಾ ಅಭಿಮಾನ...ಹೋಗ್ಲಿ ನಿನ್ನ ಸಮಾಚಾ ರಾನೇ ಹೇಳಲಿಲ್ಲ. ನಿನ್ನ ಯಜಮಾನರು ಚೆನ್ನಾಗಿದ್ದಾರಾ?... ನೀನೊ ಬ್ಬಳೇ ಬಂದ್ಯಂತಲ್ಲ. ಯಾಕೆ ನಿನ್ನ ಗಂಡ ಒಂದು ದಿನದ ಮಟ್ಟಿಗಾದ್ರೂ ಬರಬಾರದಾಗಿತ್ತೆ...! ನಮ್ಮವರು ನನ್ನ ಹಾಗೆಲ್ಲಾ ಒಂಟಿಯಾಗಿ ಎಲ್ಲೂ ಕಳ್ಸಲ್ಲ...."

"ಅಮ್ಮಾ ಕರೀತಾ ಇದ್ದಾಳೆ ಒಳಗೆ...ನಾನು ಬರ್ತೀನಿ.. ಲಲಿತ..." ಶಕುಂತಲ ಒಳಗೆ ಧಾವಿಸಿ ಹೊರಟುಹೋದಳು. ಲಲಿತಳ ಒಂದೊಂದು ಮಾತೂ ಎದೆಯನ್ನು ಭಲ್ಲೆಯಿಂದ ತಿವಿದಿತ್ತು.

ಲಲಿತ ಗಹಗಹಿಸಿ ನಗುತ್ತಿದ್ದಳ.

ಇಂತಹ ಕುಹಕ ನುಡಿಗಳು ಈಗೀಗ ತೀರ ಸಾಮಾನ್ಯವಾಗಹತ್ತಿವೆ. ನೂರು ಬಾಯಿ ಸಾವಿರ ತರಹದಲ್ಲಿ ಕೂಗುತ್ತಿವೆ.

ಶಕುಂತಲ ಎಲ್ಲವನ್ನೂ ಕೇಳಿ ನಡುಗುತ್ತಾಳೆ. ಮನದ ದುಗುಡ ಅತಿ ಯಾದಾಗ ರೂಮಿನಲ್ಲಿ ಕುಳಿತು ಬಹು ಹೊತ್ತು ಅಳುತ್ತಾಳೆ.

"ಅಳು....ಅಳು....ಎಷ್ಟುಬೇಕಾದರೂ ಅಳು. ಅತ್ತಷ್ಟು ಮನಸ್ಸು ಹಗುರಾಗುತ್ತೆ. ದುಃಖ ಕಡಿಮೆಯಾಗುತ್ತೆ." ಅಜ್ಜಿ ಪ್ರತಿಸಿತ್ಯವೂ ನುಡಿ ಯುತ್ತಾರೆ.

ಬಂದಂದಿನಿಂದ ನಿತ್ಯವೂ ಧಾರಾಕಾರವಾಗಿ ಕಣ್ಣೀರಿನ ಕೋಡಿ ಯನ್ನು ಹರಿಸುತ್ತಿದ್ದರೂ ಬತ್ತದ ಒರತೆಯಾಗಿದೆ ಕಣ್ಣೀರು.

## ೨೫

"ಗಂಡನಿಗೆ ಬೇಡವಾದ ಹೆಂಡತಿ ಗಂಡ ಕಟ್ಟಿದ ಮಾಂಗಲ್ಯಕ್ಕಾಗಿ

ಜೀವನವನ್ನು ಬರಡಾಗಿರಿಸಿ ಸೊರಗಿ ಸಾಯಬೇಕೆ....?"

ಇದು ಒಂದು ಬೃಹತ್ ಪ್ರಶ್ನೆ....!

ಶಕುಂತಲ ಯೋಚಿಸಿ ಯೋಚಿಸಿ ಸೊರಗಿ ಸುಣ್ಣವಾಗಿದ್ದಾಳೆ. ಬಳಲಿದ ದೇಹ ಬೆಂಡಾಗಿ ಯೌವ್ವನದ ದಿನಗಳಲ್ಲಿ ಮಿಂಚನ್ನು ಹರಿಸಬೇಕಾಗಿದ್ದ ಕಣ್ಣುಗಳಲ್ಲಿ ನೋವು, ಅತೃಪ್ತಿ ಇಣಕಿ ನೋಡುತ್ತಿದೆ.

ಹೀಗೆ ತಳ್ಳಿದ ಒಂದು ವರ್ಷ ಒಂದು ಯುಗದಷ್ಟು ಹಿರಿದಾಗಿದೆ ಆಕೆಗೆ. ಉಳಿದ ಆಯುಷ್ಯವನ್ನು ಹೀಗೆಯೇ ತಳ್ಳಬೇಕೆ ...!

ಪಕ್ಕದ ಮನೆಯ ಲಲಿತ ಆಗಲೇ ಒಂದು ಮಗುವನ್ನು ಎತ್ತಿಕೊಂಡು ಬಂದಳು.

"ಅತ್ತೆ....ಕಣೊ ...ಅವಳ ಮಗಳನ್ನೆ ನಿಂಗೆ ಕೊಡೋದು....!" ನೆನದಾಗ ಮಿಲಿಮಿಲಿ ಒದ್ದಾಡುವಂತಾಯಿತು ಅವಳಿಗೆ.

ಯಾರಿಗಾದರೂ ಅತ್ತೆಯಾಗುವ ಭಾಗ್ಯವುಂಟೆ ...? ತನಗೆ....!

ಮೊನ್ನೆ ಮೊನ್ನೆಯ ಹುಡುಗಿ ಸವಿತ್ರ, ಪ್ರಭಾಳ ತಂಗಿ ಆಗಲೇ ಮದುವೆಯಾಗಿ ತಮ್ಮ ಮನೆಯ ಮುಂದೆ ನಗುವಿನ ಹೊನಲನ್ನೇ ಹರಿಸುತ್ತ ಗಂಡನ ಜೊತೆಯಲ್ಲಿ ಸಿನಿಮಾಕ್ಕೆ ಹೊರಟಿದ್ದಳು. ನೆಲವೇ ಕಣ್ಣಿಗೆ ಬೀಳದ ಆ ಹೊಸ ಬಾಳಿನ ಉನ್ಮಾದತೆ...! ಮೂರ್ತವೆತ್ತ ಸಂತೋಷ....! ಹಿಂದೆಂದಾದರೂ ತಾನು ಕಂಡಿದ್ದೇನೆಯೇ ? ಮುಂದೆ ಬರುವ ಆಸೆಯಿದೆಯೆ ?!

ಶಕುಂತಲ ಮುಖವನ್ನು ಸೆರಗಿನಿಂದ ಮುಚ್ಚಿಕೊಂಡು ಗೋಳೋ ಎಂದು ಅತ್ತಳು.

"ನೀನು ನನ್ನ ಜೀವನದ ಬೆಳಕು ಪ್ರಭಾ....ನೀನಲ್ಲದೆ ನಾನು ಒಂದು ದಿನ ಬದುಕಲಾರೆ...." ಅಂದು ಇವಳು ಪ್ರಭಾಳ ಮನೆಗೆ ಹೋದಾಗ ಒಳಗೆ ಗಂಡ ಹೆಂಡತಿಗೆ ಹೇಳುತ್ತಿದ್ದ. ಅತ್ತೆ ಪುರಾಣಕ್ಕೆ ಹೋಗಿದ್ದರು. ಮಕ್ಕಳು ಹೊರಗೆ ಆಡಲು ಹೋಗಿದ್ದರು.

ಪ್ರಭಾಳನ್ನು ಕೂಗದೆ ಬಂದಿದ್ದಳು ಅಂದು.

"ನಾನೇನು ಪಾಪ ಮಾಡಿ ಹುಟ್ಟಿದ್ನೊ....ಪಾರ್ವತಮ್ಮ ಈಗ ನಾನು ಆದರ ಫಲಾ ಅನುಭವಿಸ್ತಾ ಇದ್ದೀನಿ....ನಮ್ಮ ಶಕುಂತಲಳನ್ನು ನೋಡಿದ್ರೆ ಕರಳು ಕಿತ್ತು ಬರುತ್ತೆ. ಗಂಡು ಹೆಣ್ಣು ಎರಡೂ ಅವಳೇ ಅಂತ ಸಾಕೆ, ಅವಳೊಬ್ಬಳು ಸುಖವಾಗಿದ್ರೆ ಸಾಕು ಅಂತ ನಾವು ಬಯಸಿದ್ರೆ....ದೇವರು ಸರಿಯಾಗಿ ಮಾಡ್ದ. ನಮ್ಮ ಸುಖ ಮುಖ್ಯವಾಗಿ ಅವನಿಗೆ ಬೇಕಿರಲಿಲ್ಲ ಅಂತ ಕಾಣ್ಸುತ್ತೆ....ಹುಡ್ಗೀಗೆ ಇನ್ನೂ ಹದಿನೆಂಟು ವರ್ಷ ವಯಸ್ಸು.... ಹ್ಯಾಗ್ರಿ ಅವಳು ದಿನಾ ತಳ್ಳೋದು....! ಹೆಣ್ಣಿನ ಸುಖಾ ಅಂದ್ರೇನು ಅಂತ

ಅನುಭವಿಸದೆ !" ಕಣ್ಣೀರು ಮಿಡಿದು ತಾಯಿ ಪಕ್ಕದಮನೆಯಾಕೆಯೊಡನೆ ದುಃಖದ ಉಮ್ಮಳದಲ್ಲಿ ಮೆಲ್ಲನೆಂದು ಜೋರಾಗಿಯೇ ನುಡಿದಿದ್ದಳು.

" ಶಕುಂತಲಾ....! ನೀನು ಸುಖವಾಗಿರೋದನ್ನ ನೋಡಬಾರ್ದು ಅಂತ ನನ್ನ ಹಣೇಲಿ ಬರ್ದಿದೆ ಅಂತ ಕಾಣುತ್ತೆ.?" ಹತ್ತಿರ ಕೂಡಿಸಿಕೊಂಡು ತಲೆಯನ್ನು ನೇವರಿಸುತ್ತ ಅಜ್ಜಿ ಪ್ರತಿನಿತ್ಯವೂ ಕಣ್ಣೀರು ಕರೆಯುತ್ತಾರೆ. ಮೊದಲೇ ಖಾಯಿಲೆಯಿಂದ ಬಹುವಾಗಿ ಬಳಲಿದ ದೇಹ ಈಗ ಪೂರ್ಣ ನಿತ್ರಾಣವಾಗಿದೆ.

ಶಕುಂತಲ ಎಲ್ಲವನ್ನು ಆಲಿಸಿ ಏನನ್ನು ಮಾಡಲರಿಯದೆ ರೂಮಿನಲ್ಲಿ ಮಂಚದ ಮೇಲೆ ಕುಳಿತು ಎದುರಿನ ಗೋಡೆಯನ್ನು ದಿಟ್ಟಿಸುತ್ತಾಳೆ. ಇಲ್ಲವೆ ಹಾಸಿಗೆಯಮೇಲೆ ಉರಳಿ ಮೇಲಿನ ಜಂತೆಯನ್ನು ಎಣಿಸುತ್ತಾಳೆ. ಆಗಾಗ್ಗೆ ತಲೆಯಮೇಲೆ ಕೈಯನ್ನು ಹೊತ್ತು ಕಣ್ಣೀರನ್ನು ಮಿಡಿಯುತ್ತಾಳೆ. ಆದರೆ ಈಗೀಗ ಕಣ್ಣೀರಿನ ವೇಗ ಸ್ವಲ್ಪ ಕಡಿಮೆಯಾಗಿದೆ.

ಮೊಳಕಾಲುಗಳ ಮಧ್ಯದಲ್ಲಿ ತಲೆಯನ್ನು ಸಿಕ್ಕಿಸಿ ಕೃತಕವಾಗಿ ನಿರ್ಮಿತವಾದ ಅಂಧಕಾರದಲ್ಲಿ ಬಹು ಹೊತ್ತು ಕಣ್ಣನ್ನು ಬಿಟ್ಟು ಕುಳಿತಿದ್ದ ಶಕುಂತಲ ತಲೆ ಎತ್ತಿ ಪಕ್ಕಕ್ಕೆ ಹೊರಳಿದಳು. ಧೂಳು ಕವಿದ ನಿಲವು ಕನ್ನಡಿಯಲ್ಲಿ ಮುಸಕಾಗಿ ಅವಳ ಮುಖ ಕಾಣಿಸಿತು. ಕೆನ್ನೆಯ ಕೆಂಪು ಸ್ವಲ್ಪ ಕಡಿಮೆಯಾಗಿ ದುಂಬಿಯಂತಹ ಕಣ್ಣಿನ ಕಾಂತಿ ಸ್ವಲ್ಪ ಕಂದಿದ್ದರೂ ಮುಖದ ಮಾಟ ಮೋಹಕವಾಗಿಯೇ ಇದೆ. ತೆಳವು ತುಟಿಗಳು ನಗುವನ್ನು ಕಾಣದೆ ಬಹಳ ದಿನಗಳಿಂದಲೂ ಬಳಲಿದ್ದರೂ ಏನೊ ಇನ್ನು ಆಕರ್ಷಕವಾಗಿಯೇ ಇದೆ. ದೇಹ ಸೋತು ಬಳಲಿದ್ದರೂ ಯವ್ವನದ ಲಾವಣ್ಯ ಶರೀರದ ನಾಡಿ ನಾಡಿಯಲ್ಲಿ ಪ್ರವಹಿಸುತ್ತಿದೆ. ಎದ್ದುಬಂದು ಕೈಯಿಂದ ಕನ್ನಡಿಯನ್ನು ವರಸಿ ತನ್ನನ್ನು ತಾನೇ ನೋಡಿಕೊಂಡಳು.

ಹೌದು....! ತಾನು ಸುಂದರಿ. ಗಂಡ ತನ್ನನ್ನು ತ್ಯಜಿಸಿದ್ದರೂ ತಾನು ಸುಂದರಿ. ಅನುಮಾನವೇ ಇಲ್ಲ. ದೇಹದ ಸೌಂದರ್ಯವೇ ಸಾರಿ ಹೇಳುತ್ತಿದೆ.

ಕೈಯೆತ್ತಿ ತನ್ನ ಚೆಲುವು ಕೆನ್ನೆಗಳನ್ನು ಮೃದುವಾಗಿ ಸವರಿಕೊಂಡಳು. ಏನನ್ನೊ ನೆನೆದು ಹುಸಿಯಾಗಿ ನಕ್ಕಳು. ಕೈ ಸರಿದು ಸ್ವಲ್ಪ ಉದ್ದನಾದಂತಿದ್ದ ಕೊರಳನ್ನು ಬೆರಳುಗಳು ಸುತ್ತುವರಿದವು. ಕತ್ತನ್ನು ಸವರಿದ ಕೈಗೆ ಸಿಕ್ಕಿದ ಮಾಂಗಲ್ಯ ಬೆರಳ ಸಂದಿನಲ್ಲಿ ನಿಂತಿತ್ತು. ಇದನ್ನು ಕಂಡ ಶಕುಂತಲ ತತ್ತರಿಸಿದಳು. ಮಾಂಗಲ್ಯ....! ಹೆಣ್ಣಿನ ಜೀವಸೂತ್ರ....! ವಿಕಟವಾಗಿ

ನಕ್ಕಳು. ಎಂದೂ ಹೀಗೆ ಅವಳು ಕರಾಳವಾಗಿ ನಕ್ಕಿರಲಿಲ್ಲ. ಸ್ವಲ್ಪವೇ ಬಿರಿದ ಬಾಯಲ್ಲಿ ಬಿಳಿಯ ಹಲ್ಲುಗಳು ಬಹು ವಕ್ರವಾಗಿ ಕಂಡವು.

"ಮಾಂಗಲ್ಯ....! ಅಲ್ಲ ವೃತ್ಯು....!" ಕೂಗಿ ದೊಪ್ಪೆಂದು ಹಾಸಿಗೆಯ ಮೇಲೆ ಬಿದ್ದುಬಿಟ್ಟಳು.

"ಸುಖ....! ...ಸುಖ....! ಹೌದು, ಸಜೀವ ಪ್ರಾಣಿ ಎಲ್ಲಾ ಬಯಸುವುದು ಇದೊಂದೆ. ಆದರೆ ತನಗೆ ಇದು ದುರ್ಭರ....! ತನ್ನ ದೇಹ ಬಯಸುತ್ತೆ. ತನ್ನ ಅಂತರಾತ್ಮ ಇದಕ್ಕಾಗಿ ಒಳಗೇ ಕಾತರಿಸುತ್ತಿದೆ. ತಾಯಿ ತಪಿಸುತ್ತಿದ್ದಾಳೆ. ಅಜ್ಜಿ ಹಾತೊರೆದು ಹಂಬಲಿಸುತ್ತಿದ್ದಾರೆ. ಇದನ್ನು ಕಾಣಲು ಬದುಕಿ ಜೀವ ಹಿಡಿದು ಕುಳಿತಿದ್ದಾರೆ. ತಂದೆ ಏನನ್ನೂ ಮಾಡಲಾಗದೆ ಮೂಕರಾಗಿದ್ದಾರೆ.

ಇದು ಈಡೇರದ ಬಯಕೆಯೋ? ನಿರಾಶೆಯೋ ಎಲ್ಲಕ್ಕೂ ಉತ್ತರವೆ..?! ಅತೃಪ್ತಿ, ಅಶಾಂತಿಯೇ ತನ್ನ ಬದುಕಿಗಾಗಿ ಬಾಳಿ ಉಳಿದಿರುವ ಅವರಿಗೆ ತಾನು ಕೊಡುವ ಪ್ರತಿಫಲ....?!

"ಇಲ್ಲ...ಇಲ್ಲ..ನಾನೂ ಸುಖಿಯಾಗಬೇಕು. ಅವರಿಗೂ ಸುಖ ಕೊಡಬೇಕು...." ಹುಚ್ಚಳಂತೆ ಅಬ್ಬರಿಸಿ ಮಲಗಿದ್ದವಳು ಎದ್ದು ಕುಳಿತಳು.

"ಆದರೆ...?" ಭೀಕರ ಪ್ರಶ್ನೆ.

ಮಧ್ಯಾಹ್ನದ ದಗೆಯಲ್ಲೂ ರಗ್ಗನ್ನು ಪೂರ್ತಿಯಾಗಿ ಹೊದ್ದು ಹಾಸಿಗೆಯ ಮೇಲೆ ಪುನಃ ಮಲಗಿಬಿಟ್ಟಳು.

ಅವಳ ಯೋಚನೆ ನಿರ್ಧಾರಕ್ಕೆ ಬರದೆ ಸೊರಗಿತ್ತು.

"ನನ್ನ ಮದುವೆಯ ಕಾಲ ಆಗಿಹೋಯ್ತು ಶಕುಂತಲ...ಒಂದು ಕಾಲದಲ್ಲಿ ಮದುವೆಯಾಗಲು ಬಯಸಿದ್ದೆ. ಬಯಸಿದ ಬಯಕೆ ಈಡೇರಿದರೆ ನನ್ನಷ್ಟು ತೃಪ್ತರು ಯಾರೂ ಇರುತ್ತಿರಲಿಲ್ಲ. ಪೂರ್ಣ ಸುಖಿಯಾಗಿರುತ್ತಿದ್ದೆ. ಈಗ ನಾನು ಯಾರನ್ನೂ ಮದುವೆಯಾಗಲಾರೆ. ಮದುವೆಯ ಬಯಕೆಯೇ ಇಂಗಿಹೋಗಿದೆ. ಕೈತುಂಬಾ ಸಂಪಾದಿಸುತ್ತೇನೆ. ಕೈ ಚಾಚಿದಷ್ಟು ಹಣವೂ ಸುರಿಯುತ್ತೆ....ನಾನು ಎಕ್ಸೈಜ್ ಆಫೀಸರು....ದೊಡ್ಡ ಆಫೀಸರು....! ಕೈಕೆಳಗೆ ನೌಕರರಿದ್ದಾರೆ...ಬೆಂಗಳೂರಿನಲ್ಲೆ ಬಂಗಲೆ ಕೊಟ್ಟಿದ್ದಾರೆ...ಹಣಕ್ಕೆ ಹಾತೊರೆದು ಬರುವ ಹುಡುಗಿಯರಿಗೂ ಬರಗಾಲವಿಲ್ಲ. ಮನಸ್ಸು ಬಂದಾಗ ಭೋಗಿಸಿ ಕೈಗೆ ಬಂದಷ್ಟು ಹಣ ಕೊಟ್ಟು ಸುಖ ಕೊಂಡುಕೊಳ್ತೇನೆ....ನನಗೆ ಎಲ್ಲಾ ಸುಖವೂ ಇದೆ....ಶಕುಂತಲ....ನನ್ನ ಹತ್ತಿರ ಈಗ ಅಸುಖ, ಅತೃಪ್ತಿ ಸುಳಿಯದು ಕೂಡ....ಅಹಹ....!" ಒಂದು ತಿಂಗಳ

ಕೆಳಗೆ ಬಂದಿದ್ದ ಶೀನಿ ಬಹು ಭಯಂಕರವಾಗಿ ಎದುರಿಗೆ ಭೂತನಂತೆ ನಿಂತು ವಿಕೃತವಾಗಿ ಹಲ್ಲು ಕಿರಿದು ವಿಕಾರವಾಗಿ ನುಡಿದಿದ್ದ.

ನೆನಪು ಬಂದೊಡನೆ ದೇಹಾದಂತ್ಯ ಜೀವರಿಹೋಯಿತು. ಕಾಲುಗಳು ರಗ್ಗನ್ನು ಒದ್ದು ಮಂಚದಿಂದ ಆಚೆಗೆ ತಳ್ಳಿದವು.

ಎದ್ದು ಕುಳಿತು ಬಹು ಹೊತ್ತು ಗೋಳೋ ಎಂದು ಅತ್ತಳು.

"ನೀನು ...ನನ್ನನ್ನು ಅರ್ಥಮಾಡಿಕೊಳ್ಳಲಿಲ್ಲ........ಶಕುಂತಲ....!" ಹೋಗುತ್ತ ಶೀನಿ ಹೇಳಿ ಹೋಗಿದ್ದ. ಹಿಂದೆ ಅವಳು ನುಡಿದುದನ್ನೆ ಅವನೂ ನುಡಿದಿದ್ದ.

ಆದರೆ....! ಅಂದಿದ್ದ ಆಶೆಗೂ....ಇಂದಿನ ನಿರಾಶೆಗೂ...ಅಂತರ....?! ಭಾವೋನ್ಮಾದ ಹೆಚ್ಚಿ ಹುಚ್ಚಳಂತೆ ಹೊರಗೆ ಓಡಿಹೋಗಿ ತಾಯನ್ನು ತಬ್ಬಿಕೊಂಡಳು. ಎದೆಯಲ್ಲಿ ತಲೆ ಇಟ್ಟು ಬಹು ಹೊತ್ತು ಕಣ್ಣೀರು ಸುರಿಸಿದಳು.

## ೨೬

"ಮಗೂ....ವೆಂಕಣ್ಣ...." ಬಹು ಕ್ಷೀಣ ಸ್ವರದಲ್ಲಿ ಕೂಗಿದರು ಸಾವಿತ್ರಮ್ಮ. ವೆಂಕಟರಾಯರು ತಾಯಿಯ ಸನಿಹದಲ್ಲಿ ಹೋಗಿ ಕುಳಿತರು. ಸುಬ್ಬಣ್ಣ ತಲೆದಿಂಬಿನ ಬಳಿಯಲ್ಲೆ ಕುಳಿತು ಯಾವುದೊ ಮಾತ್ರೆಯನ್ನು ಸಾಣೆಯ ಕಲ್ಲಿನಮೇಲೆ ತೇಯುತ್ತಿದ್ದ.

"ಹತ್ತಿರಬಾ....ವೆಂಕಣ್ಣ..." ತಾಯಿಯ ನಿರ್ಬಲ ಕೈ ಮಗನ ಕೈಗಾಗಿ ಸ್ವಲ್ಪ ಅತ್ತ ಇತ್ತ ಚಲಿಸಿತು. ವೆಂಕಣ್ಣ ತಾಯಿಯ ಕೈಯನ್ನು ಹಿಡಿದುಕೊಂಡ. ಮುಖದ ಹಳ್ಳದಲ್ಲಿ ಹೆಣಕಿ ನೋಡುತ್ತಿದ್ದ ಕಣ್ಣಿನ ಆಲಿಗಳು ಈಗ ಮಗನತ್ತ ಸರಿದವು.

"ಮಗೂ....ಶಕುಂತಲಳ ದುಃಖವನ್ನು ನೋಡಲಾರೆ....ವೆಂಕಣ್ಣ...." ಕೊರಳು ಉಬ್ಬಿಬಂತು. "ಇವೆಲ್ಲಾ ನೋಡೋಕೆ ಮುಂಚೆ....ಅವಳ ಮದ್ವೆಗೆ ಮುಂಚೇ ಸತ್ತುಹೊಗಿದ್ರೆ ಚೆನ್ನಾಗಿತ್ತು. ಹಾಯಾಗಿ ಸಾಯ್ತಾ ಇದ್ದೆ. ಈಗ ಕರಳು ಸುಟ್ಟುಕೊಂಡು ಅವಳ ದುಃಖಾನ ನೋಡೋಕೆ ಆಗ್ದೆ ಸಾಯಬೇಕಾಗಿದೆ." ಪುನಃ ಮುಂದುವರಿಸಿದರು.

"ಸುಮ್ನಿರಮ್ಮ ಹಾಗೆಲ್ಲಾ ನುಡೀಬೇಡ." ತಾಯಿಯ ಬಾಯಿಯ ಮೇಲೆ ವೆಂಕಟರಾಯರು ಕೈಯನ್ನು ಇಟ್ಟರು. "ನೀನೂ ಹೊರ್ಟುಹೋಗಿ ನನ್ನನ್ನು ಅನಾಥರನ್ನಾಗಿ ಮಾಡಬೇಡಮ್ಮ..." ಬಿಕ್ಕಳಿಸಿದರು ರಾಯರು.

"ಎಲ್ಲಕ್ಕೂ ಕಾರಣನಾದ ನನ್ನ ಕ್ಷಮಿಸಬೇಕಮ್ಮ... ನೀನು

ಸಾವಿತ್ರಮ್ಮ. ನಾನು ಪಾಪಿ. ಶಕುಂತಲಳ ಜೀವನ ಹಾಳುಮಾಡ್ದೆ. ನಿಮ್ಮನ್ನ ನೋಯಿಸಿದೆ.” ಅರೆಯುತ್ತಿದ್ದ ಔಷದಿಯನ್ನು ಅಲ್ಲೆ ಬಿಟ್ಟು ಎದ್ದುಹೋಗಿ ಅವರ ಎರಡು ಕಾಲುಗಳನ್ನೂ ಹಿಡಿದುಕೊಂಡ. “ನೀನು ಕ್ಷಮಿಸ್ದೆ ಅಂತ ಹೇಳೋವರೂ ನಾನು ಕಾಲು ಬಿಡೋಲ್ಲ ...ಶಕುಂತಲಳಲ್ಲೂ ಕ್ಷಮೆ ಕೇಳಬೇಕು ಅನ್ನುತ್ತೆ. ಆದ್ರೆ ಅವಳು ನನ್ನ ಕೊಂಕಳಲ್ಲಿ ಆಡಿ ಬೆಳದ ವಳು....ನೀನು ಕ್ಷಮಿಸಿದ್ರೆ ಎಲ್ಲಾರೂ ಕ್ಷಮಿಸಿದಹಾಗೆ ಸಾವಿತ್ರಮ್ಮ....ಕ್ಷಮೆ ಕೇಳೋದ್ರಿಂದ ಶಕುಂತಲಳ ಜೀವನವೇನೂ ಸುಧಾರಿಸೊಲ್ಲ....ನಾನು ಸಾಯೋತನ್ಕ ಇದು ಕೊರೀತಾನೇ ಇರುತ್ತೆ. ಆದ್ರೂ ನಂಗೆ ನಿನ್ನ ಕ್ಷಮೆ ಬೇಕು. ಇದರಿಂದ ಸ್ವಲ್ಪವಾದ್ರೂ ಸಮಾಧಾನ ವಾಗಬಹುದು.... ಅಂತ....!”

“ಇದೇನೊ ಸುಬ್ಬಣ್ಣ ಒಳ್ಳೇ ಎಳೆಮಗು ಆಡಿದ ಹಾಗೆ ಆಡ್ತಾ ಇದ್ದೀಯಲ್ಲ. ನೀನೇ ಇನ್ನೊಬ್ಬರಿಗೆ ಬುದ್ಧಿ ಹೇಳಬೇಕು....ಅಂತೊದ್ರಲ್ಲಿ ಹೀಗೆ ನೀನೇ ಆಡ್ತಾ ಇದ್ರೆ ಸರಿಹೋಯ್ತು. ಏಳು ಸುಬ್ಬಣ್ಣ....ನನ್ನ ಕಾಲು ಬಿಡು. ಹಾಗೆಲ್ಲಾ ಇಷ್ಟು ದೊಡ್ಡೋನಾಗಿ ಕಾಲು ಹಿಡೀಬಾರ್ದು. ನೀನು ಮಾಡಿದ್ದು ತಾನೇ ಏನಪ್ಪ...! ಎಲ್ಲಾ ಅವಳ ವಿಧಿ ಮಾಡಿದ್ದು ನೀನು ಅವಳು ಒಳ್ಳೇಕಡೆ ಸೇರ್ಲಿ ಅಂತ ತಾನೇ ಸಂಬಂಧ ಕೂಡಿಸಿದ್ದು. ಮುಂದಾ ಗೋದನ್ನು ಯಾರು ಕಂಡಿರೊದಕ್ಕೆ ಆಗುತ್ತೆ....ಏಳು ಸುಬ್ಬಣ್ಣ ಕ್ಷಮಿಸಕ್ಕೆ ನಾನ್ಯಾರು? ಕ್ಷಮಿಸೋನು ದೇವರು....! ಅದೂ ತಪ್ಪು ಮಾಡಿರೋರನ್ನ. ನಿನ್ನನ್ನ. ಅಲ್ಲ ಅಪ್ಪ ಸುಬ್ಬಣ್ಣ” ಸಾವಿತ್ರಮ್ಮ ನುಡಿದಳು. ಆಯಾಸ ಹೆಚ್ಚಾಗಿ ಬಿಸಿಯುಸಿರನ್ನು ಬಿಟ್ಟು ಸ್ವಲ್ಪ ಹೊತ್ತು ಸುಧಾರಿಸಿಕೊಂಡರು.

“ಇಲ್ಲ ಸಾವಿತ್ರಮ್ಮ. ನೀನು ಕ್ಷಮಿಸ್ದೆ ಅನ್ನೋತನ್ಕ ನಾನು ನಿನ್ನ ಕಾಲು ಬಿಡೋಲ್ಲ.” ಸುಬ್ಬಣ್ಣ ಇನ್ನೂ ಭದ್ರವಾಗಿ ಕಾಲನ್ನು ಹಿಡಿದು ಕೊಂಡ.

“ನೀನು ಹಿಡಿದದ್ದೇ ಹಟ....ಸುಬ್ಬಣ್ಣ....! ಹೋಗ್ಲಿ ಕ್ಷಮಿಸ್ದೆ ಬಿಡು ....ನೋಡು ಸುಬ್ಬಣ್ಣ ಇನ್ನು ಈ ಮನೆಗೆ ನೀನೇ ಹಿರಿಯ. ಇವರಿಗೆಲ್ಲಾ ತಿಳುವಳಿಕೆ ಹೇಳಿಕೊಂಡು ಇಲ್ಲೇ ಇದ್ದುಬಿಡು. ನನ್ನ ಕಾಲ ಆಗಿಹೋಯ್ತು. ಇವತ್ತೋ ನಾಳೇನೊ ನಾನು ಮುಂದಿನ ಮನೆಗೆ ಪ್ರಯಾಣ ಮಾಡ್ತೇನಿ....”

“ಅಮ್ಮಾ....!” ದುಃಖದಿಂದ ಉನ್ಮತ್ತರಾಗಿ ಅರುಚಿದರು ರಾಯರು.

“ನಮ್ಮನ್ನ ಅನಾಥರನ್ನಾಗಿ ಮಾಡಬೇಡಮ್ಮ....” ಪುನಃ ನುಡಿದರು.

“ವೆಂಕಣ್ಣ....ಹಾಗೆಲ್ಲಾ ಅಳಬಾರದಪ್ಪ. ನಂಗೇನು ವಯಸ್ಸಾಯ್ತು.

ಕಾಲವಾಯ್ತು. ನಾನು ಹೋಗ್ಬೇಕಾದ್ದೆ....ಹೋಗ್ತಾ ಇದ್ದೀನಿ. ಇರೋ ತನ್ಕ ನನ್ನ ಸುಖವಾಗಿ ಕಾಪಾಡ್ದೆ. ಹೋಗೋವಾಗ ಸುಮ್ನೆ ಕಣ್ಣೀರು ಸುರಿಸಬೇಡಪ್ಪ ಮಗು. ನೀನು ನಗ್ತಾ ನಗ್ತಾ ಇರೋದನ್ನು ನಾನು ನೋಡಿ ಸಾಯಬೇಕೆಂದಿದ್ದೆ....ಆದ್ರೆ ಅದು ದೇವರಿಗೆ ಬೇಕಿರಲಿಲ್ಲ ಅಂತ ಕಾಣ್ಸತ್ತೆ.... ಹೋಗ್ಲಿ ದುಃಖಿಸಬೇಡ ಶಕುಂತಲ....ಅಳಬಾರದು ಸೀತಾ...." ಮೂವರ ಕಡೆಗೂ ಕಣ್ಣನ್ನು ಹಾಯಿಸಿದರು.

"ಮಗೂ ವೆಂಕಣ್ಣ....ನಾನೊಂದು ಮಾತ್ನ ಹೇಳ್ಬೇಕು ಅಂತೀನಿ....?" ಮಾತನಾಡಬೇಕೆಂದು ಬಯಸಿದ್ದ ಮಾತಿಗೆ ಪೀಠಿಕೆ ಹಾಕಿದರು.

"ಅದೇನು ಹೇಳಮ್ಮ....ನೀನು ಹೇಳಿದ್ದನ್ನು ಶಿರಸಾವಹಿಸಿ ಮಾಡ್ತೀನಿ. ನಿನ್ನ ಮಾತು ನನಗೆ ವೇದವಾಕ್ಯ."

"ಆದ್ರೆ ಮಗು....ಈಗ ನಾನು ಹೇಳ್ತಾ ಇರೋ ವಿಷಯ ಸ್ವಲ್ಪ ಯೋಚಿಸಬೇಕಾದ್ದು....ಧರ್ಮ ವಿಷಯ....!" ತಾಯಿಯ ಗಂಟಲಿನಲ್ಲಿ ಏನೊ ತಡೆಯುತ್ತಿತ್ತು.

"ನೀನೇ ನನಗೆ ಮೂರ್ತವೆತ್ತ ಧರ್ಮ ಅಮ್ಮಾ. ನಿನ್ನ ಮಾತೇ ನನಗೆ ವೇದವಾಕ್ಯ. ನಿನ್ನ ಆಜ್ಞೆಯನ್ನು ನಡೆಸೋದು ನಾನು ಮಾಡಬೇಕಾದ ಕರ್ಮ....ಹೇಳಮ್ಮ....ಏನು ಹೇಳಮ್ಮ...." ತಾಯಿಯ ಮುಖದ ಹತ್ತಿರ ಮುಖ ಇಟ್ಟು ಕಾತುರದಿಂದ ನುಡಿದರು ರಾಯರು.

ಸಾವಿತ್ರಮ್ಮನವರ ಎದೆ ಬಹು ರಭಸವಾಗಿ ಏರಿಳಿಯುತ್ತಿತ್ತು. ತುಟಿಗಳು ಅಲುಗಾಡಿದವು. "ಸುಬ್ಬಣ್ಣಾ...." ಸುಬ್ಬಣ್ಣ ತಲೆಯ ಹತ್ತಿರ ಬಂದು ಕುಳಿತುಕೊಂಡ. "ಸೀತಾ ಹತ್ತಿರ್ಕ'ಬಾರಮ್ಮ....ನಿನ್ನ ದುಃಖ ನಾನು ನೋಡಲಾರನಮ್ಮ....ನಾನು ಈಗ ಹೇಳೋ ಮಾತ್ನಿಂದ ನಿಮ್ಗೆ ಸಂತೋಷವಾಗುತ್ತೋ ಇಲ್ವೊ....ನಾನು ಕಾಣೆ. ಆದ್ರೆ ಇದನ್ನು ನಡೆಸೋದ್ರಿಂದ ನನಗಂತೂ ತುಂಬಾ ಸಂತೋಷವಾಗುತ್ತೆ. ಅದು ನಡೆದ ಭಾಗ್ಯ ನೋಡೋ ಪುಣ್ಯ ನನಗಿಲ್ಲ....ಹೋಗ್ಲಿ ಪರವಾಗಿಲ್ಲ. ನನ್ನ ಆತ್ಮಕ್ಕೆ ತೃಪ್ತಿ ಲಭಿಸುತ್ತೆ. ಏನು ವೆಂಕಣ್ಣ ನಡೆಸಿಕೊಡ್ತಿ ತಾನೆ....? ಸುಬ್ಬಣ್ಣ ನೀನು ಸ್ವಲ್ಪ ತಿಳಿ ಹೇಳಬೇಕಪ್ಪ. ಸೀತಳ ತಾಯಿ ಮನಸ್ಸಿಗೆ ನನ್ನ ಹೃದಯದ ಬಯಕೆ ಗೊತ್ತಿದೆ. ನನ್ನ ಬಯಕೆಯೂ, ಅವಳ ಆಸೆಯೂ ಒಂದೇ ಅಂತ ನನಗೆ ಗೊತ್ತು. ವೆಂಕಣ್ಣನೂ ನನ್ನ ಮಾತಿಗೆ ಪ್ರತಿ ಹೇಳಲಾರ. ಶಕುಂತಲಳಿಗೆ ನನ್ನ ಮಾತು ಹಿಡಿಸುತ್ತೋ ಇಲ್ವೊ ಅದೇ ಅನುಮಾನ....ಅವಳು ಮೊದಲು ಒಪ್ಪದೇ ಇದ್ದರೂ ನೀವೆಲ್ಲಾ ಸ್ವಲ್ಪ ಬುದ್ಧಿ ಹೇಳಬೇಕು. ಅವಳ

ದುಃಖದ ಕಾವು ನನ್ನಲ್ಲಿ ನುಡಿಸ್ತಾ ಇದೆ. ಇದರಿಂದ ಅವಳ ಮನಸ್ಸಿಗೆ ಸ್ವಲ್ಪ ವಾದರೂ ಶಾಂತಿ ಲಭಿಸೀತು ಅಂತ ನನ್ನ ಭಾವನೆ. ಹೆಣ್ಣಿನ ದೇಹದ ಕೂಗು ಹೃದಯದ ಬಡಿತ ನನಗೆ ಗೊತ್ತು. ಸೀತಳಿಗೂ ಗೊತ್ತು. ಶಕುಂತಲ ಳಿಗೂ ಅದರ ಅರಿವಾಗಿರಬೇಕು. ಶಕುಂತಲಳಿಗೆ ಇನ್ನೂ ಹದಿನೆಂಟು ವರ್ಷ ವಯಸ್ಸು. ಜೀವನದ ಸುಖವನ್ನು ಬಯಸುವ ಕಾಲ. ಕನಸಿನ ಉಯ್ಯಾ ಲೆಯಲ್ಲಿ ತೂಗಾಡುವ ಕಾಲ....!" ಸ್ವಲ್ಪ ಹೊತ್ತು ಮಾತು ನಿಲ್ಲಿಸಿ ಸುತ್ತಲೂ ನೋಡಿದರು. ಮಾತಿನ ಪರಿಣಾಮ ಏನಾಗಿದೆ ಎಂದು ಪರೀಕ್ಷಿಸಿದರು.

ಶಕುಂತಲಳ ಮುಖವು ಬೆವರಿ ಹೋಗಿತ್ತು. ಸೀತಮ್ಮ ಗಂಭೀರಳಾಗಿ ಕುಳಿತಿದ್ದಳು. ವೆಂಕಣ್ಣ ಏನನ್ನೂ ಅರ್ಥ ಮಾಡಿಕೊಳ್ಳಲಾರದೆ ಆಶ್ಚರ್ಯ ಚಕಿತನಾಗಿದ್ದರು. ಸುಬ್ಬಣ್ಣನ ಮುಖದಲ್ಲಿ ಬಯಸಿದ ಬಯಕೆ ಈಡೇರು ವಾಗಿನ ಗೆಲುವಿತ್ತು.

"ನಾನು ಹೇಳುವ ಮಾತು ಧರ್ಮಕ್ಕೆ ವಿರುದ್ಧವಾಗಿರ ಬಹುದು. ಸಮಾಜ ತಿರಸ್ಕರಿಸ ಬಹುದು. ಜನಗಳೂ ನಗಬಹುದು. ಕೆಲವರು ಅನ್ಯಾಯ ವೆಂದು ಕೂಗಬಹುದು. ಆದರೆ ಈಗ ನಾನು ಹೇಳುವುದು ಮಾನವತೆಯ ದೃಷ್ಟಿಯಲ್ಲಿ ಧರ್ಮ. ಹೆಣ್ಣಾಗಿ ಹುಟ್ಟಿ, ಹೆಣ್ಣಿನ ಮನಸ್ಸನ್ನು ಅರಿತು ಹೇಳುವ ಮಾತು....! ಬೆಂದ ಹೃದಯದಿಂದ ನುಗ್ಗಿ ಬರುವ ಕಾದ ಮಾತು....! ನ್ಯಾಯವಲ್ಲದ ನಂಬಿಕೆಯ ಮಾತಿಗೆ ಧರ್ಮವೆಂದು ಹೆಸರಿತ್ತು ಕರೆಯುವುದ ಕ್ಕಿಂತ ಅಧರ್ಮವೆಂದು ಜನ ಇದನ್ನು ಕರೆದರೂ ನ್ಯಾಯವೆಂಬ ನನ್ನ ಮನಸ್ಸು ಕೂಗಿ ಹೇಳ್ತಾ ಇದೆ...ನಿಮಗೂ ಹಾಗೇ ತೋರಬಹುದು....! ....ನನ್ನಲ್ಲಿ ಇಷ್ಟೊಂದು ಪರಿವರ್ತನೆ ಕಂಡು ನಿಮಗೆ ಆಶ್ಚರ್ಯವಾಗಬಹುದು....! ನೋವು, ಅಶಾಂತಿ ಏನನ್ನು ಬೇಕಾದರೂ ಮಾಡಲು ಸಾಧ್ಯ....!" ಮಾತನ್ನು ನಿಲ್ಲಿಸಿದರು.

"ನೀವು ಶಕುಂತಲೆಗೆ ಬೇರೆ ಮದುವೆ ಮಾಡಬೇಕು...ಕಟ್ಟಿದ ಮಾಂಗಲ್ಯಕ್ಕಾಗಿ ಸತ್ತು ಸುಡುಗಾಡಿಗೆ ಹೋಗೋದ್ರಲ್ಲಿ ಯಾವ ಧರ್ಮವೂ ಉದ್ಧಾರವಾಗೋಲ್ಲ...."

"ಮದುವೆ ...!" ರಾಯರು ಆಶ್ಚರ್ಯದಿಂದ ನುಡಿದರು.

"ಶಕುಂತಳಿಗೆ....ಮದುವೆ....!" ಸೀತಮ್ಮ ತನ್ನ ಕಿವಿಯನ್ನು ತಾನೇ ನಂಬಲಿಲ್ಲ. ಶಕುಂತಲ ತಲೆ ಎತ್ತಿ ಅಜ್ಜಿಯನ್ನೊಮ್ಮೆ ನೋಡಿ ತಲೆ ತಗ್ಗಿಸಿ ದಳು. ಏನನ್ನೋ ಹೇಳ ಬಯಸಿದವಳು ನಾಲಿಗೆಯ ಮುಷ್ಕರದಿಂದ ಹಾಗೆಯೇ ಸುಮ್ಮನಾದಳು.

"ಹೆಣ್ಣು ಹೆಣ್ಣಾಗಿ ಹುಟ್ಟಿ....ಗಂಡನೊಡನೆ ಸಂಸಾರ ಸುಖ ಅನುಭವಿಸದೆ ಬದುಕಿ ಉಳಿಯಲಾರಳು. ಹೆಣ್ಣಾಗಿ ಹುಟ್ಟಿದ ಪ್ರತಿಯೊಂದು ಪ್ರಾಣಿಗೂ ಇದರ ಅನುಭವವಿದೆ. ಈ ಶುಭಕಾರ್ಯವನ್ನು ಆದಷ್ಟು ಬೇಗ ನೆರವೇರಿಸಿಬಿಡಿ....ಇಲ್ಲದೆ ಹೋದರೆ ಅವಳು ಸಾಯಲು ಅನುಮತಿ ಕೊಡಿ.... ಅವಳನ್ನು ಹೀಗೇ ಅಂತೂ ಬಿಡಬೇಡಿ....ಹೆಣ್ಣು ಕಣ್ಣೀರು ಸುರಿಸಿದರೆ ಮನೆ ಹಾಳಾಗಿ ಹೋಗುತ್ತೆ. ಇವಳು ಯಾವಾಗ್ಲೂ ಅಳ್ತಾ ಇರೋದನ್ನ ನೋಡಲಾರೆ ವೆಂಕಣ್ಣ....ಮದ್ವೆ ಆದ್ರೆ ಹಿಂದಿನದನ್ನು ಮರೆತು ಸುಖವಾಗಿರ್‍ತಾಳೆ.... ನಾನು ಸತ್ತು ಹೋಗ್ತೀನಿ; ಆದ್ರೂ ಪರವಾಗಿಲ್ಲ ಅವಳು ಸುಖವಾಗಿದ್ರೆ ನನ್ನ ಆತ್ಮಕ್ಕೆ ಶಾಂತಿ ಲಭಿಸುತ್ತೆ. ಬದುಕಿದ್ದಾಗಂತ್ಲೂ ಇದು ಸಿಕ್ಕಲಿಲ್ಲ. ಅದೃಷ್ಟ ಮುನಿದಿತ್ತು." ಶಕುಂತಳನ್ನು ಹತ್ತಿರಕ್ಕೆ ಕರೆದರು. "ಬಾಮ್ಮ ಶಕುಂತಲ....ಬಾಮ್ಮ ಎಲ್ಲಿ ಸ್ವಲ್ಪ ನಗಮ್ಮ....ನೀನು ನಕ್ಕಿದ್ದು ನೋಡಿ ನಾನು ಸಾಯ್ತೀನಿ....ನೀನು ಯಾವಾಗ್ಲೂ ನಗ್ತಾ ನಗ್ತಾನೆ ಇರ್‍ಬೇಕು ಅಂತ ನನ್ನಾಸೆಯಿತ್ತು....ಅದು ಆಗ್ಲಿಲ್ಲ. ಹೋಗ್ಲಿ ನಾನು ಸತ್ತ ಮೇಲಾದರೂ ಸುಖವಾಗಿರಮ್ಮ....ಸುಖವಾಗಿರಲು ಪ್ರಯತ್ನಿಸ್ತಿಯಾ....? ಇಲ್ಲ ಅನ್ನಬೇಡ ಶಕುಂತಲ....ಸ್ತ್ರೀಗೆ ಗಂಡಿನ ಆಸರೆ ಬೇಕೇಬೇಕು....ನೀನು ನೊಂದುಕೊಂಡರೆ....ನನ್ನ ಆತ್ಮಕ್ಕೆ ಶಾಂತಿ ಲಭಿಸೊಲ್ಲ....ಶಕುಂತಲಾ....!" ಆಸೆಯಿಂದ ಅವಳತ್ತ ನೋಡಿದರು. ಶಕುಂತಲ ನುಡಿಯದೆ "ಅಜ್ಜೀ....!" ಕೂಗಿ ಅವರ ಎದೆಯ ಮೇಲೆ ತಲೆ ಇಟ್ಟಳು.

ಅಜ್ಜಿಯ ಕೈಯ ಬೆರಳುಗಳು ಅವಳ ಕೂದಲಿನೊಡನೆ ಆಡತೊಡಗಿದವು.

"ನನ್ನ ಮನಸ್ಸಿನಲ್ಲೂ ಇದೇ ಇತ್ತು ಸಾವಿತ್ರಮ್ಮ. ಆದರೆ ಹೇಳುವ ಧೈರ್ಯವಿರಲಿಲ್ಲ. ಇದು ಧರ್ಮವಿರುದ್ಧವೂ ಅಲ್ಲ. ಪಾಪಕಾರ್ಯ ಮೊದಲೇ ಅಲ್ಲ. ತಾಳಿ ಕಟ್ಟಿದರೆ ಮದ್ವೆ ಮುಗೀತು ಅನ್ನೋದು ಶಾಸ್ತ್ರ ರೀತ್ಯಾ ನಿಜವಾದರೂ, ಧರ್ಮ, ನ್ಯಾಯ, ಮಾನವತೆಯ ದೃಷ್ಟಿಯಲ್ಲಿ ಮದುವೆ ಪೂರ್ತಿಯಾಯಿತೆಂದು ಅಲ್ಲ. ಹೆಣ್ಣು ಗಂಡು ಒಂದಾಗಿ ಜೀವದಲ್ಲಿ ಜೀವ ಬೆರೆತು ಮನಸ್ಸು ದೇಹಗಳು ಒಂದಾಗಿ ಕೂಡಿ ಸಂಸಾರ ನಡೆಸಿದಾಗಲೇ ಅವರು ಗಂಡ ಹೆಂಡಿರು. ಅಂತಹ ಸುಖಜೀವನದ ಬೆಸಗೆಯೇ ಮದುವೆ. ಈಗ ಈ ಬೆಸಗೆ ಬಿಟ್ಟು ಹೋಗಿ ಬೇರೆ ಬೇರೆಯಾಗುವುದರಿಂದ ಪುನಃ ಬೆಸೆದು ಒಂದಾಗಿಸಿದರೆ ತಪ್ಪೇನಿಲ್ಲ....ಹೀಗೆ ಮಾಡೋದೇ ಸರಿ....ಅಂತ ನಂಗೂ ಅನ್ನಿಸುತ್ತೆ." ಸುಬ್ಬಣ್ಣ ಬಹಳ ಅನುಮಾನಿಸಿ ತನ್ನ ಮನಸ್ಸಿನ ಇಂಗಿತವನ್ನು ತಿಳಿಸಿದ.

"ಹ್ಯಾಗಾದ್ರೂ ಸರಿ....! ನಮ್ಮ ಶಕುಂತಲ ಸುಖವಾಗಿದ್ರೆ ಸಾಕು.... ನಾನು ಅಷ್ಟೇ ಬಯಸೋದು ..." ಸೀತಮ್ಮ ನುಡಿದಳು.

"ಆಗಲಮ್ಮ ನಿನ್ನ ಮಾತಿನಂತೇ ಆಗಲಮ್ಮ...." ರಾಯರು ತಾಯಿಯ ಕೈಯನ್ನು ಕಣ್ಣಿಗೆ ಒತ್ತಿಕೊಂಡರು.

"ನೂರು ವರ್ಷ ಸುಖವಾಗಿ ಬಾಳಪ್ಪ...." ತಾಯಿ ಹರಸಿದರು.

ಶಕುಂತಲಳ ಮುಖವನ್ನು ಎದೆಯಮೇಲಿನಿಂದ ಎತ್ತಿ ತನ್ನ ಮುಖದ ಹತ್ತಿರ ತಂದುಕೊಂಡರು. ಐದು ನಿಮಿಷ ಅವಳ ಮುಖವನ್ನೇ ದೃಷ್ಟಿಸಿದರು. ಕೆನ್ನೆಯನ್ನು ಸವರಿ, ಮುಂಗುರುಳನ್ನು ತೀಡಿ ಮಗುವಿನಂತೆ ಮುದ್ದಿಸಿ ಕಣ್ಣೀರು ಕರೆದರು.

"ಸುಖವಾಗಿ ಬಾಳು....ಶಕುಂತಲ...." ಹೃದಯದ ಒಳತೋಟಿ ಕೂಗಿ ಹೇಳಿತು.

ಸಾವಿತ್ರಮ್ಮನ ಕಣ್ಣಲ್ಲಿ ತೃಪ್ತಿ ಮಿಣಗುತ್ತಿತ್ತು.

ಸುತ್ತಲೂ ಕಣ್ಣನ್ನು ಹರಿಸಿ ಎಲ್ಲರನ್ನೂ ಕಣ್ಣುತುಂಬಾ ನೋಡಿದರು.

ಸೀತಮ್ಮ "ಅಮ್ಮಾ..." ಎಂದು ಅರಚಿ ಅತ್ತೆಯನ್ನು ಬಾಚಿ ತಬ್ಬಿಕೊಂಡಳು.

ಅಜ್ಜಿ ಕೈಸನ್ನೆ ಮಾಡಿ ಅಳಬೇಡವೆಂದು ಹೇಳಿದರು.

ಸಾವಿತ್ರಮ್ಮ ನಿಶ್ಚೇಷ್ಟಿತರಾಗಿ ಪೂರ್ಣ ಎರಡು ದಿನ ಮಲಗಿದ್ದರು.

ಮೂರನೆ ದಿನ ಏಕಾದಶಿ.

ಸಾವಿತ್ರಮ್ಮನವರ ತುಟಿ ಸ್ವಲ್ಪ ಅಲುಗಾಡಿತು. ಕಣ್ಣು ಅಡಿಗೆ ಮನೆಯತ್ತ ನಾಟಿತ್ತು.

ರಾಯರು ಮೂಕರಾಗಿ ಕುಳಿತಿದ್ದರು. ಸುಬ್ಬಣ್ಣ ಸಾವಿತ್ರಮ್ಮನವರ ಕಣ್ಣಿನ ನೋಟದ ಬಯಕೆಯನ್ನು ಗ್ರಹಿಸಿದ.

"ಸೀತಮ್ಮ....ಗಂಗಾಜಲವನ್ನು ತಗೊಂಡು ಬಾ...."

ರಾಯರು ತಾಯಿಯ ತಲೆಯನ್ನು ತಲೆದಿಂಬಿನಿಂದ ತಮ್ಮ ತೊಡೆಯ ಮೇಲೆ ಇಟ್ಟುಕೊಂಡರು. ಗಂಗೆಯನ್ನು ಒಡೆದು ಸುಬ್ಬಣ್ಣ ರಾಯರ ಕೈಗೆ ಕೊಟ್ಟ. ಒಂದು ಚಮಚ ತಾಯಿಯ ಬಾಯಿಗೆ ಗಂಗೆಯನ್ನು ಹಾಕಿದರು. ತಾಯಿಯ ಕಣ್ಣಲ್ಲಿ ನೀರು ಸುರಿಯುತ್ತಲೇ ಇತ್ತು.

ಸುಬ್ಬಣ್ಣ ಕಣ್ಣೀರನ್ನು ಒರಸಿದ.

ಸಾವಿತ್ರಮ್ಮನವರ ಕಣ್ಣಿನ ನೋಟ ಪಕ್ಕದಲ್ಲಿ ಕುಳಿತಿದ್ದ ಶಕುಂತಲಳತ್ತ ಸರಿಯಿತು. ಕೈಸನ್ನೆಮಾಡಿ ಹತ್ತಿರ ಕರೆದರು. ನಿಶ್ಚಲ ಕೈಯನ್ನು

ಮೇಲಕ್ಕೆ ಎತ್ತಿ ಆಕೆಯ ಕಣ್ಣೀರನ್ನು ಒರಸಿದರು. ಮಗನ, ಸೊಸೆಯ ಕಡೆ ಕಣ್ಣು ಹೊರಳಿಸಿ ಅಳಬೇಡಿರೆಂದು ಸನ್ನೆ ಮಾಡಿದರು.

ಕರಾಳ ಮೌನ ವಿಕಟವಾಗಿ ನರ್ತಿಸುತ್ತಿತ್ತು.

ಅಜ್ಜಿಯ ಕಣ್ಣು ಮಿಂಚಿತು. ತುಟಿಗಳು ಅಲುಗಾಡಿದವು. ರಾಯರು ಕಿವಿಯನ್ನು ತಾಯಿಯ ಬಾಯಿಯ ಹತ್ತಿರ ಹಿಡಿದರು.

" ಸುಖ....ವಾ....ಗಿ....ರಿ....!" ತೊದಲಿದರು.

ಕತ್ತು ವಾಲಿತು. " ಅಜ್ಜೀ...!" ಅರಚಿದಳು ಶಕುಂತಲ. ಕೈ ಒಮ್ಮೆಗೇ ಶೀತಲವಾಗಿತ್ತು. " ಅಮ್ಮಾ..." ದುಃಖದಿಂದ ಅರಚಿದರು ರಾಯರು. " ಅಮ್ಮಾ...." ಎದೆಯ ಮೇಲೆ ಬಿದ್ದಳು ಸೀತಮ್ಮ. ಬೀದಿಯ ಜನವೆಲ್ಲಾ ಈ ದುಃಖವಾರ್ತೆಯನ್ನು ಕೇಳಿ ಕಣ್ಣೀರು ಸುರಿಸಿದರು.

ನಡೆಯಬೇಕಾಗಿದ್ದ ದಹನಕ್ರಿಯೆಗಳೆಲ್ಲಾ ಸಾಂಗವಾಗಿ ನೆರವೇರಿದವು.

ಮನೆಗೆ ಹಿಂತಿರುಗಿದ ವೆಂಕಟರಾಯರು ತಾಯಿಸತ್ತ ಜಾಗದಲ್ಲಿ ದೀಪ ಹಚ್ಚಿಟ್ಟು ಅದು ಉರಿಯುವುದನ್ನು ನೋಡುತ್ತ ಮೌನವಾಗಿ ಕುಳಿತು ಬಿಟ್ಟರು. ಎಲ್ಲರನ್ನೂ ತ್ಯಜಿಸಿ ಹೋದ ತಾಯಿಯ ಆತ್ಮ ಅಲ್ಲಿ ದೇದೀಪ್ಯಮಾನವಾಗಿ ಪ್ರಜ್ವಲಿಸುತ್ತಿರುವಂತೆ ಅವರಿಗೆ ತೋರುತ್ತಿತ್ತು. ದೀಪ ನಂದಿ ಹೊಗೆಯಾಡತೊಡಗಿದಾಗ " ಸುಬ್ಬಣ್ಣಾ....!" ರಾಯರು ಕರಾಳವಾಗಿ ಕೂಗಿದರು.

" ಅವನ್ನ ಏನು ಮಾಡಿದ್ರೂ ಪಾಪ ಬರೋಲ್ಲ ಸುಬ್ಬಣ್ಣ....! ನನ್ನ ಮನೆಯನ್ನೇ ಹಾಳುಮಾಡಿಬಿಟ್ಟ. ಶಕುಂತಲಳ ಜೀವನವನ್ನು ದುಃಖಮಯ ಮಾಡ್ದ ...ನನ್ನ ತಾಯಿಯ ಪ್ರಾಣವನ್ನು ಹೀರಿದ....! ಅವನ್ನ.... ಏನುಮಾಡ್ಲಿ ಅನ್ನಿಸಿಬಿಟ್ಟಿದೆ....ಸುಬ್ಬಣ್ಣ....! ಹೆಂಡ್ತೀನ ಮನೆ ಬಿಟ್ಟು ಓಡ್ಸಿದ ಪಾಪಿ ಅಂತ ಕೇಸು ಹಾಕಿ ನರಳಿಸಬೇಕು....ಏನಂತೀ....? ಅವ ಮರ್ಯಾದೆಯಿಂದ ಒದ್ದಾಡಬೇಕು....! ಆಗ್ಲೇ ನಂಗೆ ಸ್ವಲ್ಪ ಸಮಾಧಾನ...." ದುಃಖದ ಜ್ವಾಲೆ ಎತ್ತಲೊ ಸಾಗಿತ್ತು.

" ಅದು ಸರಿಯಲ್ಲ ವೆಂಕಟರಾಯ ಕೆಸರಿನಲ್ಲಿ ಕಲ್ಲು ಎತ್ತಿಹಾಕಿ ಮುಖದ ಮೇಲೆ ಸಿಡಿಸಿಕೊಂಡ ಹಾಗಾಗುತ್ತೆ! ಶಕುಂತಲಳ ನಡತೆ ಸರಿಯಾಗಿಲ್ಲವೆಂದು ಸುಲಭವಾಗಿ ತಪ್ಪಿಸಿಕೊಳ್ಳಬಹುದು ...ಎದುರಿಗೇ ಇದನ್ನು ಆಡಿ ಓಡಿಸಿದವರು ಏನು ಮಾಡಲು ಹೇಸೊಲ್ಲ....! ಸುಬ್ಬಣ್ಣ..."

" ನಡತೆ ಸರಿಯಾಗಿಲ್ಲ....! ಹಾಗೆ ಅನ್ನೊ ಬಾಯ್ನ ಸಿಗ್ದುಹಾಕಿ

ಬಿಡ್ತೇನಿ....ನಮ್ಮ ಶಕುಂತಲ....! ಚಿನ್ನದಂತಾ ಹುಡ್ಗಿ...." ಕೋಪದಿಂದ ಸಿಡಿದೆದ್ದರು ರಾಯರು. "ಅವನಿಗೆ ಪ್ರಾಯಶ್ಚಿತ್ತವಾಗಲೇಬೇಕು...."

"ಆಗುತ್ತೆ. ಇವತ್ತಲ್ಲ ನಾಳೆ ಸತ್ಯವಾಗ಼್ೂ ಆಗುತ್ತೆ. ದೇವರು ಶಿಕ್ಷಿಸ್ತಾನೆ. ಕಲಿಗಾಲ ಇದು ರೊಟ್ಟಿ ಮಗಚಿ ಹಾಕಿದ ಹಾಗೆ. ಪಾಪ, ಪುಣ್ಯದ ಫಲ ಇಲ್ಲೇ ತೋರ್ಸಿಬಿಡ್ತಾನೆ ದೇವರು...."

"ಕೆಟ್ಟೋರನ್ನ ದೇವರು ಶಿಕ್ಷಿಸಲ್ಲಪ್ಪ....ಎಲ್ಲಾದಕ್ಕೂ ಹೆದ್ರಿ ಸಾಯ್ತಾ ಇರ್ತೀವಲ್ಲ....ನಮ್ಮಂಥೋರು....ಅವರ್ನೆ ದೇವರು ಗೋಳಾಡಿಸ್ತಾನೆ...." ರಾಯರು ನೀಳ ಉಸಿರನ್ನು ಬಿಟ್ಟರು.

"ದುಃಖದಿಂದ ಏನೇನೊ ನುಡೀತಾರೆ ಸುಬ್ಬಣ್ಣ....ಸರಿಯಾಗಿ ಅವರ್ನ ನೋಡ್ಕೊ....ಹುಚ್ಚುಚ್ಚಾಗಿ ಏನಾದ್ರೂ ಮಾಡಿಬಿಟ್ಟಾರು...." ಸೀತಮ್ಮ ಶಂಕೆಯಿಂದ ಕಂಪಿಸಿದಳು.

"ನೀನು ಹೇಳೋದು ಸರಿಅನ್ನು ಸುಬ್ಬಣ್ಣ....ಆ ಪಾಪಿ ಜನ ಏನು ಮಾಡಲೂ ಹೇಸಲ್ಲ. ನಮ್ಮನ್ನ ನಾವೇ ಅಗ್ಗ ಮಾಡಿಕೊಂಡ ಹಾಗಾ ಗುತ್ತೆ." ರಾಯರು ಯೋಚಿಸಿ ಸುಬ್ಬಣ್ಣನ ಮಾತನ್ನು ಅನುಮೋದಿಸಿ ದರು.

ಯಾರೊ ಅನ್ನಮಾಡಿ ತಂದಿಟ್ಟರು. ವೆಂಕಟರಾಯರು ತಾಯಿ ಸತ್ತ ಜಾಗದಲ್ಲಿ ಒಂದು ಬಟ್ಟಲಿನಲ್ಲಿ ಅನ್ನವನ್ನು ಇನ್ನೊಂದರಲ್ಲಿ ನೀರನ್ನು ಇಟ್ಟು ಬಂದರು.

"ಹಿರೀರ ಸಾವಿಗೆ ಹಾಗೆಲ್ಲಾ ದುಃಖಿಸಬಾರ್ದು. ಅವರು ಎಂದೂ ನಾವು ಅಳೋದನ್ನ ಸಹಿಸೊಲ್ಲ....ನಗ್ತಾ ನಗ್ತಾ ಇದ್ರೇ ಅವರ ಆತ್ಮಕ್ಕೆ ತೃಪ್ತಿ." ಸುಬ್ಬಣ್ಣ ಮೊದಲಾದವರು ಬಹಳ ಬಲವಂತ ಮಾಡಿದುದರಿಂದ ಊಟದ ಶಾಸ್ತ್ರಮಾಡಿ ಎದ್ದರು.

ಸೀತಮ್ಮ, ಶಕುಂತಲರಿಗೂ ಅನ್ನ ಗಂಟಲಲ್ಲಿ ಇಳಿಯಲಿಲ್ಲ. ಕೈ ಮುಸರೆ ಮಾಡಿ ಎದ್ದರು.

ಊಟದ ಶಾಸ್ತ್ರ ಮುಗಿದ ಮೇಲೆ ಮುಂದಿನ ಕರ್ಮದ ವಿಷಯದಲ್ಲಿ ರಾಯರೊಡನೆ ಬಹು ಹೊತ್ತು ಮಾತನಾಡಿದ ಸುಬ್ಬಣ್ಣ.

"ಹೂಂ! ಹಾಗೇ ಮಾಡು ನಾಳೆ ಅಷ್ಟಾಗಿ ಏನೂ ಕೆಲ್ಸವೂ ಇಲ್ಲ. ಸರಕಾರಿ ತ್ಯಾಪೇದಾರಿಗೆ ಸಿಕ್ಕಿದಮೇಲೆ ಯಾವಾಗ ಬೇಕು ಅಂದ್ರೆ ಆವಾಗ ಬರೋಕ್ಕೆ ಎಲ್ಲಿ ಆಗುತ್ತೆ!" ಸುಬ್ಬಣ್ಣ ನುಡಿದ.

ಬೆಳಗ್ಗೆ, ಬೇಗನೆ ಬರುತ್ತೇನೆ ಎಂದು ಹೇಳಿ ಹೋದ ರಾಯರು ಸಂಜೆ ಕಳೆದು ರಾತ್ರಿಯಾದ ಮೇಲೆ ಮನೆಗೆ ಬಂದರು. ಬಂದವರೇ ದೊಪ್ಪೆಂದು ಮೂಲೆಯಲ್ಲಿ ಕುಸಿದು ಬಿದ್ದರು. ನಿಸ್ತೇಜವಾಗಿತ್ತು. ಅಶಾಂತಿ ಕಣ್ಣಲ್ಲಿ ಕರಾಳವಾಗಿ ನರ್ತಿಸುತ್ತಿತ್ತು.

"ಯಾಕೆ...? ಹೀಗಾಗಿದ್ದೀರಿ....?" ಸೀತಮ್ಮ ಗಾಬರಿಯಿಂದ ಪ್ರಶ್ನಿಸಿದಳು. ವೆಂಕಟರಾಯರು ಉತ್ತರ ಕೊಡಲಿಲ್ಲ.

"ಸುಮ್ನೆ ಯೋಚಿಸಿದ್ರೆ ಹೋದೋರು ಬರ್‍ತಾರಾ....ವೆಂಕಟರಾಯ ? ಸಮಾಧಾನ ತಂದುಕೊಳ್ಳಬೇಕಪ್ಪ. ನಂಗೂ ದುಃಖ ಆಗ್ತಾ ಇಲ್ವೆ ?.... ಸುಮ್ನೆ ದುಃಖ ಅಂತ ತಲೆಮೇಲೆ ಕೈಹೊತ್ತು ಕುಳಿತ್ರೆ ಏನಾಯ್ತು ಹೇಳು ..." ಸುಬ್ಬಣ್ಣ ಸಮಾಧಾನವನ್ನು ಹೇಳಿದ.

ಬಿರಗಣ್ಣಿನಿಂದ ಸುಬ್ಬಣ್ಣನನ್ನು ನೋಡಿದರು ರಾಯರು.

"ಸರ್ವನಾಶ ಆಗಿಹೋಯ್ತು ಸುಬ್ಬಣ್ಣ... ಹೆಂಡ್ತಿ ಮಕ್ಕಳ ಕೈಗೆ ಚಿಪ್ಪು ಕೊಡೊ ಹಾಗಾಯ್ತಲ್ಲೋ....? ಏನು ಕೆಲ್ಸ ಮಾಡಿಬಿಟ್ಟೆನೊ ನಾನು ...! ಎಚ್ಚರಿಕೆಯಿಂದಿರು ...ಎಚ್ಚರಿಕೆಯಿಂದಿರು ಅಂತ ಅವತ್ನಿಂದಾ ಹೇಳ್ತಾ ಇದ್ರು ನಮ್ಮ ಆಫೀಸರು ...ನಾನು ಎಚ್ಚರಾಗೇ ಇದ್ದೀನಿ ಅಂತ ತಲೆ ಮೇಲೆ ಕಲ್ಲನ್ನು ಹಾಕಿಕೊಂಡು ...ಹೆಂಡ್ತಿ ಮಕ್ಕಳ ಮೇಲೂ ಕಲ್ಲನ್ನು ಹಾಕಿಬಿಟ್ಟೆನಲ್ಲೋ....! ನಾಳೆ ಬೆಳಗ್ಗೆ ದುಡ್ಡು ಹೊಂಚದೆ ಹೋದ್ರೆ ಕೈಗೆ ಬೇಡಿ ಬೀಳುತ್ತೆ....ನಾನು ಹುಟ್ಟಿದ್ದಕ್ಕೆ ಸಾರ್ಥಕವಾಯ್ತು....! ಅದೊಂದು ಆದ್ರೆ....!" ರಾಯರ ಪ್ರತಿಯೊಂದು ಮಾತಿನಲ್ಲೂ ಹೃದಯದ ನೋವು ಮಿಡಿದಿತ್ತು.

ಸೀತಮ್ಮ ಭಯದಿಂದ ನಡುಗುತ್ತಿದ್ದಳು. ನಾಲಿಗೆ ಸರಿದಾಡಿತೇ ವಿನಃ ಮಾತು ಹೊರಗೆ ಬರಲಿಲ್ಲ.

"ಅದೇನಣ್ಣ....ನೀನು ಹೇಳ್ತಾ ಇರೋದು....! ನಂಗೆ ಅರ್ಥವಾಗ್ತಾ ಇಲ್ಲ....!" ಗಾಬರಿಯಿಂದ ತಂದೆಯ ಸನಿಹದಲ್ಲಿ ನಿಂತು ಕಾತುರದಿಂದ ಕೇಳಿದಳು ಶಕುಂತಲ.

"ಸ್ವಲ್ಪ ಸಮಾಧಾನ ತಂದುಕೋ ವೆಂಕಟರಾಯ....ಸುಮ್ನೆ ಉದ್ರೇಕವಾದ್ರೆ ಏನು ಪ್ರಯೋಜನ ಹೇಳು....ಏನಾಗಿದೆ ಹೇಳು....ಯೋಚಿ

ಸೋಣ....ಏನಾದ್ರೂ ಹಣದಲ್ಲಿ....ಹೆಚ್ಚು ಕಡಿಮೆ....!" ಮಾತನ್ನು ಪೂರ್ಣವಾಗಿ ಅಂತ್ಯಗೊಳಿಸಲಾರದೆ ತೇಲಿಸಿದ.

"ಐದು....ಸಾವಿರ....!" ಜೋರಾಗಿ ನುಡಿದರು ರಾಯರು.

"ಐ....ದು....ಸಾವಿರ....!" ಸೀತಮ್ಮ ತತ್ತರಿಸಿದಳು.

"ಐದು ಸಾವಿರ....! ಯಾರಾದ್ರೂ ಕದ್ದುಬಿಟ್ರಾ...." ಶಕುಂತಲ ಪ್ರಶ್ನಿಸಿದಳು. ಸುಬ್ಬಣ್ಣನ ಮುಖ ಗಂಭೀರವಾಗಿತ್ತು. "ದೈವ ಮುನಿದಾಗ ಎಲ್ಲವೂ ಹೀಗೆ....!" ಭಾರವಾದ ಧ್ವನಿಯಲ್ಲಿ ನುಡಿದ.

"ಮನಸ್ಸು ನೆಮ್ಮದಿ ಇಲ್ಲದಾಗ ಇಂತೋದು ಆಗೋದು ವಾಸ್ತವ. ....ಆದ್ದು ಆಗಿಹೋಯ್ತು....ಮುಂದೆ....?!" ಸುಬ್ಬಣ್ಣ ಪ್ರಶ್ನಿಸಿದಾಗ ರಾಯರು ಇದ್ದಕ್ಕಿದ್ದ ಹಾಗೆಯೇ ನಕ್ಕರು. "ಕೈ ಕೋಳ....!....!!" ನುಡಿದರು. ಮಗಳ ಕೆನ್ನೆಯನ್ನು ಸವರಿದರು.

"ಸುಮ್ನಿರಿ ಅಂದ್ರೆ!....ಏನೇನೋ ನುಡೀ ಬೇಡಿ...ಬಾಯಿಗೆ ಬಂದ ಹಾಗೆ....!" ಸೀತಮ್ಮನ ಒಡಲು ದುಃಖದಿಂದ ತುಂಬಿದ್ದರೂ ಅಂತಹ ಕ್ರೂರ ಮಾತನ್ನು ಕೇಳಲು ಶಕ್ತವಾಗಿರಲಿಲ್ಲ.

"ಲೆಖ್ಖಾ ಎಲ್ಲಾ ಸರಿಯಾಗಿದೆ. ದುಡ್ಡಿನಲ್ಲಿ ಮಾತ್ರ ಐದು ಸಾವಿರ ಕಡಿಮೆ ಇವೆ. ಎರಡು ಮೂರು ಸಾರಿ ಪರೀಕ್ಷಿಸಿ ನೋಡ್ದೆ. ಸೀತಾರಾಮಯ್ಯ ಬಂದು ಕ್ಯಾಷನ್ನು ಪರೀಕ್ಷಿಸಿ ನೋಡಿದರು. ....ಐದು ಸಾವಿರ ಇಲ್ಲ. ಬಹುಶಃ ಕಳ್ಳತನವಾಗಿಲ್ಲ. ಆಗಲು ಆಸ್ಪದವೇ ಇಲ್ಲ. ನನ್ನ ಹತ್ತಿರವೇ ಯಾವಾಗಲೂ ಬೀಗದ ಕೈ ಇರುತ್ತೆ. ಇಂದು ಸಂಬಳ ಹಂಚುವಾಗ ಎಲ್ಲೋ ಹೊರಟು ಹೋಗಿರಬೇಕು. ಸಂಬಳದ ಹಣ ಜಾಸ್ತಿ ಬಂದಿದ್ರೆ ಕಳ್ಸಿ ಅಂತ ಯಾವ ಆಫೀಸಿಗೂ ಹೇಳಿ ಕಳ್ಸೋ ಹಾಗಿಲ್ಲ. ಹಾಗೆ ಕಳ್ಸಿದ್ರೆ ನನ್ನ ಮಾನ ಹೋಗುತ್ತೆ. ಮೇಲಿನ ಆಫೀಸರಿಗೆ ತಿಳಿದ್ರೆ ಆ ತಕ್ಷಣ ಕೈಕೋಳ ಹಾಕಿಸ್ತಾರೆ. ನಾನೇ ಕದ್ದದ್ದು ಅಂತ. ಅದಲ್ದೆ ಇವತ್ತು ತಿಂಗಳ ಕೊನೆ ದಿನ. ಈ ತಿಂಗಳ ಲೆಖ್ಖಾ ಇವತ್ತು ಪೂರೈಸಬೇಕು. ಕ್ಯಾಷು ಸರಿಯಾಗಿರಬೇಕು. ನಾಳೆ ಆಫೀಸಿಗೆ ಹೋಗೋದ್ರಲ್ಲಿ ಹಣ ಒದಗಿಸಿದ್ರೆ....ನನ್ನ ಮಾನ ಉಳಿಯುತ್ತೆ....ಇಲ್ಲದಿದ್ರೆ....ನಮ್ಮ ಟ್ರೆಜರಿ ಆಫಿಸರ್ ಎಷ್ಟೇ ಒಳ್ಳೇವ್ರು ಆದ್ರೂ ಮೇಲಕ್ಕೆ ತಿಳಿಸಬೇಕಾಗುತ್ತೆ....ಅವರೂ ತುಂಬಾ ವಿಷಾದದಿಂದ ನನ್ನ ಕೂಡ ಹೇಳಿದ್ರು....ಈಗ ಏನು ಮಾಡೋದು ಸುಬ್ಬಣ್ಣ....! ಎಲ್ಲಿ ದುಡ್ಡು ತರೋದು. ಅಷ್ಟು ತುರ್ತಾಗಿ ಯಾರು ಸಾಲ ಕೊಡ್ತಾರೆ....? ಕೇಳೋದು ತಾನೆ ಯಾರನ್ನು....?! ಹುಟ್ಟಿದಾಗ್ನಿಂದ ಒಂದು ಕಾಸು ಇನ್ನೊಬ್ಬರಲ್ಲಿ

ಸಾಲ ಕೇಳಿಲ್ಲ...ಈಗ ಹ್ಯಾಗೆ ಇಷ್ಟುದ್ದ ಶರೀರಾನ ಗೇಣುದ್ದ ಮಾಡಿಕೊಂಡು ಕೇಳೋದು....?! ನನ್ನಿಂದ ಇನ್ನೊಬ್ಬರಿಗೂ ಸುಖವಿಲ್ಲ...." ನುಡಿಯುವಾಗ ಹೃದಯ ಸುಟ್ಟು ಹೊಗೆಯಾಡುತ್ತಿತ್ತು.

" ಐದು ಸಾವಿರ....! ಎಲ್ಲಿಂದ ತರುವುದು....!" ಸೀತಮ್ಮನ ಮನಸ್ಸು ಈ ಸಮಸ್ಯೆಯನ್ನು ಬಿಡಿಸಲಾರದಾಗಿತ್ತು.

" ನನ್ನ ಒಡವೆ ಮಾರಿದ್ರೆ ಎಷ್ಟು ಬರಬಹುದು ...ಸುಬ್ಬಣ್ಣ...." ಶಕುಂತಲ ಗಂಭೀರವಾಗಿ ಪ್ರಶ್ನಿಸಿದಳು.

ಸೀತಮ್ಮನ ಕಣ್ಣಲ್ಲಿ ಗೆಲುವು ಚಿಮ್ಮಿತು.

" ನನ್ನ ಒಡವೇನೂ ಮಾರಿದ್ರೆ ಅಷ್ಟು ದುಡ್ಡು ಬರಬಹುದು ಅಲ್ವೆ ಸುಬ್ಬಣ್ಣ....? ಬರುತ್ತೆ ಸುಬ್ಬಣ್ಣ....ನಿಜವಾಗ್ಲೂ ಬರುತ್ತೆ....ಈಗ್ಲೆ ತಗೊಂಡು ಹೋಗಿ ದುಡ್ಡು ತಂದುಬಿಡಪ್ಪ." ಗಂಡನ ಉತ್ತರವನ್ನು ನಿರೀಕ್ಷಿಸದೆ ನುಡಿದಳು.

" ನನ್ನ ಸುಖಕ್ಕಾಗಿ ನಿಮ್ಮನ್ನು ಲೂಟಿ ಮಾಡಲಾರೆ...." ರಾಯರು ಕೂಗಿದರು. "ಒಡವೆ ನಂಗೆ ಬೇಡ. ನಾನು ಜೈಲಿಗೆ ಹೋದ್ರೂ ಸರಿ. ಇದ್ದು ಯಾವ ರಾಜ್ಯ ಆಳಬೇಕಾಗಿದೆ....!"

"ನಿನ್ನ ಆಸ್ತೀನಾ ನಾನು ಕಿತ್ತುಕೊಳ್ಳಲಾರೆ ಶಕುಂತಲಾ.... ಹೆಂಗ್ಸನ್ನು ಕಷ್ಟಕಾಲದಲ್ಲಿ ಕೈ ಹಿಡಿಯೋದು ಈ ಒಡವೆ....! ಇದನ್ನ ನಾನು ಸುಲಿದು ಕೊಳ್ಳಲಾರೆ....ನನ್ನ ಅದೃಷ್ಟವಿದ್ದ ಹಾಗೆ ಆಗ್ಲಿ. ನೀವು ಇದನ್ನು ಮನಸ್ಸಿಗೆ ಹಚ್ಚಿಕೊಳ್ಳಬೇಡಿ...." ಇನ್ನು ಹೇಳುವುದರಲ್ಲಿದ್ದರು ರಾಯರು.

" ಸಾಕು ಸುಮ್ನಿರು ವೆಂಕಟರಾಯ ಬಾಯಿಗೆ ಬಂದಹಾಗೆ ಮಾತ್ನಾಡ ಬೇಡ. ಕಷ್ಟಕಾಲದಿಂದ ಹ್ಯಾಗೊ ತಪ್ಪಿಸಿಕೊಳ್ಳೋದು ಬಿಟ್ಟು ಒಡ್ವೆ ಬೇಡ್ವಂತೆ....! ಒಡ್ವೆ....! ಬೇಡದಿದ್ರೆ ಏನ್ಮಾಡ್ತಿ....?....ನಾವು ಬದುಕಿದ್ದೂ ನೀನು ಜೈಲಿಗೆ ಹೋಗಲಾರೆ...." ಸುಬ್ಬಣ್ಣ ಸಿಟ್ಟಾದ.

" ಗಂಡನ ಕಷ್ಟಕಾಲಕ್ಕೆ ಆಗದ ಒಡವೆ ಇದ್ದೇನು ಸಾರ್ಥಕ.... ತಗೊಳ್ಳಿ ಸುಬ್ಬಣ್ಣ....ಪೆಟ್ಟಿಗೇಲಿ ಎಲ್ಲಾ ಇದೆ." ಬೀಗದ ಕೈಯನ್ನು ಅವನತ್ತ ಎಸೆದಳು.

ಸುಬ್ಬಣ್ಣ ಒಡವೆಗಳ ಗಂಟನ್ನು ತೆಗೆದುಕೊಂಡು ಬಂದ.

" ನೋಡು ಸುಬ್ಬಣ್ಣ ಸಾಕಾಗುತ್ತೊ ಇಲ್ವೊ....ಇಲ್ದೆ ಹೋದ್ರೆ ಓಲೇನೂ ತೆಗೆದುಕೊಡ್ತೇನಿ." ಓಲೆಯನ್ನು ತೆಗೆಯಲು ಕಿವಿಗೆ ಕೈ ಹಾಕಿದಳು.

" ಸೀತಾ....!" ವೆಂಕಟರಾಯ ಆ ದೃಶ್ಯವನ್ನು ನೋಡಲಾರದೆ ಕೂಗಿ

ದರು. ಶಕುಂತಲೆಯೂ ತನ್ನ ಒಡವೆಗಳನ್ನು ತಂದು ಸುಬ್ಬಣ್ಣನ ಮುಂದೆ ಸುರಿದಳು.

ಇಷ್ಟರಿಂದಲೂ ಐದು ಸಾವಿರ ಹಣ ಸಿಕ್ಕುವುದೊ ಇಲ್ಲವೂ ಎನ್ನುವ ಭಯ ಇಬ್ಬರ ಕಣ್ಣಲ್ಲೂ ಭಯಂಕರವಾಗಿ ನಿಂತಿತ್ತು.

"ನನಗೆ ಒಡವೆ ಮಾರೋ ಇಷ್ಟ ಇಲ್ಲ ಸುಬ್ಬಣ್ಣ....ಯಾವ್ದಾರೂ ಜಮೀನ್ನ ಮಾರೋಣಾ.... ಶಕುಂತಲಳ ಒಡವೆ ಗಂಡನ ಮನೇಲಿ ಕೊಟ್ಟದ್ದು...."

"ಅದೇನೊ ಸರಿ....ಆದ್ರೆ ನಾಳೇನೇ ಯಾರು ಕೊಂಡುಕೊಂಡು ಹಣ ಕೊಡ್ತಾರೆ. ಈ ಒಡವೆಗಳನ್ನು ಮಾರೋದು ನಂಗೂ ಇಷ್ಟವಿಲ್ಲ. ಯಾರು ಮಾರ್ತೀನಿ ಅಂದ್ರೂ ನಾನೇ ಮಾರಗೊಡಲ್ಲ. ಯಾವ್ದಾರೂ ಬ್ಯಾಂಕಿನಲ್ಲಿ ಅಡವು ಇಟ್ಟು ಹಣ ಸಾಲ ತಗೊಂಡು ನಾಳೆ ಕಟ್ಟೋದು....ಆಮೇಲೆ ನಿಧಾನ ವಾಗಿ ಜಮೀನಿಗೂ ಗಿರಾಕಿ ಹುಟ್ಟಿಸಿ....ಸರಿಯಾದ ಬೆಲೆ ಸಿಕ್ಕೊ ಹಾಗೆ ಮಾಡಿ ಆಮೇಲೆ ಮಾರಿ ಒಡವೇನ ಬಿಡಸಿಕೊಂಡು ಬರೋದು...ಏನಂತಿ ವೆಂಕಟರಾಯ...." ಪ್ರಶ್ನಿಸಿದಾಗ ರಾಯರು ಹುಸಿಯಾಗಿ ನಕ್ಕರು.

"ಸುಬ್ಬಣ್ಣಾ....!" ತುಂಬು ಅಭಿಮಾನದಿಂದ ಕೂಗಿದರು. ತೆರೆದ ಕಣ್ಣು ಕೃತಜ್ಞತೆಯನ್ನು ಸೂಚಿಸಿತು.

"ಸುಬ್ಬಣ್ಣ ನೀನು ನನ್ನ ತಂದೆ ಸಮಾನಪ್ಪ....ಅವರನ್ನು ಸರಿಯಾಗಿ ನೊಡ್ಕೊಳ್ಳೊ ಭಾರ ನಿನ್ನದು. ಅವರಿಗೆ ಕಷ್ಟಕಾಲದಲ್ಲಿ ಏನೂ ಹೊಳೆಯುಲ್ಲ." ಸೀತಮ್ಮನ ಹೃದಯದ ಬಡಿತ ಇನ್ನೂ ಸಮಾಧಾನಕ್ಕೆ ಬಂದಿರಲಿಲ್ಲ. ಏನೊ ಆಶಂಕೆ ಅಸ್ಥಿರಗೊಳಿಸುತ್ತಿತ್ತು.

"ನೀನೇನು ಹೆದ್ರಬೇಡವಮ್ಮ....ನಾನಿದ್ದೇನೆ........ನೋಡ್ಕೋತೀನಿ ದುಡ್ಡು ಕಟ್ಟದ್ರೆ ಆಗಿಹೋಯ್ತು. ಇನ್ನೇನೂ ಅದರ ಗಲಾಟೆ ಇರೋಲ್ಲ."

ನೆಲದ ಮೇಲೆ ಹರಡಿ ಬಿದ್ದಿದ್ದ ಒಡವೆಗಳು ರಾಯರ ಹೃದಯವನ್ನು ಇರಿಯುತ್ತಿತ್ತು.

ಸೀತಮ್ಮ ಅಡಿಗೆ ಮನೆಯ ಬಾಗಿಲಲ್ಲಿ ನಿಂತು ದೇವರಿಗೆ ಕೈಮುಗಿದಳು. ಶಕುಂತಲೆ ನಿಂತಲ್ಲಿಯೇ ದೇವರನ್ನು ಧ್ಯಾನಿಸಿದಳು. ಈ ಪರಾಭವದಿಂದ ತಂದೆಯನ್ನು ಪಾರುಮಾಡೆಂದು ಬೇಡಿಕೊಂಡಳು.

ಒಬ್ಬರಿಗೂ ತಿಳಿಯದಂತೆ ಒಡವೆಗಳನ್ನು ಬ್ಯಾಂಕಿನಲ್ಲಿಟ್ಟು ಐದು ಸಾವಿರ ಹಣವನ್ನು ಸಾಲ ಪಡೆದು ಟ್ರೆಜರಿಗೆ ಕಟ್ಟಿಬಿಟ್ಟರು.

ಇಪ್ಪತ್ತು ದಿನಗಳ ರಜಾವನ್ನು ಪಡೆದು ಮನೆಗೆ ಬಂದರು ರಾಯರು.

ಸಾವಿತ್ರಮ್ಮನವರ ವೈಕುಂಠ ಸಮಾರಾಧನೆ ವೈಭವದಿಂದ ನಡೆಯಿತು. ಭೋಜನಮಾಡಿದ ಜನವೆಲ್ಲಾ ತೃಪ್ತರಾಗಿ ವೆಂಕಟರಾಯರನ್ನು ಹೊಗಳಿದರು. ಕೆಲವರು ಮಾತ್ರ ಸಾವಿತ್ರಮ್ಮನವರ ಮರಣಕ್ಕಾಗಿ ತಮ್ಮ ದುಃಖವನ್ನು ಸೂಚಿಸಿದರು.

ಎಲ್ಲರೂ ಊಟವಾದ ನಂತರ ನಡುಮನೆಯಲ್ಲಿ ಜಮುಖಾನೆಯ ಮೇಲೆ ಕುಳಿತು ತಾಂಬೂಲವನ್ನು ಹಾಕಿಕೊಳ್ಳುತ್ತಿದ್ದರು.

ಹೊರಗಡೆ ಸೈಕಲ್ಲು ಬೆಲ್ಲಾದುದರಿಂದ ಸುಬ್ಬಣ್ಣ ಹೊರಗೆ ಹೋಗಿ ನೋಡಿ " ವೆಂಕಟರಾಯ,....ಪೋಸ್ಟ್‌ಮ್ಯಾನ್ ಬಂದಿದ್ದಾನೆ. ಯಾವುದೋ ರಿಜಿಸ್ಟರ್ ಕಾಗ್ದ ಬಂದಿದೆ. ಸೈನ್ ಮಾಡಿ ತಗೊಳ್ಳಪ್ಪ." ನುಡಿದ. " ರಿಜಿಸರ್ಡ್ ಕಾಗದ ...!?" ರಾಯರ ತುಟಿ ಅದುರಿದವು. ಎದೆ ಜೋರಾಗಿ ಬಡಿದುಕೊಳ್ಳಲು ಮೊದಲುಮಾಡಿತು. ಹೆದರುತ್ತಲೇ ಸಹಿ ಹಾಕಿ ಪಡೆದರು.

ಅಂಚೆಯವನು ಸೈಕಲ್ಲು ಹತ್ತಿ ಬೆಲ್ಲು ಬಾರಿಸುತ್ತ ಹೊರಟುಹೋದ. ಕವರನ್ನು ಒಡೆದರು. ಹೆದರುತ್ತಲೇ ಕಾಗದವನ್ನು ಓದಿದರು. ಸುಬ್ಬಣ್ಣ ಹತ್ತಿರವೇ ನಿಂತಿದ್ದ.

ರಾಯರ ಕಣ್ಣು ವಿಚಿತ್ರವಾಗಿ ಚಲಿಸಿತು. ತುಟಿಗಳು ನಡುಗಿದವು. ಕಾಗದ ಹಿಡಿದಿದ್ದ ಕೈ ಕಂಪಿಸುತ್ತಿತ್ತು. ಮನಸ್ಸಿನಲ್ಲಿನ ಯಾತನೆ ಮುಖದಲ್ಲಿ ಗೆರೆಯಾಗಿ ಮೂಡಿತು.

ಕಾಗದವನ್ನು ಸುಬ್ಬಣ್ಣನ ಕೈಗೆ ತುರುಕಿ ಅಲ್ಲಿ ನಿಲ್ಲಲಾರದೆ ರೂಮಿಗೆ ಹೋಗಿ ಬಾಗಿಲಿನ್ನು ಹಾಕಿಕೊಂಡರು.

" ಏನು ...ಸುಬ್ಬಣ್ಣ ...ಅದು....!?" ರಾಯರ ಮುಖವನ್ನು ಕಂಡಿದ್ದ ನಾಲ್ಕು ಜನ ಪ್ರಶ್ನಿಸಿದರು.

" ಏನೂ ಇಲ್ಲ....ಯಾವುದೊ ಲಾಯರ ನೋಟಿಸು....ಇದ್ದೇ ಇರುತ್ತಲ್ಲ ಮನುಷ್ಯನೆಂದ ಮೇಲೆ ..!" ನುಡಿದ ಸುಬ್ಬಣ್ಣ ತನ್ನ ಮನಸ್ಸಿನೊಳಗಿನ ಅಸ್ಥಿರತೆಯನ್ನು ಸ್ವಲ್ಪ ಬಿಗಿಹಿಡಿದು.

ಸುಬ್ಬಣ್ಣನ ಕಣ್ಣು ಕಿಡಿಕಾರುತ್ತಿತ್ತು.

" ಮನುಷ್ಯರು ಅಂತ ...ಯಾವ ಪಾಪಿ ದೇವರು ಅವರ್ನ ಸೃಷ್ಟಿ ಮಾಡಿದನೊ....!" ಕಾದ ಮನಸ್ಸು ಕೂಗಿ ಹೇಳಿತು.

ನಡತೆ ಸರಿ ಇಲ್ಲದ ಶಕುಂತಲಳನ್ನು ಮದುವೆ ಮಾಡಿಕೊಟ್ಟು ಸುಮಾರು ನಾಲ್ಕು ಸಾವಿರ ರೂಪಾಯಿ ಬೆಲೆಬಾಳುವ ಒಡವೆಗಳನ್ನು ವೆಂಕಟರಾಯರು

ಅಪಹರಿಸಿರುವುದಾಗಿಯೂ ಜಾರೆಯಾಗಿ ಮನೆಬಿಟ್ಟು ಓಡಿಹೋದ ಶಕುಂತಲ ಳಿಗೂ, ಅನಂತನಾರಾಯಣನಿಗೂ ಇನ್ನು ಯಾವ ರೀತಿಯ ಸಂಬಂಧವೂ ಇಲ್ಲವೆಂದೂ, ಶಕುಂತಲ ಮನೆಯಿಂದ ಓಡಿಹೋದ ದಿನದಿಂದ ಸಾವಿರ ರೂಪಾಯಿ ಬಾಳುವ ಸೌಭಾಗ್ಯಳ ಕಂಠೀಹಾರ ಇಲ್ಲವಾಗಿರುವುದರಿಂದ ಕದಿ ಯುವ ಅಭ್ಯಾಸ ಮೊದಲಿನಿಂದ ಇದ್ದ ಅವಳೇ ಕದ್ದು ಓಡಿಹೋಗಿರುವುದ ರಿಂದ, ಒಟ್ಟು ಸುಮಾರು ಐದು ಸಾವಿರ ರೂಪಾಯಿನ ಒಡವೆಗಳನ್ನು ಈ ನೋಟೀಸು ತಲುಪಿದ ಎಂಟು ದಿನಗಳಲ್ಲಿ ಲಾಯರು ಲಕ್ಷ್ಮೀಪತಯ್ಯನವರ ವಶಕ್ಕೆ ಒಪ್ಪಿಸಬೇಕೆಂದೂ ಇಲ್ಲದಿದ್ದರೆ ಮೋಸದ ಆಪಾದನೆಯ ಮೇಲೆ ವೆಂಕಟರಾಯರ ಮೇಲೆ ಕೇಸನ್ನು ಹೂಡಿ, ಜೈಲಿಗೆ ಕಳುಹಿಸುವುದಾಗಿಯೂ, ಕೋರ್ಟು ಖರ್ಚು ಮೊದಲಾದವುಗಳಿಗೆ ಪ್ರತಿವಾದಿಯೇ ಗುರಿಯಾಗಬೇಕಾ ಗುವುದೆಂದೂ ಹೆದರಿಸಿದ್ದರು.

"ಅಳಿಯನೇ ಮಾವನಿಗೆ ನೋಟೀಸು ಕಳಿಸಿದ್ರೆ ಅವರು ಹುಟ್ಟಿದ್ದಕ್ಕೆ ಸಾರ್ಥಕವಾಗ್ತಾ ಇತ್ತು....ಬೇರೆ ಲಾಯರಿಂದ ಕಳ್ಸಿದ್ದಾರೆ....!" ನುಡಿಯು ವಾಗ ಸುಬ್ಬಣ್ಣನ ದೇಹಾದ್ಯಂತ ಸಿಟ್ಟಿನಿಂದ ಉರಿಯುತ್ತಿತ್ತು.

"ಏನು ಸುಬ್ಬಣ್ಣ ಅದು....! ನೀನೊಬ್ಬನೆ ಮಾತ್ನಾಡಿಕೊಳ್ತಾ ಇದ್ದಿ....!" ಕಾತುರದಿಂದ ಪ್ರಶ್ನಿಸಿದಳು ಸೀತಮ್ಮ.

ಹೊರಗಡೆ ಅಡಕೆಲೆಯನ್ನು ಹಾಕಿಕೊಂಡ ಜನವೆಲ್ಲಾ ಹೊರಟು ಹೋಗುತ್ತಿದ್ದರು. ಸತ್ತ ಮನೆಯಾದ್ದರಿಂದ ಹೋಗುವವರು ಹೇಳಿ ಹೋಗ ಬೇಕಾಗಿರಲಿಲ್ಲ

"ಏನೂ ಇಲ್ಲ....ಸೀತಮ್ಮ....ಏನೊ ಕಾಗ್ದ...." ಸುಬ್ಬಣ್ಣ ನುಡಿದು ತಲೆ ತಿರುಗಿದಂತಾಗಿ ಗೋಡೆ ಹಿಡಿದು ಹಾಗೆಯೇ ನಿಧಾನವಾಗಿ ಕುಳಿತು ಬಿಟ್ಟ.

ಸೀತಮ್ಮನಿಗೆ ಸಮಾಧಾನವಾಗಲಿಲ್ಲ.

ಗೋಡೆ ಒರಗಿ ಕುಳಿತವನು ಕಾಲು ಚಾಚಿ ಕಿಟಕಿಯಾಚೆ ದೃಷ್ಟಿ ಹರಿಸಿದ.

ಮನಸ್ಸು ಜೇನು ಗೂಡಾಗಿತ್ತು.

ಗಂಭೀರ ಮೌನ ಬಹು ಹೊತ್ತು ಸುಪ್ತವಾಗಿ ಪವಡಿಸಿತ್ತು.

ಶಕುಂತಲಳ ಕಣ್ಣಲ್ಲಿ ನೀರು ಧಾರಾಕಾರವಾಗಿ ಪ್ರವಹಿಸುತ್ತಿತ್ತು. ತನ್ನ ಕಾರಣದಿಂದಲೇ ಇನ್ನಾವುದೊ ಮಹಾ ವಿಪಾತವಾಗಿದೆ ಎಂದು ಅವಳ ಮನಸ್ಸು ತಿವಿಯುತ್ತಿತ್ತು.

ನಾನು ಹುಟ್ಟಿ ಪಾಪ ಮಾಡಿದೆ....!
'ಸತ್ತು ಸುಖ ಕೊಡಬಲ್ಲೆನೆ....!?'
ಉತ್ತರ ಹೊಳೆಯದೆ ಶಕುಂತಲ ಮಿಲಿಮಿಲಿ ಒದ್ದಾಡಿದಳು.

೨೮

ತಲೆಯಮೇಲೆ ಕೈಯನ್ನು ಹೊತ್ತು ಕುಳಿತ ರಾಯರು ಬಹು ಹೊತ್ತು ಯೋಚಿಸಿದರು. ಮಧ್ಯಾಹ್ನದ ಬಿಸಿಲು ಸಂಜೆಯ ಹೂಬಿಸಿಲಾಗಿ ರಾತ್ರಿಯ ಅಂಧಕಾರವಾಯಿತು. ಹೊರಗಡೆ ದೀಪ ಹೊತ್ತಿ ಉರಿಯಿತು. ರೂಮಿನಲ್ಲಿ ದೀಪ ಹಚ್ಚುವ ಪ್ರಮೇಯವೇನೂ ಅವರಿಗೆ ಕಾಣಲಿಲ್ಲ. ತೆರದ ಕಣ್ಣಿನಿಂದ ನೆಲವನ್ನೋ ಗೋಡೆಯನ್ನೋ ದೃಷ್ಟಿಸಿ ತಲೆಯನ್ನು ಕೆರೆದು ರೂಮಿನಲ್ಲಿ ಶಥ ಪಥ ತಿರುಗಿ ಬಹು ಹೊತ್ತಿನ ಮೇಲೆ ಒಂದು ನಿರ್ಧಾರಕ್ಕೆ ಬಂದರು. ರೂಮಿನ ಚಿಲಕ ತೆಗೆದು ಹೆಗಲಮೇಲೆ ಒಂದು ಟವಲನ್ನು ಹಾಕಿಕೊಂಡು ಹೊರಗೆ ಹೊರಟರು. ಹಾಲಿನಲ್ಲಿ ಕುಳಿತಿದ್ದ ಸುಬ್ಬಣ್ಣ ಎದ್ದುನಿಂತ. ಅಡಿಗೆಯ ಮನೆಯ ಬಾಗಿಲಲ್ಲಿ ಕುಳಿತಿದ್ದ ಸೀತಮ್ಮ ಗಾಬರಿಯಿಂದ ಕೂಗಿದಳು "ಸುಬ್ಬಣ್ಣಾ ನೋಡಪ್ಪ....ಎಲ್ಲೋ ಹೊರಟಿದ್ದಾರೆ....?"

"ಎಲ್ಲೂ ಹಾಳಾಗಿ ಹೋಗಲ್ಲ....ಸುಮ್ನಿರು...." ಹೊರಬಾಗಿಲ ಬಳಿಯಲ್ಲಿ ನಿಂತು ಕ್ರೂರವಾಗಿ ನೋಡಿ ನುಡಿದರು.

"ನಾನೂ ಬರ್‍ಲಾ ವೆಂಕಟರಾಯ...?" ಸುಬ್ಬಣ್ಣ ಪ್ರಶ್ನಿಸುತ್ತ ಹತ್ತಿರ ಬಂದ.

"ಏನೂ ಬೇಡ ಸುಬ್ಬಣ್ಣ....ನೀನು ಇಲ್ಲೇ ಇರು...." ನುಡಿದು ಪುನಃ ಹಿಂತಿರುಗಿ ನೋಡದೆ ಹೊರಟುಬಿಟ್ಟರು. ಸೀತಮ್ಮ ಭಯದಿಂದ ಕಂಪಿಸುತ್ತಿದ್ದಳು. ಸುಬ್ಬಣ್ಣನಿಗೆ ರಾಯರ ನಡತೆ ಅರ್ಥವಾಗಿರಲಿಲ್ಲ. "ಹೋಗು ಸುಬ್ಬಣ್ಣ....ನೀನೂ...." ಸೀತಮ್ಮ ಪಿಸುಗುಟ್ಟಿದಳು.

"ಯಾರೂ ಬರಬೇಡಿ....ಈಗ ಬಂದುಬಿಟ್ಟೆ...." ರಾಯರು ಹೋಗುತ್ತಲೆ ನುಡಿದರು. ಸುಬ್ಬಣ್ಣ ಅನುಸರಿಸಲು ಮುಂದೆ ಹೆಜ್ಜೆಯನ್ನು ಇಟ್ಟವನು ಹಾಗೆಯೇ ನಿಂತ.

"ಸುಮ್ನಿರು ಸೀತಮ್ಮ ಹೆದರಕೊಳ್ಳಬೇಡ....ಎಲ್ಲೂ ಹೋಗಲ್ಲ.... ಮನಸ್ಸು ಬೇಜಾರಾಗಿದೆ ಸುಮ್ನೆ ಸುತ್ತಿಕೊಂಡು ಬರ್‍ತಾರೆ ಅಷ್ಟೆ....ಬೇಡ ಅಂದ ಮೇಲೆ ಹೋಗ್ಬಾರ್‍ದು...." ಸುಬ್ಬಣ್ಣ ಸಮಾಧಾನವನ್ನು ನುಡಿದರೂ ಅವನ ಮನಸ್ಸೇ ಕಳವಳಗೊಂಡಿತ್ತು.

ಮಧ್ಯಾಹ್ನ ರಾಯರಿಗೆ ಬಂದ ಪತ್ರ, ಈಗಿನ ಅವರ ನಡವಳಿಕೆ ಒಂದೂ ಅರ್ಥವಾಗದೆ ಶಕುಂತಲ ತನ್ನ ರೂಮಿನಲ್ಲಿ ಅತ್ತುಬಿಟ್ಟಳು. 'ನಾನು ಹುಟ್ಟಿ ಪಾಪ ಮಾಡಿದೆ.' ಒಂದೇ ಸಮನಾಗಿ ಅವಳಿಗೆ ಅನ್ನಿಸುತ್ತಿತ್ತು.

ರಾತ್ರಿಯ ಊಟ ಯಾರಿಗೂ ಬೇಕಾಗಲಿಲ್ಲ. ಒಬ್ಬೊಬ್ಬರು ಒಂದೊಂದು ಮೂಲೆಯನ್ನು ಆರಿಸಿ ಕುಳಿತುಬಿಟ್ಟರು. ಎಲ್ಲರ ಕಣ್ಣು ಬಾಗಿಲ ಕಡೆಗೆ ನೆಟ್ಟಿತ್ತು. ಸುಮ್ಮನೆ ಕೂತಿರಲಾರದೆ ಸುಬ್ಬಣ್ಣ ಹಲವು ಬಾರಿ ಬಾಗಿಲ ಬಳಿಗೆ ಬಂದ.

ರಾತ್ರಿ ಬಹು ಹೊತ್ತಾದ ಮೇಲೆ ರಾಯರು ಮನೆಗೆ ಬಂದರು.

ಬಂದವರೇ "ಸುಬ್ಬಣ್ಣಾ...." ಕೂಗಿದರು. ಸುಬ್ಬಣ್ಣ ಎದುರಿಗೆ ಬಂದು ನಿಂತ. ಮನದ ಯೋಚನೆಯಿಂದ ವಿಕಾರಗೊಂಡಿದ್ದ ಮುಖದಲ್ಲಿ ಈಗ ಒಂದು ವಿಚಿತ್ರ ತೃಪ್ತಿ ನೆಲೆಸಿರುವುದನ್ನು ಕಂಡ ಸುಬ್ಬಣ್ಣ ರಾಯರ ಮುಖದಲ್ಲಿ.

"ತಗೊ ...ಸುಬ್ಬಣ್ಣ... ಹಣ....!....ಹಣ.. !!" ಟವಲಿನಲ್ಲಿ ಕಟ್ಟಿ ತಂದಿದ್ದ ಹಣವನ್ನು ನಿಂತ ಹಾಗೆಯೇ ಕೆಳಗೆ ಸುರಿದರು. ನೋಟುಗಳು ನೆಲವೆಲ್ಲಾ ಚೆಲ್ಲಿದವು.

"ಇದೇನು ವೆಂಕಟರಾಯ.. !" ಏನನ್ನೂ ಅರ್ಥಮಾಡಿಕೊಳ್ಳ ಲಾರದೆ ಚಕಿತಗೊಂಡ ಸುಬ್ಬಣ್ಣ.

"ಇದೇನು ಅಂದ್ರೆ....! ಇಷ್ಟೊಂದು ದುಡ್ಡು....!" ಏನೊ ಆಶಂಕೆ ಯಿಂದ ದೇಹಾದ್ಯಂತ ಕಂಪಿಸಿದಳು ಸೀತಮ್ಮ.

"ಅಣ್ಣಾ ...!" ಕೂಗಿ ಬಂದು ತಂದೆಯನ್ನು ತಬ್ಬಿಕೊಂಡು ಎದೆಯ ಮೇಲೆ ತನ್ನ ತಲೆಯನ್ನು ತಿಕ್ಕಿದಳು ಶಕುಂತಲ.

ಚೆಲ್ಲಾಡಿದ ನೋಟನ್ನು ಆರಿಸಿ "ಇದ್ಯಾಕೆ....ವೆಂಕಟರಾಯ....!" ಸುಬ್ಬಣ್ಣ ಪ್ರಶ್ನಿಸಿದಾಗ "ನಮ್ಮ ಅಳಿಯ, ಬೀಗರ ತಿಥಿಗೆ.. !" ವಕ್ರವಾಗಿ ನುಡಿದು ಮಗಳನ್ನು ಬಿಗಿಯಾಗಿ ಎದೆಗೆ ಅವಚಿಕೊಂಡರು. "ಅಣ್ಣಾ ....! ಶಕುಂತಲೆ ಕಿವಿಯನ್ನು ಮುಚ್ಚಿ ಕೂಗಿದಳು. ಮಾತು ಕರ್ಣ ಕಠೋರ ವಾಗಿತ್ತು.

"ಸುಮ್ನಿರು ಶಕುಂತಲ....ನೀನು ಅಳಬೇಡ ...ನಿಂಗೆ ಮದ್ವೇನೆ ಆಗಿಲ್ಲ ಮಗು....ನಿಂಗೆ ಮದ್ವೇನೇ ಆಗಿಲ್ಲ.. ನಿಂಗೆ ಅಳೋದು ಏನೂ ಆಗಿಲ್ಲ...." ಕಣ್ಣೀರನ್ನು ಒರಸಿದರು. ತಮ್ಮ ಕಣ್ಣಲ್ಲಿ ಬಂದ ನೀರನ್ನು ಮಗಳ ಸೆರಗಿ ನಿಂದ ವರಸಿಕೊಂಡರು.

ಸುಬ್ಬಣ್ಣನಿಗೆ ಎಲ್ಲವೂ ಅರ್ಥವಾಗಿತ್ತು.

ಸೀತಮ್ಮ, ಶಕುಂತಲೆಗೆ ಏನೂ ಅರ್ಥವಾಗಿರಲಿಲ್ಲ.

"ನೀನು ಅಳಕೂಡದು ಶಕುಂತಲ....ನೀನು ಅತ್ತರೆ ನನ್ನಾಣೆ...." ನುಡಿದು ಪುನಃ ರೂಮಿಗೆ ಹೋಗಿ ಹಾಸಿಗೆ ಮೇಲೆ ಮಲಗಿಬಿಟ್ಟರು. ಮನಸ್ಸು ಭಾವನೆಗಳ ಭಾರದಿಂದ ಬಹುವಾಗಿ ಬಳಲಿತ್ತು.

ಸೀತಮ್ಮ ಶಕುಂತಲೆಯರಿಗೆ ಪುನಃ ಮಾತನಾಡಿಸುವ ಧೈರ್ಯ ಬರಲಿಲ್ಲ. ಸುಬ್ಬಣ್ಣ ಹಣವನ್ನು ಜೋಪಾನವಾಗಿ ಎಣಿಸಿ ಮೊಬಲಿಗಿನ ಮೊತ್ತಕಂಡು ತತ್ತರಿಸಿದ. "ಜೋಪಾನವಾಗಿ ತೆಗೆದಿಡು ಸೀತಮ್ಮ....ಹತ್ತು ಸಾವಿರ ....ಇದೆ...." ಹಣವನ್ನು ಸೀತಮ್ಮನ ಕೈಗಿಡುತ್ತಾ ಅವಳ ಕೈ ನಡುಗಿತು. ಎಂದೂ ಇಷ್ಟು ಹಣವನ್ನು ಅವಳು ಒಟ್ಟಿಗೇ ನೋಡಿರಲಿಲ್ಲ.

"ಇದೆಲ್ಲೀದು....ಇಷ್ಟೊಂದು....!" ಇದು ಸೀತಮ್ಮನಿಗೂ ಒಂದು ಸಮಸ್ಯೆಯಾಗಿತ್ತು. "ಯಾತಕ್ಕೆ....?" ಎಂಬುದೂ ಸೀತಮ್ಮನ ಇನ್ನೊಂದು ಯೋಚಿಸಲಾಗದ, ತೊಡುಕಾದ ಸಮಸ್ಯೆಯಾಗಿದ್ದರೂ ಇದರ ಉತ್ತರ ಸುಬ್ಬಣ್ಣನಿಗೆ ಹೊಳೆದಿತ್ತು. ಆದರೆ ಇವನಿಗೂ ಸೀತಮ್ಮನ ಮೊದಲನೆ ಯೋಚನೆ ಹೊಳೆಯದ ವಿಷಯವಾಗಿತ್ತು.

ಶಕುಂತಲ ಏನನ್ನೂ ಯೋಚಿಸಲಾಗದೆ ಸುಮ್ಮನೆ ಹಾಸಿಗೆಯ ಮೇಲೆ ಉರುಳಿ ರಾತ್ರಿಯೆಲ್ಲಾ ಅತ್ತಳು.

ರಾತ್ರಿ ಸುಖವಾಗಿ ರಾಯರು ನಿದ್ರೆ ಮಾಡಿದ್ದುದರಿಂದ ಬಾಡಿದ ಮುಖದ ಬಳಲಿಕೆ ದೂರ ಸರಿದಿತ್ತು. ಕಣ್ಣಿನಲ್ಲಿನ ಅಶಾಂತಿ ತೃಪ್ತಿಯಾಗಿ ಪರಿವರ್ತನೆಗೊಂಡಿತ್ತು.

"ಕಾಫಿ ಆಯ್ತೇನೆ ಸೀತಾ....ಬಾಯಾರಿದೆ...." ಕೂಗುತ್ತ ಅಡಿಗೆ ಮನೆಗೆ ಬಂದರು. ಸೀತಮ್ಮ ಕಾಫಿಗೆ ನೀರನ್ನು ಇಟ್ಟು ಅಗ್ಗಿಷ್ಟಿಕೆಯನ್ನು ಬೀಸುತ್ತ ಕುಳಿತಿದ್ದಳು. ಗಂಡನ ಮುಖದಲ್ಲಿನ ಶಾಂತಿಯನ್ನು ಕಂಡು ಸೀತಮ್ಮನಿಗೆ ಸ್ವಲ್ಪ ಸಮಾಧಾನವಾಯಿತು.

"ಸುಬ್ಬಣ್ಣಾ....!" ಕೂಗಿದರು ರಾಯರು. "ಸೀತಾ....ನಿನ್ನೆ ನನ್ನ ಮನಸ್ಸು ಬಹು ಬೇಜಾರುಕೊಂಡಿತ್ತು....ಇವತ್ತು ಹಾ ಎನಿಸ್ತಾ ಇದೆ...." ನೀಳ ತೃಪ್ತಿಯ ಉಸಿರನ್ನು ಬಿಟ್ಟರು.

ಗಂಡನ ಯೋಚನೆ ಬಗೆಹರಿದುದನ್ನು ಕೇಳಿ ಹೆಂಡತಿಗೆ ಸಂತೋಷ ವಾದರೂ ಸಮಸ್ಯೆ ಬಗೆಹರಿಯದೆ ಸಮಾಧಾನವಾಗಿರಲಿಲ್ಲ.

ಸುಬ್ಬಣ್ಣ ಮುಖ ತೊಳೆದು ಒಳಗೆ ಬಂದ.

" ನಾವು ನಾಳೆ ಬೆಂಗಳೂರಿಗೆ ಹೊರ್ಟ್ಹೋಗೋಣಾ...." ರಾಯರು ಹೆಂಡತಿಗೆ ಹೇಳಿದರು. ಕಾಫಿಯನ್ನು ಸೋಸುತ್ತಿದ್ದ ಸೀತಮ್ಮ ಡಿಕಾಕ್ಷನ್ನಿನೊಳಗೆ ಹಾಗೆಯೇ ಹಿಡಿದುಕೊಂಡಿದ್ದ ಬಟ್ಟೆಯನ್ನು ಇಳ್ಳಿಬಿಟ್ಟಳು. " ಏನು....?" ಆಶ್ಚರ್ಯದಿಂದ ಪ್ರಶ್ನಿಸಿದಳು.

" ನಂಗೆ ಈ ಊರು, ಜನ....ಮನೆ ಎಲ್ಲಾ ಬೇಜಾರಾಗಿ ಹೋಗಿದೆ.... ಇದೆಲ್ಲಾ ಬಿಟ್ಟು ದೂರ ಹೊರ್ಟು ಹೋಗೋಣಾ....ಶೀನಿಗೆ ನಾಳೆ ನಾವು ಬರ್ತ್ತೀವಿ ಅಂತ ಎಕ್ಸ್‌ಪ್ರೆಸ್ ಟೆಲಿಗ್ರಾಮ್ ಕಳ್ಸಿಬಂದಿದ್ದೆ ರಾತ್ರೀನೆ...."

ಸುಬ್ಬಣ್ಣ ಚಕಿತಗೊಂಡ. ಎಂದೂ ರಾಯರು ಏನು ಮಾಡಬೇಕಾದರೂ ಅವನನ್ನು ವಿಚಾರಿಸಿ ಸಲಹೆ ಪಡೆದಲ್ಲದೆ ಮಾಡುತ್ತಿರಲಿಲ್ಲ.

ಮನೆ....! ಮನೆ....!! ಹೌದು ಸೀತಮ್ಮನಿಗೂ ನಿನ್ನೆ ರಾತ್ರಿ ಮನೆ ಬೇಜಾರು ಬಂದಿತ್ತು. ಮನೆಯ ಗೋಡೆ, ಬಾಗಿಲು, ನೆಲ, ಉಳಿದ ವಸ್ತುಗಳು ಎಲ್ಲವೂ ಅತ್ತೆಯ ನೆನಪನ್ನು ತರುತ್ತಿದ್ದವು. ಇದೇ ಮನೆಯಲ್ಲೇ ಶಕುಂತಳ ಮದುವೆಯಾಗಿ ಬರದಾಗಿದ್ದುದು ಇವೆಲ್ಲಕ್ಕೆ ಕಾರಣವಾದ ಮನೆ ಸೂತಕದ ಮನೆಯಾಗಿ ಈಕೆಗೂ ತೋರಿತ್ತು. ಆದರೆ ಇದೇ ಮನೆಯಲ್ಲಿ ಶಕುಂತಲ ಹುಟ್ಟಿ ನೀರಸ ಜೀವನವನ್ನು ಸರಸಗೊಳಿಸಿದಳು. ಪ್ರತಿಯೊಂದು ವಸ್ತುವೂ ಆ ನೆನಪನ್ನು ಪ್ರತಿಬಿಂಬಿಸಿದಾಗ ' ಆ ಹಾಳು ಯೋಚನೆ ಬೇಡ ' ಎಂದು ಮೊದಲಿನದನ್ನು ದೂರ ದೂಡಲು ಪ್ರಯತ್ನಿಸಿದ್ದಳು. ದೂರ ಸರಿಯದೆ ಮಸುಕಾಗಿ ಉಳಿದೇ ಇತ್ತು.

" ಇದೇನು ವೆಂಕಟರಾಯ....ನಿನ್ನ ಮಾತು....! ನಿನ್ನ ನಡತೆ ನಂಗೇನೂ ಅರ್ಥವಾಗ್ತಾನೆ ಇಲ್ವಲ್ಲ..." ನಿಂತಿದ್ದವನು ಪಕ್ಕದಲ್ಲಿ ಕುಳಿತುಕೊಂಡ.

" ಬ್ಯಾಂಕಿನಲ್ಲಿ ಒಡವೆ ಬಿಡ್ಸಿಕೊಂಡು ಬಂದು ಆ ಹಣ....! ಆ ಒಡವೆ ....! ಎಲ್ಲಾನ್ನು ಎಳ್ಳುನೀರಿನ ಜೊತೆಯಲ್ಲಿ ನೀನೇ ಹೋಗಿ ತಿಲತರ್ಪಣ ಬಿಟ್ಟುಬಿಟ್ಟು ನಿಮ್ಮ ಸಂಬಂಧ ಹರೀತೂ ಅಂತ....ಸ್ನಾನ ಮಾಡಿ ಮನೆಗೆ ಬಾರಪ್ಪ...." ರಾಯರು ಉದ್ವಿಗ್ನರಾಗದೆ ನಿಧಾನವಾಗಿಯೇ ಮಾತನಾಡಿದ್ದರೂ ದಗ್ಧವಾಗಿದ್ದ ಹೃದಯದ ಕಾವು ಅತಿಯಾಗಿತ್ತು.

ಸೀತಮ್ಮ ನಡುಗಿದಳು.

ಶಕುಂತಲಾ " ಅಣ್ಣಾ...." ಎಂದು ಅರಚಿ ಒಳಗೆ ಬಂದಳು.

ರಾಯರು ಮಗಳನ್ನು ಹತ್ತಿರ ಸೆಳೆದು ಮುಖವನ್ನು ಸವರಿದರು. ತಲೆಯ ಮೇಲೆ ಮೃದುವಾಗಿ ಕೈಯಾಡಿಸಿದರು. " ನಿನ್ನ ದುಃಖ ನಂಗೊತ್ತು

ಶಕುಂತಲ....ನನ್ನ ಮಗಳಾಗಿ ಹುಟ್ಟಿ ಇವೆಲ್ಲಾ ಅನುಭವಿಸಬೇಕಾಯ್ತು.... ನಾನು ಎಷ್ಟೆಷ್ಟು ನಿನ್ನ ಸುಖವಾಗಿ ಇಡಬೇಕು ಅಂತ ಯೋಚ್ನೆ ಮಾಡಿದ್ನೋ ಅಷ್ಟೂ ಅಷ್ಟು ನಿಂಗೆ ದುಃಖ ಕೊಡ್ತಾ ಇದ್ದೇನೆ....ಸುಮ್ನಿರಮ್ಮ ಶಕುಂತಲ– ನೀನು ಅಳಬೇಡ....ನೀನು ಅತ್ತರೆ ನನ್ನ ಕರುಳು ಕತ್ತರಿಸುತ್ತೆ... ಎಲ್ಲಾ ಮರ್ತುಬಿಡು ಶಕುಂತಲ....ನಿಂಗೆ ಏನೂ ಆಗಿಲ್ಲ ಅಂತ ಸ್ವಪ್ನಿದ್ದು ಬಿಡು ಶಕುಂತಲ....ಇಲ್ಲಿದ್ರೆ ನಿಂಗೆ ಏನೇನೋ ನೆನಪಿಗೆ ಬಂದು ದುಃಖ ಮರುಕಳಿ ಸುತ್ತೆ ಅಂತ....ಬೆಂಗಳೂರಿಗೆ ಹೋಗೋ ಯೋಚ್ನೆ ಮಾಡಿದ್ದೀನಿ....ಅಲ್ಲಿ ಹೊಸ ಜಾಗ....ಹೊಸ ಜನ....ಸ್ವಲ್ಪ....ನಿನ್ನ....ನಮ್ಮ....ದುಃಖ ಮರೀ ಬಹ್ದು...." ಶಕುಂತಲಳನ್ನು ಎಳೆಯ ಮಗುವಿನಂತೆ ಪುನಃ ಪುನಃ ಮುದ್ದಿಸಿ ದರು.

ಸೀತಮ್ಮ ಕಾಫಿಯನ್ನು ಸೋಸಿ ಹಾಲನ್ನು ಬೆರಸಿ ಎಲ್ಲರ ಮುಂದೂ ಒಂದೊಂದು ಲೋಟಾ ಇಟ್ಟಳು.

"ಏನು ಹೇಳ್ತಿ ಸುಬ್ಬಣ್ಣ....?" ಕಾಫಿಯ ಲೋಟಾವನ್ನು ಕೈಗೆತ್ತಿ ಕೊಂಡು ಪ್ರಶ್ನಿಸಿದರು ರಾಯರು.

"ನಿಮ್ಮ ಕೆಲಸ....?" ಸೀತಮ್ಮನಿಗೆ ನೆನಪು ಬಂತು. ಪ್ರಶ್ನಿಸಿದಳು. ರಾಯರು ಹುಸಿಯಾಗಿ ನಕ್ಕರು.

"ರಾಜೀನಾಮೇನ ಬರ್ದು ರಾತ್ರೀನೇ ಪೋಸ್ಟಿಗೆ ಹಾಕಿ ಬಂದೆ. ನಾನೇ ಹೋಗಿ ಕೊಟ್ರೆ....ನಮ್ಮ ಆಫೀಸು ಒಪ್ತಾ ಇರ್ಲಿಲ್ಲ..."

"ನೀನು ಬಲು ದೊಡ್ಡ ತಪ್ಪು ಮಾಡಿದೆ....ವೆಂಕಟರಾಯ...." ಸುಬ್ಬಣ್ಣ ಅಸಮಾಧಾನದಿಂದ ನುಡಿದ.

"ಹೌದು...ಸುಬ್ಬಣ್ಣ....ನಾನು ಹುಟ್ದೇ ಬಲು ದೊಡ್ಡ ತಪ್ಪು ಮಾಡಿದೆ...." ನುಡಿದಾಗ ಸುಬ್ಬಣ್ಣ ನೀರವನಾದ.

ಸೀತಮ್ಮ ನೀಳ ಉಸಿರನ್ನು ಬಿಟ್ಟಳು.

ಶಕುಂತಲ ಬಿಕ್ಕಿ ಬಿಕ್ಕಿ ಅತ್ತುಬಿಟ್ಟಳು.

೨೯

ಶೀನಿ ಇಷ್ಟೊಂದು ಬದಲಾಯಿಸುವನೆಂದು ಯಾರೂ ಯೋಚಿಸಿರ ಲಿಲ್ಲ. ಬೆಂಗಳೂರು ಸ್ಟೇಷನ್ನಲ್ಲಿ ಅವನ ಆಕೃತಿಯನ್ನು ಕಂಡ ತಕ್ಷಣವೇ ರಾಯರು ಆಶ್ಚರ್ಯಗೊಂಡರು. "ಇದೇನು ಶೀನಿ....! ಯಾಕೆ ಮೈಗೆ ಚೆನ್ನಾಗಿಲ್ವೆ...." ಅವನ ಭುಜವನ್ನು ಹಿಡಿದು ಅಲುಗಾಡಿಸಿ ಪ್ರಶ್ನಿಸಿದರು.

ಉತ್ತರವಾಗಿ ಶುಷ್ಕವಾಗಿ ನಕ್ಕು ತಲೆತಗ್ಗಿಸಿ, ನಿಂತಿದ್ದ ಶಕುಂತಲಳನ್ನು ನೋಡಿದ.

" ಹ್ಯಾಗಿದ್ದೋನು ಹ್ಯಾಗಾಗಿ ಹೋಗಿದ್ದೀಯೊ....ಶೀನಿ...." ಹತ್ತಿರ ಬಂದು ಸೀತಮ್ಮ ಇನ್ನೊಮ್ಮೆ ಅವನ ಮುಖವನ್ನು ದೃಷ್ಟಿಸಿ ಅನುಕಂಪ ಸೂಸಿದಳು. " ನಿನ್ನ ನೋಡಿ ಎಷ್ಟೋ ದಿನ ಆಗಿತ್ತು ಶೀನಿ....ಈಗ ಇನ್ನೂ ಚೆನ್ನಾಗಿರ್ತೀಯಾ, ಕೆಲಸ ಬೇರೆ ಆಗಿದೆ....ಒಳ್ಳೆ ಹುದ್ದೆ ಇದೆ ಅಂತಿದ್ರೆ....?! ಏನು ಖಾಯಿಲೇನೊ....ಶೀನಿ....ನಿಂಗೆ....ಈ ಥಂಡಿ ಗಾಳೀಲಿ ಇಲ್ಲಿಗೆ ಬರಬಾರದಾಗಿತ್ತಪ್ಪ........ನೀನು........ಔಷ್ದಾ ಏನಾದ್ರೂ ತಗೊಳ್ತಾ ಇದ್ದೀಯಾ ...?" ಪ್ರಶ್ನಿಸಿದರು.

" ಔಷಧ....!" ನೀರಸವಾಗಿ ತುಟಿಗಳ ಮಧ್ಯದಲ್ಲಿ ನಕ್ಕ. " ನಂಗೇನೂ ಆಗಿಲ್ಲ ಸೀತಮ್ಮ....ಕಲ್ಲುಗುಂಡು ಇದ್ದ ಹಾಗೆಯೇ ಇದ್ದೇನೆ...." ಪುನಃ ನಕ್ಕ. " ಹೂಂ ! ನಡೀರಿ ಹೋಗೋಣಾ ಮನೆಗೆ...." ಕೂಲಿಯವನ ತಲೆಯ ಮೇಲೆ ಸಾಮಾನನ್ನು ಹೇರಿದ.

" ನೀವೂ, ರಾಯರೂ, ಶಕುಂತಲ....ಸುಬ್ಬಣ್ಣ ಮಾವ....ಎಲ್ಲಾ ಬಡವಾಗಿದ್ದೀರಾ...." ಶಕುಂತಲಳ ಕಡೆಗೆ ನೋಡಿ ನುಡಿದು ದುಃಖದ ಉಸಿರನ್ನು ಬಿಟ್ಟ. " ಅಜ್ಜಿ ಸತ್ತ ವಿಷಯ ಇನ್ನೂ ಮೊನ್ನೆ ಮೊನ್ನೆ ನಂಗೆ ಗೊತ್ತಾಯ್ತು. ಪಾಪ....! ಅವರು ಇಷ್ಟು ಬೇಗ ಸಾಯ್ತಾರೆ ಅಂತ ಯೋಚಿಸೇ ಇರ್ಲಿಲ್ಲ....ಕೇಳಿ ತುಂಬಾ ದುಃಖ ಆಯ್ತು. ಎರಡು ದಿನ ಅನ್ನವೇ ಸೇರಲಿಲ್ಲ. ಅಮ್ಮ ಏನಾರೂ ಇದನ್ನು ಕೇಳಿದ್ರೆ ಅತ್ತು ಅತ್ತು ಕಣ್ಣೀರಿನ ಹೊಳೇನೇ ಹರಿಸ್ತಾ ಇದ್ದಳು...." ಪುನಃ ನುಡಿದ.

" ಹಾಗಾದ್ರೆ ನೀನು ಒಬ್ಬನೇ ಈಗ ಮನೇಲಿ....?....ನಂಗೂ ಇನ್ನೂ ಮೊನ್ನೆ ಗೊತ್ತಾಯ್ತು. ನಿಮ್ಮಪ್ಪ ನಿಮ್ಮ ತಂದೆ ಮನ್ಗೆ ಹೋದರು ಅಂತ. ನಿಮ್ಮ ಸೋದ್ರಮಾವನ ಮನೇಲಿ ಮಾತ್ನಾಡಿಕೊಳ್ತಾ ಇದ್ದರು. ಒಬ್ನೆ ಇದ್ದು ಇದ್ದು ನಿಂಗೂ ಬೇಜಾರು ಆಗಿರ್ಬೇಕು....ಈಗ್ಲಾದ್ರೂ ಮದ್ವೆ....ಗಿದ್ವೆ ಪ್ರಯತ್ನ ನಡೆಸಿದ್ದೀಯೊ ಅಥವ....ಮೊದಲಿನ ಹಾಗೆ ಹಟಾ ಹಿಡ್ದು ಕುಳಿತಿದ್ದೀಯೊ....?" ಪ್ರಶ್ನಿಸಿದಳು ಸೀತಮ್ಮ.

" ಮದುವೆ....!....ಮದುವೆ....!" ಹೇಳಿ ಜೋರಾಗಿ ನಕ್ಕ. ಶಕುಂತಲ ತಲೆ ತಗ್ಗಿಸಿದಳು. "ಮದ್ವೆ ಆಗೋ ಕಾಲ ಆಗೋಯ್ತು ಸೀತಮ್ಮ...." ನುಡಿದಾಗ ಮುಖ ವಿವರ್ಣವಾಗಿತ್ತು. ಕಣ್ಣಿನ ಕೊನೆ ಶಕುಂತಲಳನ್ನು ಹಿಣಕಿ ನೋಡಿತ್ತು.

ಸುಬ್ಬಣ್ಣ ನೀಳ ಉಸಿರನ್ನು ಬಿಟ್ಟ.

" ನಮ್ಗೆ ಮನೆ ಎಲ್ಲಿ ನೋಡಿದ್ದಿ ಶೀನಿ....ಊರು ಬೇಜಾರು ಆಗಿ ಇದ್ದಕ್ಕಿದ್ದ ಹಾಗೆಯೇ ಹೊರ್ಟುಬಿಟ್ಟೆವು....ಅದಕ್ಕೆ ನಿಂಗೆ ತಂತಿ ಕಳಿಸಿದ್ದು....ಏನು ಎಲ್ಲಾರೂ ಸಿಕ್ತಾ ಮನೆ ?" ರಾಯರು ಪ್ರಶ್ನಿಸಿದರು. "ನಿಂಗೆ ನನ್ನ ತಂತಿ ಆಶ್ಚರ್ಯವೂ ಆಗಿರಬೇಕು ! ಇದೇನು ಇದ್ದಕ್ಕಿದ್ದ ಹಾಗೆಯೇ ಹೀಗೆ ಅಂತ....!"

" ಈ ಬೆಂಗಳೂರು ಪೇಟೇಲಿ ಇಷ್ಟುಬೇಗ ಎಲ್ಲಿ ಸಿಕ್ಕುತ್ತೆ ಹೇಳಿ....! ನಾನೂ ನನ್ನ ಸ್ನೇಹಿತರಿಗೆ ಹೇಳಿದ್ದೇನೆ....ನಿಧಾನವಾಗಿ ಸಿಕ್ಲಿಬಿಡಿ " ಏನು ಅವಾಂತರ....ನನ್ನ ಮನೇನೂ ನಿಮ್ಮನೇತಾನೆ....!...." ನುಡಿದಾಗ ಸೀತಮ್ಮ ನಕ್ಕಳು. "ಚಿನ್ನದಂತ ಗುಣ ನಿಂದುಕಣೋ....ಶೀನು. ನಿನ್ನ ಮದ್ವೆ ಆಗೋಳು ಪುಣ್ಯಾಮಾಡಿರಬೇಕು...." ಅಭಿಮಾನದಿಂದ ನುಡಿದಳು.

ಉತ್ತರವಾಗಿ ಶೀನಿ ಹುಸಿಯಾಗಿ ನಕ್ಕ. ಅಷ್ಟರಲ್ಲಿ ಮನೆ ಬಂದುದರಿಂದ ಶೀನಿ ಜಟಕಾದಿಂದ ಕೆಳಗೆ ಧುಮುಕಿದ.

ಎಲ್ಲರೂ ಇಳಿದು ಸಾಮಾನನ್ನು ಶೀನಿಯ ಮನೆಗೆ ಸಾಗಿಸಿದರು. ಹತ್ತು ಜನವಿದ್ದರೂ ದೊಡ್ಡದಾಗುವಂತಹ ಬಂಗಲೆ. ಅದರಲ್ಲಿ ಇದ್ದವನು ಶೀನಿಯೊಬ್ಬನೆ.

" ಮನೆ ತುಂಬಾ ಚೆನ್ನಾಗಿದೆ" ಶಕುಂತಲೆ ನುಡಿದಳು.

" ಇದ್ಯಾಕೆ ಇಷ್ಟು ದೊಡ್ಡ ಮನೆ ಮಾಡಿದೆ ಶೀನಿ....ಇರೋರು ನೀನು ನಿಮ್ಮ ತಾಯಿ ಇಬ್ಬರೇ....ಬಂದರೆ ನಿನ್ನ ಹೆಂಡ್ತಿ ಒಬ್ಬಳು....ಮೂರೇ ಜನ .. !" ಸೀತಮ್ಮ ನುಡಿದಾಗ ಶೀನಿ ನಕ್ಕು ನುಡಿದ. "....ಹೌದು....! ಹೌದು....! ದೊಡ್ಡದು. ಈಗ ಇರೋನು ನಾನೊಬ್ಬನೇ....! ಏನೊ ಆಶೆಯಿಂದ ಆ ಮನೆ ಮಾಡಿದ್ದೆ. ಇದನ್ನು ಬಿಟ್ಟು ಬೇರೆ ಮನ್ಗೆ ಹೋಗೋಕ್ಕೆ ಮನಸ್ಸು ಬರ್‍ತಾ ಇಲ್ಲ."

" ಏನೋ....ಶೀನಿ ನೀನು ಈಗ ತುಂಬಾ ಬದಲಾಯ್ಸಿ ಹೋಗಿದ್ದೀಯೆ ....ನಿನ್ನ ಮಾತು ...ನಿನ್ನ ನಡತೆ ಏನೂ ಗೊತ್ತಾಗ್ತಾನೇ ಇಲ್ಲ." ರಾಯರು ನುಡಿದರು. ಅಷ್ಟರಲ್ಲಿ ಅಡಿಗೆಯವನು ಕಾಫಿ ತಿಂಡಿಯನ್ನು ಸಿದ್ಧಪಡಿಸಿ ಬಂದು ತಿಳಿಸಿದ.

" ನೀನೇನಪ್ಪ ಶೀನಿ ...ಈಗ ಒಬ್ಬ ಆಫೀಸರು...." ಸುಬ್ಬಣ್ಣ ನಕ್ಕು ಕೈಕಾಲು ತೊಳೆಯಲು ಬಚ್ಚಲ ಮನೆಯ ಕಡೆಗೆ ನಡೆದ. ರಾಯರೂ ಹಿಂಬಾಲಿಸಿದರು.

ಎಲ್ಲರೂ ಕುಳಿತು ಉಪಹಾರವನ್ನು ಮುಗಿಸಿದರು. ಸೀತಮ್ಮ ಒಬ್ಬಳು ತೆಗೆದುಕೊಳ್ಳಲಿಲ್ಲ.

ಮೂರು ವಾರಗಳಲ್ಲಿ ಸುಬ್ಬಣ್ಣನೇ ಸುತ್ತಾಡಿ ಗಾಂಧೀ ನಗರದಲ್ಲಿ ಒಂದು ಔಟ್ ಹೌಸನ್ನು ಬಾಡಿಗೆಗೆ ಗೊತ್ತುಮಾಡಿಕೊಂಡು ಬಂದ. ಶೀನಿ ಬಹಳ ಬಲವಂತಪಡಿಸಿದರೂ ರಾಯರು ಅವರ ಮನೆಯಲ್ಲಿ ಇರಲು ಒಪ್ಪ ಲಿಲ್ಲ. "ಒಂದು ದಿನ ಚೆನ್ನ....ನಾಲ್ಕು ದಿನ ಚೆನ್ನ ಹಾಗೆಲ್ಲಾ ಖಾಯಂ ಆಗಿ ನಿಲ್ಲಬಾರದು ಶೀನಿ. ಅದೂ ಅಲ್ದೆ ನಮ್ಮಂಥ ಹಳ್ಳಿಯೋರಿಗೆಲ್ಲಾ ಯಾಕಪ್ಪಾ ಇಂಥಾ ಬಂಗಲೆ. ಇನ್ನೂ ನಿನ್ನ ಹೆಂಡತಿ ಬರಬೇಕಾಗಿದೆ... ನೀನೂ....ನಿನ್ನ ಹೆಂಡ್ತಿ ರಾಜಾ....ರಾಣಿ ಇದ್ದಹಾಗೆ ಇರಿ....ನಾವು ಹೋಗ್ತಾ ಬರ್ತಾ ಇರ್ತೀವಿ...." ನಕ್ಕು ನುಡಿದರು ರಾಯರು. ಶೀನಿ ನಗ ಲಿಲ್ಲ. "ಹೆಂಡತಿ....! ರಾಜಾ ...ರಾಣಿ...." ರಾಯರು ಹೇಳಿದುದನ್ನು ನೆನದಾಗ ಮುಖ ಗಂಟಾಯಿತು.

"ನಮ್ಮನೆಗೆ ಬರ್ತಾ ಇರು....ಶೀನಿ. ನಾವೂ ಬರ್ತಾ ಇರ್ತೀವಿ...." ಶಕುಂತಲ ಆಹ್ವಾನಿಸಿದಳು. "ನೀನು ಕರೀದೆ ಇದ್ರೂ ನಾನು ಬರ್ತೀನಿ.... ಶಕುಂತಲ..." ನುಡಿಯುವಾಗ ಸಮಾಧಾನಗೊಂಡಿತ್ತು ಮನಸ್ಸು.

"ಅಷ್ಟು ಅಭಿಮಾನ ಇಟ್ಕೊಂಡಿರಪ್ಪ...." ಸೀತಮ್ಮ ನುಡಿದಳು.

'ಅಭಿಮಾನ....!' ಶೀನಿಗೆ ಈ ಮಾತು ವಿಚಿತ್ರವಾಗಿತ್ತು.

"ಬೇಗ ಮದ್ವೆ ಆಗು ಶೀನಿ...." ಶಕುಂತಲ ನುಡಿದಳು.

"ಹೂಂ !....ಮದುವೆ .. ! ಬಹುಶಃ ನನ್ನ ಹಣೇಲಿ ಬರೆದಿಲ್ಲ....ಮದ್ವೆ ಇಲ್ಲದೆಯೂ ಮನುಷ್ಯ ಬದುಕಬಲ್ಲ....ಶಕುಂತಲ....!" ನುಡಿದು ನಕ್ಕ. ಶಕುಂತಲ ತಲೆ ತಗ್ಗಿಸಿದಳು. ತಾನು ಆಡಿದ್ದು ತಪ್ಪೆಂದು ಕಾಣಿಸಿತ್ತು ಅವಳಿಗೆ.

'ನನಗೆ ಕಾಲೇಜಿನಲ್ಲಿ ಓದಲು ಮನಸ್ಸಿಲ್ಲ ಶೀನಿ. ಓದುವಷ್ಟು ಬುದ್ಧಿಯೂ ಇಲ್ಲ, ಮನಸ್ಸೂ ಇಲ್ಲ ...!'

'ಓದಿದ ಹುಡುಗಿ ಗಂಡನ್ನ ಚೆನ್ನಾಗಿ ಆಳ್ತಾಳೆ....ಹೆಚ್ಚಿಗೆ ವಿದ್ಯೆ ಇದ್ದಷ್ಟೂ ಗಂಡನ್ನ ಕೈಲಿ ಹಿಡಿದು ಕುಣಿಸಬಹುದು' ಶೀನಿ ನುಡಿದಿದ್ದ.

'ಶಕುಂತಲಳಿಗೆ ಮುಖ್ಯವಾಗಿ ಮಗು ಸಾಕೋ ವಿದ್ಯೆ ಬೇಕು....ಶಿಶು ಪಾಲನೆ....' ಗ್ರೇಸ್ ಲೀಲಾವತಿ ವಿಕಟವಾಗಿ ನಕ್ಕಿದ್ದಳು.

'ಹಾಗಾದ್ರೆ ಮದ್ವೆ ಆಗಿ ಮಕ್ಕಳು ಹಡಕೊಂಡು ಇರ್ತೀತಾನೆ....?" ಶೀನಿ ಪ್ರಶ್ನಿಸಿದ್ದ

ಒಂದೋದಾಗಿ ಹಿಂದಿನ ನೆನಪು ಬಂದಾಗ ತತ್ತರಿಸಿದಳು.

"ಮ್ಮಾ ...ಮಾ..." ಎಂದು ಕೂಗುತ್ತ ಪಕ್ಕದ ಮನೆಯಾಕೆಯ ಮಗು ಕೈ ಚಾಚಿ ತನಗೆ ಬರುತ್ತಿದ್ದ ಒಂದೇ ಮಾತನ್ನು ಬಾಯಿ ತುಂಬ ನುಡಿದು ಇತ್ತಲೇ ಬರುತ್ತಿತ್ತು.

"ಮ್ಮಾ....ಮಾ...." ತಾಯಾಗುವ ಭಾಗ್ಯ ಉಂಟೆ ತನಗೆ....?

ಮೈ ಜುಮ್ಮೆಂದಂತಾಯಿತು. ಮಗು ಪುನಃ ಕೂಗಿ ತೊಡರು ಕಾಲನ್ನು ಎತ್ತಿಹಾಕಿ ಇತ್ತಲೇ ಬರುತ್ತಿತ್ತು. ಶಕುಂತಲ ಓಡಿಹೋಗಿ ಎದೆಗೆ ಅವಚಿ ಕೊಂಡಳು. ಮತ್ತೆ ಮತ್ತೆ ಅವಳ ಹಾಲುಕೆನ್ನೆಗೆ ಮುತ್ತು ಕೊಟ್ಟಳು. ಮಗು ಕೊರಳ ಸುತ್ತ ಕೈಯ ಸರಿಸಿ ಕರೀಮಣಿಯನ್ನು ಹಿಡಿದೆಳೆಯಿತು.

"ನಿನಗೆ ಮದ್ವೆ ಆಗಿದೆಯೇನೆ ಶಕುಂತಲ... ?" ಕಾಲೇಜಿನಲ್ಲಿ ಅಂಬುಜಾ ನಕ್ಕು ಪ್ರಶ್ನಿಸಿದ್ದಳು.

"ನಿನ್ನ ಗಂಡನ್ನ ನಂಗೆ ತೋರಿಸಲ್ವೇನೆ....?" ಮಂಜುಳ ಪ್ರಶ್ನಿಸಿದ್ದಳು.

"ಮದ್ವೆ ಆದಮೇಲೆ ಹೆಣ್ಣಿಗೆ ಒಂದು ಜಂಭಾ ಬಂದುಬಿಡುತ್ತೆ...." ಯಾರೊ ನಗೆಯಾಡಿದ್ದರು.

"ಗಂಡ ಸಾಹುಕಾರ ಅಂತ ಕಾಣ್ಸುತ್ತೆ....ತಾಳಿ ಒಂದು ತೊಲ ಇರ್ಬೇಕು...!' ತಾಳಿಯ ಗಾತ್ರದಲ್ಲಿ ಗಂಡನ ಸಿರಿತನವನ್ನು ಅಳೆದಿದ್ದಳು ಒಬ್ಬಳು.

ತಾಳಿ....! ಕರೀಮಣಿ....! ಗಂಡ....!! ಒಂದೊಂದೆ ಪದವನ್ನು ನುಡಿದು ಮಗುವನ್ನು ಕೆಳಗಿಳಿಸಿದಳು.

ತಾಳಿ ಕಟ್ಟಿದೆ...! ಮದುವೆಯಾಗಿದೆ...!

ಹೌದು ತನಗೆ ಮದುವೆಯಾಗಿದೆ....ಗಂಡನೂ ಬದುಕಿದ್ದಾನೆ....ಆದರೆ ತಾನು ಅವನ ಪತ್ನಿಯೇ ...?! ವಿಕರಾಳಪ್ರಶ್ನೆ. ಎಂದೆಂದೂ ಉತ್ತರ ದೊರೆ ಯದ ನಿರ್ಜೀವ ಪ್ರಶ್ನೆ.

ಕರೀಮಣಿ ಮದುವೆಯ ದ್ಯೋತಕ..! ಅದನ್ನು ಕಿತ್ತುಹಾಕಿಬಿಡು ವಷ್ಟು [illegible] ಬಂತು. ತಾಳಿ ಕಟ್ಟಿದ ಗಂಡನ ಮನೆಗೆ ಹೋಗುವ ಭಾಗ್ಯ ವಿಲ್ಲ [illegible] ಹಣ ಕೊಟ್ಟು, ಒಡನೆ ಹಿಂತಿರುಗಿಸಿ ಗಂಡನ ಕೈಲಿ ನನಗೂ ಶಕುಂತಲೆ [illegible] ಸ ಸಂಬಂಧವೂ ಇಲ್ಲವೆಂದು ಕಾಗದ ಬರಸಿಕೊಂಡು ಬಂದಿದ್ದ [illegible]

ಗಂ[illegible] ತಾಳಿಗಾಗಿ ಬಾಳಿ ಅಳಿಯಬೇಕೆ... ?

'[illegible] ಸ್ವಾತಂತ್ರಳಿದ್ದಿ....ನೀನು ಏನು ಬೇಕಾದರೂ ಮಾಡ ಬಹುದು [illegible] ಸ್ವಾತಂತ್ರ್ಯ ಕೊಟ್ಟದ್ದ.

'ಗಂಡನಿಗೆ ಹೆಂಡತಿಯಾಗಿ ಬಾಳುವುದು ತಪ್ಪೇ ಶೀನಿ....?' ಅಂದು ಇವಳೇ ಪ್ರಶ್ನಿಸಿದ್ದಳು. ಇಂದು ತಾನು ಗಂಡನಿಗೆ ಹೆಂಡತಿಯಾಗಿ ಬಾಳುವ ಭಾಗ್ಯ ಪುನಃ ಪಡೆಯಬಲ್ಲೆನೆ ಅನ್ನಿಸಿತು.

ಯಾಕೆ ಆಗಬಾರದು....? ತಾನು ಹೆಂಡತಿಯಾಗಲಾರನೆ? ತನ್ನಲ್ಲಿ ಯೌವನವಿಲ್ಲವೆ? ರೂಪವಿಲ್ಲವೆ? ಬಾಳಬೇಕೆಂಬ ಆಕಾಂಕ್ಷೆಯಿಲ್ಲವೆ?....

'ಹೆಣ್ಣು....ಹೆಣ್ಣಾಗಿ ಹುಟ್ಟಿ ಗಂಡನೊಡನೆ ಸಂಸಾರ ಸುಖ ಅನುಭವಿಸದೆ ಬದುಕಿ ಉಳಿಯಲಾರಳು' ಅಜ್ಜಿ ಹೇಳಿದ್ದ ಮಾತು ವಾಸ್ತವವೆಂದು ಇವಳಿಗೂ ಕಂಡಿತ್ತು.

"ಬೇಕು....ನನಗೂ ಒಬ್ಬ ಸುಂದರ ಗಂಡ ಬೇಕು...." ಭಾವದ ಭಾರ ಅತಿಯಾಗಿ ಬಾಯಿ ಬಿರಿಯಿತು.

ತಾಳಿ....! ಕರಿಮಣಿ....! ನೆನಪು ಬಂದೊಡನೆ ಅಲ್ಲಿ ನಿಲ್ಲಲಾರದೆ ತನ್ನ ರೂಮಿನೊಳಗೆ ಓಡಿಹೋದಳು. ಮಂಚದ ಮೇಲೆ ಬೋರಲಾಗಿ ಮಲಗಿ ಬಿಕ್ಕಿ ಬಿಕ್ಕಿ ಅತ್ತಳು. ಎತ್ತಿಕೊಳ್ಳದೆ ಓಡಿಹೋದ ಇವಳನ್ನು ಕಂಡು ಹೊರಗಡೆ ಮಗು ಒಂದೇ ಸಮನಾಗಿ ಅಳುತ್ತಿತ್ತು.

ಮನಸ್ಸು ಬಯಸಿದ್ದು ಶಕುಂತಲಳ ಜೀವನದಲ್ಲಿ ಒಂದೂ ನಡೆದಿಲ್ಲ. ಬೇಡವೆಂದ ವಿದ್ಯೆಯೇ ಇಂದು ಅವಳ ಮನಸ್ಸಿಗೆ ಸ್ವಲ್ಪ ಶಾಂತಿಯನ್ನು ಕೊಟ್ಟಿದೆ. ಏಕಾಂತದ ತ್ರಿಶೂಲಾಘಾತದಿಂದ ತಪ್ಪಿಸಿಕೊಳ್ಳಲು ತಂದೆಯ ಬಯಕೆಯನ್ನು ಪೂರ್ತಿ ಮಾಡುವ ಉದ್ದೇಶ್ಯದಿಂದ ಕಾಲೇಜು ಸೇರಿದ್ದಳು. ಒಂದು ವರ್ಷದ ಕಾಲೇಜು ಅಭ್ಯಾಸ ಸ್ವಲ್ಪ ಪರಿಣಾಮವನ್ನೇನೊ ಮಾಡಿತ್ತು. ಭೂತಕಾಲದ ನೆನಪು ಸ್ವಲ್ಪ ಮಸುಕಾಗಿದ್ದರೂ ಭವಿಷ್ಯದ ಆಕಾಂಕ್ಷೆಯನ್ನು ಉತ್ತೇಜನಗೊಳಿಸಿತ್ತು.

"ಸುಮ್ನೆ ಇರು....ಶಕುಂತಲ. ನೀನು ಅಳಬೇಡ. ನೀನು ಅತ್ತರೆ ನನ್ನ ಕರುಳು ಕತ್ತರಿಸುತ್ತೆ. ನಿಂಗೆ ಮದ್ವೆ ಮಾಡ್ತೇನಿ....ಸುಖವಾಗಿರ್ತಿ ... ಸುಮ್ಮನಿರು....ಮಗು...." ಸಾಮಾನ್ಯವಾಗಿ ಪ್ರತಿ ನಿತ್ಯವೂ ನುಡಿಯುತ್ತಾರೆ ತಂದೆ. ಆದರೆ ಒಂದು ವರ್ಷದಿಂದ ಹುಡುಕುತ್ತಿದ್ದಾರೆ. ಇನ್ನೂ ಗಂಡನಾಗುವ ವ್ಯಕ್ತಿ ಸಿಕ್ಕಿಲ್ಲ.

ಗಂಡಸು ಎರಡನೆಯ ಮದುವೆಯನ್ನು ಆಗಬಹುದು. ಆದರೆ ಹೆಣ್ಣು ಆಗುವ ಹಾಗಿಲ್ಲ. ಇದು ಧರ್ಮವಿರುದ್ಧವಾದ್ದು. ಗಂಡು ಹತ್ತು ಮದುವೆಯಾದರೂ ಅದು ಶಾಸ್ತ್ರ ಸಮ್ಮತ.

ಶೀನಿ ಅಂದು ಪಾರ್ಕಿನಲ್ಲಿ ಇದನ್ನೇ ನುಡಿದಿದ್ದ ಅವಳು ಇದನ್ನು ಕಟುವಾಗಿ ವಿರೋಧಿಸಿದ್ದಳು.

ಇಂದು....??

ಉತ್ತರ ಹೊಳೆಯಲಿಲ್ಲ.

ನಾನು ಸಾಯಬೇಕು....ಬದುಕುವ ದಾರಿಯೇ ಇಲ್ಲ ಅನ್ನಿಸಿತು.

ಶೀನಿ....! ಹೌದು ಆತನಿಗೆ ಮದುವೆಯಿಲ್ಲ. ನನ್ನಲ್ಲಿ ಅವನಿಗೆ ಇನ್ನೂ ಅಭಿಮಾನವಿದೆ.

ನೆನಪು ಬಂದಾಗ ಮಂಚದ ಮೇಲೆ ಎದ್ದು ಕುಳಿತಳು. ಎದುರಿನ ಕನ್ನಡಿಯನ್ನು ನೋಡಿದಳು. ಪ್ರತಿಬಿಂಬ ನೋಡಿ ನಕ್ಕಳು. ಮುಂಗುರಳನ್ನು ಸರಿಸಿ ಎದೆಯ ಮೇಲಿನ ಸೆರಗನ್ನು ಸರಿಪಡಿಸಿಕೊಂಡಳು. ಪುನಃ ಹುಸಿಯಾಗಿ ನಕ್ಕಳು. ತಾನು ಚೆಲುವೆ ಅನ್ನಿಸಿತ್ತು.

ಆದರೆ ...!

ಸಾರ್ಥಕತೆ....? ಉತ್ತರ ಹೊಳೆಯದೆ ಪುನಃ ಹಾಸಿಕೆ ಮೇಲೆ ಉರುಳಿದಳು.

## ೩೦

"ಶಕುಂತಲಾ....ತಕುಂತಲಾ...." ಎಂದು ಕೂಗುತ್ತಲೇ ಶೀನೆ ಮನೆಗೆ ಬಂದ. "ಬಾಪ್ಪಾ....ಶೀನಿ...." ಅಡಿಗೆ ಮನೆಯಲ್ಲಿ ತಾಯಿ ಸ್ವಾಗತಿಸಿದಳು.

ಶೀನಿ ಸೀದಾ ಶಕುಂತಲೆಳ ರೂಮಿಗೆ ಬಂದ. ಮಲಗಿದ್ದವಳು ಎದ್ದು ಕುಳಿತಳು. ಶೀನಿಯ ಸ್ವರ ಕೇಳಿ ತನ್ನ ತುಟಿಗಳು ಬಿರಿದುದನ್ನು ಕನ್ನಡಿಯಲ್ಲಿ ಕಂಡಳು.

"ಶಕುಂತಲಾ...." ಬಾಗಿಲಲ್ಲಿ ನಿಂತು ತೂರಾಡುತ್ತಿದ್ದ ಶೀನಿ. ಕಣ್ಣು ಕೆಂಪಗಾಗಿತ್ತು ಮುಖ ಬಳಲಿತ್ತು. ಶಕುಂತಲ ಗಾಬರಿಗೊಂಡಳು. ಹತ್ತಿರ ಸರಿದು "ಶೀನೀ ..." ಕೂಗಿದಳು. ಆತ ತೂರಾಡಿ ಇನ್ನೊಂದು ಹೆಜ್ಜೆ ಮುಂದೆ ಇಟ್ಟ. ಶಕುಂತಲ ಅವನ ಕೈಯನ್ನು ಹಿಡಿದುಕೊಂಡು ಮಂಚದ ಬಳಿಗೆ ಕರೆದುಕೊಂಡು ಹೋದಳು. ಮಂಚದ ಬಳಿಗೆ ಹೋಗಿ ಹಾಗೆಯೇ ಕುಸಿದುಬಿದ್ದ. "ಅಮ್ಮಾ..." ಕೂಗಿದಳು. ಶೀನಿಯ ಅವಸ್ಥೆಯನ್ನು ಕಂಡು ಪೂರ್ಣ ಭಯಗೊಂಡಳು." ಅಮ್ಮಾ ...ಸ್ವಲ್ಪ ಕಾಫಿ ಮಾಡಮ್ಮ ... ಹಾಗೇ ನೀರು ತಗೊಂಡು ಬಾರಮ್ಮ .." ಅಲ್ಲಿಂದಲೇ ಕೂಗಿದಳು. ತಾಯಿ ಗಾಬರಿಯಿಂದ ಒಳಗೆ ಬಂದಳು. ತಾಯ ಕೈಯಿಂದ ನೀರಿನ ಲೋಟಾ

ವನ್ನು ತೆಗೆದುಕೊಂಡು ತಲೆಗೆ ನೀರನ್ನು ತಟ್ಟಿದಳು. ಸ್ವಲ್ಪ ಹೊತ್ತಿನ ನಂತರ ಕಣ್ಣನ್ನು ತೆರೆದು ಸುತ್ತಲೂ ನೋಡಿದ.

"ಇದ್ಯಾಕೊ ಶೀನಿ....ನಿನ್ನ ಆರೋಗ್ಯದ ಕಡೆಗೆ ನೀನು ಸ್ವಲ್ಪ ನಿಗಾ ತಗೋಬಾರ್ದೇನೋ....? ಹೀಗಾಗ್ತಾ ಇರೋದು ಇದು ಎರಡು ಮೂರನೇ ಸಾರಿ....ಎಲ್ಲಾರೂ ಸರಿಯಾದ ಡಾಕ್ಟರಿಗೆ ತೋರ್ಸಿ ಔಷಧಾ ತಗೊಳ್ಳಪ್ಪ...." ಸೀತಮ್ಮ ನುಡಿದರು.

"ನಂಗೇನೂ ಇಲ್ಲಮ್ಮ. ಎಲ್ಲೊ ಸ್ವಲ್ಪ ತಲೆ ತಿರುಗಿದ ಹಾಗಾಯ್ತು.... ಸೈಕಲ್ಲ ಮೇಲೆ ಬಿಸಲಲ್ಲಿ ಬಂದೆ ನೋಡು....ಅದಕ್ಕೆ ಅಷ್ಟೇ....ನಂಗೇನೂ ಆಗಿಲ್ಲ. ಒಂದು ಲೋಟಾ ಕಾಫೀನ ಮಾಡಿಕೊಡ್ತೀರಾ...." ಮಂಚದ ಮೇಲೆ ಎದ್ದು ಕುಳಿತ. ಶಕುಂತಲ ಮಂಚದಿಂದ ಇಳಿದು ಕೆಳಗೆ ನಿಂತಳು. ತಾಯಿ ಅಡಿಗೆ ಮನೆಯ ಕಡೆಗೆ ಹೋದಳು.

"ಬಡವಾಗ್ತಾ ಇದ್ದೇನೆ....!" ವಿಕಾರವಾಗಿ ನಕ್ಕ ಶೀನಿ. "ಬಡವಾಗ್ದೆ ಇನ್ನೇನು ಮೈ ಕೈ ತುಂಬಿ ಊದ್ತಾ ಇರ್ಬೇಕಾ....!....ಆಗೋಯ್ತು ಶಕುಂತಲ...ನನ್ನ ಕಾಲ ಆಗಿಹೋಯ್ತು....ಇಷ್ಟರಲ್ಲೆ ನಾನು ಸತ್ತರೂ ಅದೇನು ಹೆಚ್ಚಿಲ್ಲ..." ಪುನಃ ನಕ್ಕು ಶಕುಂತಳನ್ನು ತೀಕ್ಷ್ಣವಾಗಿ ನೋಡಿದ.

"ಸುಮ್ನಿರು....ಶೀನಿ ಹಾಗೆಲ್ಲಾ ನುಡೀಬಾರ್ದು...." ಅವನ ಬಾಯ ಮೇಲೆ ಕೈಯನ್ನು ಇಟ್ಟಳು.

"ಬದುಕುವ ಬಯಕೆಯೇ ಇಂಗಿ ಹೋಗಿದೆ ಶಕುಂತಲ....ನಾನು ಯಾರಿಗೂ ಬೇಕಾಗಿಲ್ಲ. ನಾನು ಬದುಕುವ ಇಚ್ಛೆ ಯಾರಿಗೂ ಇಲ್ಲ.... ಸತ್ತು ಸುಣ್ಣವಾಗ ಬೇಕು....ಬದುಕಿ ಉಳಿದಿರಬಾರದು..." ಮೆಲ್ಲಗೆ ಅವಳ ಕೈಯನ್ನು ತನ್ನ ಕೈಯಲ್ಲಿ ಹಿಡಿದುಕೊಂಡ.

"ಬಾಯಿಗೆ ಬಂದ ಹಾಗೆ ನುಡೀ ಬೇಡ ಶೀನಿ. ನಾಯೋ ಅಂತಾದ್ದು ಏನಾಗಿದೆ ನಿಂಗೆ....!?"

"ಹೌದು ಶಕುಂತಲ....ನನಗೆ ಇಂದು ಸಾವು ಬೇಕು....ಸಾಯಲೇ ಬೇಕು. ನನ್ನ ಮನಸ್ಸಿನ ನೋವು ಯಾರಿಗೂ ಅರ್ಥವಾಗುವಂತಿಲ್ಲ.... ನೊಂದು ನೊಂದು ಬದುಕಿರುವುದಕ್ಕಿಂತ ಸತ್ತು ಹೋಗುವುದು ಒಳ್ಳೆಯ ದಲ್ಲವೆ. ..? ಬದುಕಿ ಉಳಿಯ ಬೇಕಾದರೆ ಆಸೆ ಇರಬೇಕು....ನನ್ನ ಆಸೆ....! ....ಆಸೆ...!!....ನಂಗೂ ಆಸೆಯಿತ್ತು....ಏನೇನೋ ಬಯಸಿದ್ದೆ....ಆಸೆ ಈಡೇ ರಿದ್ದರೆ ಹ್ಯಾಗೋ ಇರ್ತಿದ್ದೆ....ಇಂದು ಆಸೆಯಿಲ್ಲ...." ಪುನಃ ನಕ್ಕು "ನಾನು ಯಾರಿಗಾಗಿ ಬದುಕಬೇಕು....ಶಕುಂತಲ...." ಪುನಃ ನಕ್ಕು ಅವಳ ಮುಖದ

ಹತ್ತಿರ ಮುಖ ಇಟ್ಟು ನುಡಿದ. ಶಕುಂತಲ ಮುಖವನ್ನು ಅತ್ತ ಸರಿಸಿದಳು. ಮುಖ ವಿವರ್ಣಗೊಂಡಿತ್ತು.

"ನೋಡು ಶಕುಂತಲ ...ನಿನಗೂ ನಾನು ಬೇಡವಾಗಿದ್ದೇನೆ....ನಿನ್ನ ಮುಖವನ್ನೇ ನೀನು ಕನ್ನಡಿಯಲ್ಲಿ ನೋಡಿಕೊ....ನಿನ್ನ ಮುಖದಲ್ಲಿ ತಿರಸ್ಕಾರ ಇದೆ....ನನ್ನ ಕಂಡರೆ ನಿನಗೆ ಆದರವಿಲ್ಲ....ನಾನು ಬೇಡದ ವಸ್ತು....ಅಮ್ಮನಿಗೆ ಬೇಡವಾದೆ....ಅಮ್ಮ ಸಿಟ್ಟುಗೊಂಡು ಊರಿಗೆ ಹೊರಟು ಹೋದಳು. ....ನನ್ನ ಮುಖ ಕಂಡರೆ ನಿನಗೆ ತಿರಸ್ಕಾರ....ಇನ್ನೂ ನಾನು ಬದುಕಿರಬೇಕೆ....?" ಶಕುಂತಲಳ ಕೈಯನ್ನು ಬಿಗಿಯಾಗಿ ಅದುಮಿದ.

"ನನ್ನಲ್ಲಿ ಯಾರಿಗೂ ಆದರ ಹುಟ್ಟುವ ಹಾಗೇ ಇಲ್ಲ....ನಾನು ಈಗ ಹೆಂಡ ಕುಡಿಯುತ್ತೇನೆ....ಬೀರ್....ವಿಸ್ಕಿ....ಎಲ್ಲಾ ಉಂಟು....ಅನೇಕ ಹೆಂಗಸರನ್ನು ನೋಡಿದ್ದೆನೆ....ನಾನು ಅನುಭವಿಸದ ಸುಖಾ ಇನ್ನೇನೂ ಉಳಿದಿಲ್ಲ.... ಇನ್ನೇನೂ ಉಳಿದಿಲ್ಲ....ಶಂಕುಂತಲ .. ನಾನು ಸತ್ತರೂ ನನಗಾಗಿ ಒಬ್ಬರೂ ಒಂದು ಹನಿ ಕಣ್ಣೀರು ಸುರಿಸಬೇಕಾಗಿಲ್ಲ."

"ಬಾಯಿಗೆ ಬಂದಹಾಗೆ ಹರಟಬೇಡ ಶೀನಿ....ನಿನ್ನ ಮನಸ್ಸು ನಿನ್ನ ಸ್ಥಿಮಿತದಲ್ಲಿಲ್ಲ...." ಅವನನ್ನು ಬಲವಂತದಿಂದ ಹಾಸಿಗೆಯ ಮೇಲೆ ಮಲಗಿಸಿದಳು.

"ಸುಮ್ನೆ ಮಲಗಿರು ಶೀನಿ....ನಿನ್ನ ತಲೆ ಸುಡ್ತಾ ಇದೆ....ಸುಮ್ನೆ ಮಾತ್ನಾಡ್ದೆ ಮಲಗಿರು....ಷಾಪಿಗೆ ಹೋಗಿ ಔಷಧ ತರ್ತೇನಿ....ಜ್ವರದ ಉನ್ಮಾದದಲ್ಲಿ ಏನೇನೊ ಹರಟ್ತಾ ಇದ್ದಿ...."

"ಜ್ವರ ಬಂದಿದೆಯೇನೆ ಶಕುಂತಲಾ....?" ಪ್ರಶ್ನಿಸುತ್ತ ಸೀತಮ್ಮ ಒಳಗೆ ಕಾಫಿಯನ್ನು ತೆಗೆದುಕೊಂಡು ಬಂದಳು.

"ಇಲ್ಲಮ್ಮ ಸೀತಮ್ಮ....ನಂಗೆ ಜ್ವರವೂ ಇಲ್ಲ ಏನೂ ಇಲ್ಲ.... ಸುಮ್ನೆ ಹೇಳ್ತಾಳೆ ಇವಳು ಅಷ್ಟೆ....ಹೊರಗಡೆಯಿಂದ ಬಿಸಲಲ್ಲಿ ಬಂದೆ ನೋಡಿ.... ಅದಕ್ಕೆ ಮೈ ಸ್ವಲ್ಪ ಬೆಚ್ಚಗಿರಬೇಕು ಅಷ್ಟೆ...." ಶಕುಂತಲ ಹೊದಿಸಿದ್ದ ರಗ್ಗನ್ನು ಕಾಲಿನಿಂದ ಒದೆದು ಎದ್ದು ಕುಳಿತ.

"ಅಮ್ಮಾ....ಸುಬ್ಬಣ್ಣ ಬಂದ್ರೆ ಡಾಕ್ಟರ ಹತ್ರ ಹೋಗಿ....ಜ್ವರಕ್ಕೆ ಔಷಧಿ ತಾ ಅನ್ನು ಹುಚ್ಚುಚ್ಚಾಗಿ ಆಡ್ತಾ ಇದ್ದಾನೆ....ತಲೆ ಸುಡ್ತಾ ಇದೆ.... ಜ್ವರ ಇಲ್ವಂತೆ....ಜ್ವರ...." ಅವನ ಭುಜವನ್ನು ಹಿಡಿದು ಮಲಗಿಸಿದಳು. ಕತ್ತಿನ ತನಕ ಪುನಃ ರಗ್ಗನ್ನು ಹೊದೆಸಿದಳು. ತಾಯಿ ನೆಲದ ಮೇಲೆ ಇಟ್ಟ ಕಾಫಿಯನ್ನು ತೆಗೆದುಕೊಂಡು ಸ್ವಲ್ಪ ಸ್ವಲ್ಪವಾಗಿ ಕುಡಿಸಿದಳು.

"ಸುಮ್ಮನೆ ಮಲಗಿರು....ಶೀನಿ....ನಾಲ್ಕುದಿನ ಸರಿಯಾಗಿ ವಿಶ್ರಾಂತಿ ತಗೊ ಅಂದ್ರೆ ನೀನು ಕೇಳಲ್ಲ. ಸ್ವಲ್ಪ ಕಡಿಮೆ ಆಯ್ತುಅಂದ್ರೆ ಊರೆಲ್ಲಾ ಕೆಲ್ಸ ಅಂತ ಓಡಾಡ್ತಿ....ಈಸಾರಿ ಪೂರ್ತಿ ವಿಶ್ರಾಂತಿ ತಗೊ ...ಸರಿ ಹೋಗುತ್ತೆ....ಸುಬ್ಬಣ್ಣ ಬಂದ್ರೆ ಔಷಧಿ ತರಿಸ್ತೇನಿ....ನೀನು ಕೂತಿರು ಶಕುಂತಲಾ ಇಲ್ಲೆ...." ಸೀತಮ್ಮ ಹೊರಗೆ ಹೋದಳು.

"ಶಕುಂತಲಾ...." ನಿಧಾನವಾಗಿ ಕೂಗಿದ ಶೀನಿ. ಕಣ್ಣಿನಲ್ಲಿ ಅಶಾಂತಿ ತುಳುಕುತ್ತಿತ್ತು. "ಶಕುಂತಲಾ....ನನ್ನ ಮೇಲೆ ನಿನಗೆ ಸಿಟ್ಟೆ....? ....ನಾನು ಕೆಟ್ಟೋನು ಅಲ್ಲವೆ ?...." ಭಾವನೆಗಳು ಉಕ್ಕಿ ಬರುತ್ತಿದ್ದುವು. ತಲೆಯ ಮೇಲೆ ಇಟ್ಟಿದ್ದ ಅವಳ ಕೈಯನ್ನು ತನ್ನ ಕೈಯಲ್ಲಿ ಹಿಡಿದುಕೊಂಡ. "ನಾನು ...ಪಾಪಿ....!" ಪುನಃ ನುಡಿದ.

'ಪಾಪಿ....!' ಹೌದು ತಾನೇ ನುಡಿದಿದ್ದ ಮಾತು 'ಪಾಪಿ....!' ಅಂದು....ಈಗ್ಯೆ ಸುಮಾರು ನಾಲ್ಕು ತಿಂಗಳ ಹಿಂದಿನ ಮಾತು.

'ಶಕುಂತಲಾ ಎಂದು ಕೂಗುತ್ತ ಶೀನಿ ರೂಮಿಗೆ ಬಂದಿದ್ದ. ಮಂಚದ ಮೇಲೆ ಕುಳಿತುಕೊಂಡ. ಶಕುಂತಲ ಪಕ್ಕಕ್ಕೆ ಸರಿದಳು....ಆತ 'ಶಕುಂತಲಾ ....' ಅಂತ ಹುಚ್ಚನಂತೆ ಅರಚಿದ್ದ. ಬಾಯಲ್ಲಿ ವಾಸನೆ ಬರುತ್ತಿತ್ತು. ಅಂದೂ ಕಣ್ಣು ಕೆಂಪಗಾಗಿತ್ತು. 'ಶಕುಂತಲಾ....!' ಎಂದು ಇನ್ನೊಮ್ಮೆ ಕೂಗಿ ಎದ್ದು ನಿಂತು ಅವಳ ಭುಜವನ್ನು ಹಿಡಿದು ವಿಕಾರವಾಗಿ ಅಲುಗಾಡಿಸಿದ್ದ. ಮುಖದ ಹತ್ತಿರ ಮುಖ ತಂದು ವಿಕಾರವಾಗಿ ನಕ್ಕಿದ್ದ. ಸೊಂಟ ಬಳಸಿ ತುಟಿ ಅರಳಿಸಿ ಹತ್ತಿರ ಎಳೆದುಕೊಂಡಾಗ ಕೆನ್ನೆಗೆ ಒಂದು ಜೋರಾಗಿ ಹೊಡೆದಿದ್ದಳು. 'ಥೂ ಪಾಪಿ....! ನಾಚಿಕೆಯಾಗುವುದಿಲ್ಲವೆ....! ನನಗೆ ಮದುವೆಯಾಗಿದೆ...." ನುಡಿದಿದ್ದಳು. ಶೀನಿ ಹೊಡೆತ ತಿಂದ ಕೆನ್ನೆಯ ಮೇಲೆ ಕೈಯನ್ನು ಇಟ್ಟುಕೊಂಡು ಪುನಃ ಕರಾಳವಾಗಿ ನಕ್ಕಿದ್ದ "ನಾನು ಹೀಗೇ ಆಗಬಹುದೆಂದು ನೆನಸಿದ್ದೆ....ಹಾಳು ಮನಸ್ಸು ಇಲ್ಲಿಗೆ ಆಗೊಲ್ಲ ಎಂದು ಹೇಳಿ ಮೋಸ ಮಾಡ್ತು....ನಾನು....ಪಾಪಿ... ! ನೀನು ಹೇಳಿದ್ದು ಸತ್ಯ....ಶಕುಂತಲ....ನಾನು ಪಾಪಿ....! ನಾನು....ಕುಡುಕ.... ಸ್ತ್ರೀವ್ಯಾಮೋಹಿ....!....ಅಹಹ....! ಅಲ್ಲವೆ... ? ಶಕುಂತಲಾ....ಹೌದು....! ಹೌದು....! ನಾನು ಪಾಪಿ....!" ನುಡಿದು ನಕ್ಕು ತಲೆ ಕೆದರಿಕೊಂಡು ಹೊರಗೆ ಹೊರಟು ಹೋಗಿದ್ದ. ಸ್ತಬ್ಧಳಾಗಿ ನಿಂತ ಶಕುಂತಲ ಒಂದು ಕ್ಷಣದ ನಂತರ ನೆಲದ ಮೇಲೆ ಕುಸಿದು ಬಿದ್ದಿದ್ದಳು. ಹುಚ್ಚನಂತೆ ಹೋಗುವ ಶೀನಿಯನ್ನು ತಂದೆ ಕರೆದಿದ್ದರು, ತಾಯಿ ಬಾಗಿಲ ಹತ್ತಿರ ಹೋಗಿ ಕೂಗಿ

ದ್ದರು....ಆತ ಹಿಂತಿರುಗಿರಲಿಲ್ಲ. ನಗುತ್ತಲೇ ಹೊರಟು ಹೋಗಿದ್ದ.

"ಏನೊ ಅಂದಿದ್ದಾಳೆ....ಅವನು ಹೊರಟು ಹೋದ...." ಹೊರಗಡೆ ತಂದೆ ನುಡಿಯುವಾಗ ಒಳಗಿನ ಆಳಲು ಕಂಪಿಸಿತ್ತು. ತಾಯಿ ಬಿಸಿಯುಸಿರನ್ನು ಬಿಟ್ಟಿದ್ದರು.

ಶಕುಂತಲ ಅಂದು ಬಹು ಹೊತ್ತು ಮಂಚದ ಮೇಲೆ ಮಲಗಿ ಅತ್ತಿದ್ದಳು. ಮನಸ್ಸು ಅಸ್ಥಿರಗೊಂಡಿತ್ತು. 'ನನಗೆ ಮದುವೆಯಾಗಿದೆ....ನಾಚಿಕೆಯಾಗುವುದಿಲ್ಲವೆ....!' ಅವಳ ಪ್ರಶ್ನೆ ನೆನೆದು ಅವಳೆ ನಕ್ಕಳು.

ಇದೊಂದು ಆಸೆಯಿತ್ತು ಇದೂ ನಿರಾಶೆಯಾಯ್ತು ತಾಯಿ ನುಡಿದಿದ್ದಳು. ಅಷ್ಟರಲ್ಲಿ ತಂದೆ ಕೆಮ್ಮಿದುದರಿಂದ ಶಕುಂತಲಳಿಗೆ ಕೇಳಿಸಿರಲಿಲ್ಲ. ಇಂತಹವನ್ನೇ ಏನೊ ನುಡಿದಿದ್ದಾಳೆ ಅಂದುಕೊಂಡಳು.

ಬಹು ಹೊತ್ತು ಅತ್ತು ಕಣ್ಣೀರನ್ನು ಹರಿಸಿದ ಶಕುಂತಲ ಏನೋ ತೀರ್ಮಾನಕ್ಕೆ ಬಂದು ಕಣ್ಣೀರನ್ನು ಒರಸಿಕೊಂಡು ಮುಖ ತೊಳೆದು ಹೊರಗೆ ಹೊರಟಾಗ "ಇದೇನು ಶಕುಂತಲ....ಈ ಉರಿಬಿಸಿಲಲ್ಲಿ...." ತಂದೆ ಪ್ರಶ್ನಿದ್ದರು ಇವಳು ಶೀನಿ ಮನೆಗೆ ಹೋಗಿ ಬರ್ತೀನಿ ಅಂದಾಗ ಅವರು ಹುಸಿಯಾಗಿ ಆಗ ನಕ್ಕಿದ್ದರು. 'ನಂಗೊತ್ತು' ತಾಯಿಯೂ ನಕ್ಕಿದ್ದರು.

ಮುಂದಿನದನ್ನು ನೆನದಾಗ ಶಕುಂತಲಳ ಮೈ ಝುಂ ಎಂದಿತು.

ಹೌದು ...! ಇವಳು ಹೋದಾಗ ಅವನು ರೂಮಿನಲ್ಲಿದ್ದ. ಹೊರಗಡೆ ನಿಂತು ಬಾಗಿಲು ತಟ್ಟಿದ್ದಳು. ಒಳಗಡೆ ತುಳುಕುತ್ತಿದ್ದ ನಗು ಸ್ವಲ್ಪ ಹೊತ್ತು ಸ್ಥಿಮಿತಗೊಂಡಿತ್ತು. ಶೀನಿ ಬಂದು ಬಾಗಿಲು ತೆಗೆದಾಗ ತೂರಾಡುತ್ತಿದ್ದ. ಶಕುಂತಲ ಒಳಗೆ ಇಣಕಿ ನೋಡಿದ್ದಳು. ಒಬ್ಬ ಹೆಂಗಸು ಮಂಚದ ಮೇಲೆ ಮಲಗಿದ್ದಳು. ಮುಂದೆ ಅಲ್ಲಿ ನಿಲ್ಲಲಾರದೆ ಓಡಿಬಂದಿದ್ದಳು. ಮೈ ಜಿವರಿ ಕಾಲುಗಳು ನಡುಗಿದ್ದವು. ಮನಸ್ಸು ಬಳಲಿ ಬುದ್ಧಿ ಹುಚ್ಚಾಗಿತ್ತು. ಅಲ್ಲಿಂದ ಓಡಿದವಳು ಪುನಃ ಮನೆಯ ತನಕ ನಿಂತಿರಲಿಲ್ಲ. ಹಾಸಿಗೆಯ ಮೇಲೆ ಮಲಗಿದವಳು ಎರಡು ದಿನ ಜ್ವರದಿಂದ ನರಳಿದಳಂತೆ. ಇದು ಅವಳಿಗೆ ನೆನಪಿಲ್ಲ. ಅವರ ತಾಯಿ ಆಮೇಲೆ ಹೇಳಿದ ಮಾತು. ಏನೇನೋ ಬಡಬಡಿಸಿದ್ದಳಂತೆ.

ಈ ನೆನಪು ಬಂದಾಗ ಕಂಪಿಸಿದಳು ಶಕುಂತಲ.

ಅವನ ಮುಖ ನೋಡಬಾರದೆಂದು ತೀರ್ಮಾನಿಸಿದ್ದಳು.

ಆದರೆ ಇದಾದ ಮೇಲೂ ಬಹು ಸಾರಿ ಅವನನ್ನು ಕಂಡಿದ್ದಳು. ಒಂದು ತಿಂಗಳು ಮಾತ್ರ ಅವನು ಮನೆಯ ಬಳಿ ಸುಳಿದಿರಲಿಲ್ಲ. ಅನಂತರ ತಂದೆಯು

ಜೊತೆಯಲ್ಲಿ ಬಂದಿದ್ದ. ಅಂದಿನಿಂದ ಅನೇಕ ಸಾರಿ ಬಂದಿದ್ದ. ಶಕುಂತಲ ಬಹು ದಿನ ಅವನೊಡನೆ ಮಾತನಾಡಬಯಸಿರಲಿಲ್ಲ. ಆದರೆ ಮಾತನಾಡಲೇಬೇಕಾಯಿತು. ಪುನಃ ಅವನ ಹತ್ತಿರ ಸುಳಿಯಲೇಬೇಕಾಯಿತು.

ಈಗ್ಗೆ ಸುಮಾರು ಎರಡು ತಿಂಗಳ ಹಿಂದೆ.

ತಂದೆ ಎಂದೂ ಜಟಕಾದಲ್ಲಿ ಮನೆಗೆ ಬಾರದವರು ಅಂದು ಜಟಕಾದಿಂದ ಇಳಿದುದನ್ನು ಕಂಡು ಶಕುಂತಲೆಗೆ ಆಶ್ಚರ್ಯವಾಗಿತ್ತು. ಕೆಳಗೆ ಇಳಿದ ರಾಯರು ಶಕುಂತಲಳನ್ನು ಕೂಗಿದರು. ಶಕುಂತಲ ಗಾಡಿಯ ಹತ್ತಿರ ಹೋಗಿ ಒಳಗೆ ನೋಡಿದಾಗ ಗಾಬರಿಗೊಂಡಳು. ಶೀನಿ ಹೆಣದಂತಾಗಿ ನಿಶ್ಚೇಷ್ಟಿತನಾಗಿ ಮಲಗಿದ್ದ. ಗಾಡಿಯವನು, ಶಕುಂತಲ, ರಾಯರು ಮೂವರೂ ಸೇರಿ ಅವನನ್ನು ಒಳಗೆ ತಂದು ಶಕುಂತಲಳ ಮಂಚದ ಮೇಲೆ ಮಲಗಿಸಿದರು.

" ಜ್ವರ ಬಂದು ನಾಲ್ಕು ದಿನ ಆಯ್ತಂತೆ....ಹೇಳೋರಿಲ್ಲ....ಕೇಳೋರಿಲ್ಲ. ಮನೆ ಅಡಿಗೆಯವನು ಔಷಧಾ ತಂದು ದಿನವೂ ಸುರೀತಾ ಇದ್ನಂತೆ ....ಪಾಪ...! ಜ್ವರ ಸುಟ್ಟು ಹೋಗ್ತಾ ಇದೆ....ಹೇಳೋರು ಕೇಳೋರು ಇಲ್ಲದಾಗ ಹೀಗೇತಾನೆ....!" ತಂದೆ ನುಡಿದಾಗ ಸೀತಮ್ಮ ಕಣ್ಣೀರು ಸುರಿಸಿದಳು. ಶಕುಂತಲಳ ಕಣ್ಣಲ್ಲೂ ಹನಿ ಕೂಡಿತ್ತು.

" ಮದ್ವೆ ಆಗ್ದೆ....ಹುಡುಗ ಕೆಟ್ಟುಹೋದ....ಮದ್ವೆ ಆಗಿ ಹೆಂಡ್ತಿ ಇದ್ದಿದ್ರೆ ಹೀಗಾಗ್ತಾ ಇರ್ಲಿಲ್ಲ....ಒಳ್ಳೇ ಹುಡುಗ ಪಾಪ...."ತಂದೆ ಮರುಗಿದರು.

" ನಮ್ಮ ಶಕುಂತಲಳ ಮೇಲೆ ಅವನಿಗೆ ತುಂಬಾ ಆಸೆಯಿತ್ತು....ಇವನ್ನೇ ಆಗಿದ್ರೆ...ಅವಳಿಗೂ ಈ ಅವಸ್ಥೆ ಬರ್ತಾ ಇರ್ಲಿಲ್ಲ....ಇವನಿಗೂ ಈ ಅವಸ್ಥೆ ಬರ್ತಾ ಇರ್ಲಿಲ್ಲ...ಎಲ್ಲಾ ನಮ್ಮ ಅದೃಷ್ಟ...." ಶಕುಂತಲ ದುಃಖದಿಂದ ಅಲ್ಲಿ ನಿಲ್ಲಲಾರದೆ ಹೊರಗೆ ಹೋದಾಗ ತಾಯಿ ನುಡಿದರು.

ಶಕುಂತಲ ಹಗಲು ರಾತ್ರಿ ಎನ್ನದೆ ಐದಾರು ದಿನ ಅವನ ಆರೈಕೆಯನ್ನು ಮಾಡಿದ್ದಳು.

" ನಾನು ಪಾಪಿ ಶಕುಂತಲ ನನ್ನನ್ನು ಬದುಕಿಸಬಾರದಾಗಿತ್ತು ಶಕುಂತಲ...." ಅವನು ನುಡಿದಾಗ ಇವಳಿಗೆ ಅಳು ಬಂದುಬಿಟ್ಟಿತ್ತು. " ಸುಮ್ನಿರು ....ಶೀನಿ....ಹಾಗೆಲ್ಲಾ ನುಡೀಬೇಡ....ನನ್ನ ಕರಳು ಕತ್ತರಿಸುತ್ತೆ." ಇವಳು ನುಡಿದಿದ್ದಳು.

" ನಾನು ಕೆಟ್ಟದ್ದು ನಿನ್ನಿಂದ ಶಕುಂತಲ." ಆತ ಸೌಮ್ಯವಾಗಿಯೇ ನುಡಿದಿದ್ದ. ಶಕುಂತಲಳಿಗೆ ಆ ಮಾತು ನೆನಪಿಗೆ ಬಂದಾಗ ಕರಳು ಕತ್ತರಿಸಿದಷ್ಟು ವೇದನೆಯಾಯಿತು.

" ನಾನು ಪಾಪ ಮಾಡಿದ್ದೇನೆ....ನನಗೇ ಚೆನ್ನಾಗಿ ಗೊತ್ತು...ಮಾಡ ಬಾರದ ಕೆಲಸ...ಅದೂ ತಿಳಿದಿದೆ....ಆದರೂ ಮಾಡಿದೆ....ನನ್ನ ಮನಸ್ಸು ನನ್ನ ಹಿಡಿತದಲ್ಲಿಲ್ಲ....ನೋವು ಅತಿಯಾಗಿ ಬಯಕೆ ಬರಿದಾಗಿ ಕಂಡಾಗ ನಾನು ಏನು ಮಾಡುತ್ತೇನೆ ಎಂಬುದು ನನಗೇ ನೆನಪಿರುವುದಿಲ್ಲ ಶಕುಂತಲಾ ....ಪ್ರಪಂಚದ ಮೇಲೆಲ್ಲಾ ದ್ವೇಷ ಬರುತ್ತದೆ. ಆಗ ಯಾರಾದರೂ ನಲ್ಮೆ ತೋರಿದಾಗ ಸವಿಮಾತನಾಡಿದರೆ ಕ್ಷಣಿಕ ತೃಪ್ತಿಯಾಗುತ್ತದೆ.... ನೆನಪು ಮಾಸಿ ಮನಸ್ಸು ಸ್ವಲ್ಪ ಹಗುರವಾದ ಹಾಗೆ ಕಾಣುತ್ತೆ....ಅದಕ್ಕೆ ಕ್ಷಣಿಕ ತೃಪ್ತಿಗಾಗಿ ನನ್ನನ್ನೆ ನಾನು ಹಾಳುಮಾಡಿಕೊಂಡೆ....ಈಗ ನಾನು ಮನಸ್ಸು ಮಾಡಿದರೆ....ಸುಧಾರಿಸಬಲ್ಲೆ....ನಾನು ಕೆಟ್ಟಿರುವೆನೇ ಹೊರತು....ಕೆಟ್ಟವ ನಲ್ಲ..." ಇದನ್ನು ನುಡಿಯುವಾಗ ಶೀನಿಯ ಮುಖ ಸಂಪೂರ್ಣವಾಗಿ ಪಶ್ಚಾತ್ತಾಪದಲ್ಲಿ ಬೆಂದಿತ್ತು....ಕಣ್ಣಲ್ಲಿ ನೋವು ಸುಳಿದಿತ್ತು. ಶಕುಂತಳ ಕೈಯನ್ನು ಮೃದುವಾಗಿ ಹಿಸುಕಿ ಮುಖದತ್ತ ಏನೋ ಆಶೆಯಿಂದ ನೋಡಿದ್ದ.

" ನಾನು ನಿಜವಾಗಿಯೂ ಸುಧಾರಿಸಬಲ್ಲೆ ಶಕುಂತಲ. ಮನಸ್ಸಿಗೆ ಶಾಂತಿ ದೊರೆತರೆ ನಿಜವಾಗಿಯೂ ಇದೆಲ್ಲಾ ದೂರ ಸರಿಯುತ್ತೆ ಶಕುಂತಲ...." ಎದ್ದು ಕುಳಿತು ಪುನಃ ಅಂದು ನುಡಿದಿದ್ದ. ಅವನನ್ನು ಮಲಗಿಸಲು ಭುಜದ ಮೇಲೆ ಕೈಯನ್ನು ಇಟ್ಟಾಗ ಆ ಕೈಯನ್ನು ತನ್ನ ಕೈಯಲ್ಲಿ ಅದುಮಿಕೊಂಡು ಮಲಗಿ ಹುಸಿನಗುತ್ತಿದ್ದ ಶಕುಂತಲಳ ಮುಖವನ್ನು ನೋಡಿ ನಿದ್ದೆ ಹೋಗಿದ್ದ. ಶಕುಂತಲ ಅವನ ಭುಜದಿಂದ ಕೈಯನ್ನು ತೆಗೆಯಲು ಅನೇಕ ಬಾರಿ ಬಯಸಿದ್ದರೂ ನಿದ್ದೆಯಿಂದ ಎಚ್ಚರಾದೀತೆಂದು ಹಾಗೆ ಮಾಡಿರಲಿಲ್ಲ.

ಹೌದು. ಶೀನಿ ನಿಜವಾಗಿ ಕೆಟ್ಟವನಲ್ಲ. ಕೆಟ್ಟಿದ್ದರೂ ಸುಧಾರಿಸಬಲ್ಲ. ಅನ್ನಿಸಿತ್ತು ಶಕುಂತಲಳಿಗೆ. ಇಂದೂ ಹಾಗೆಯೇ ಅನ್ನಿಸಿತು.

' ನಾನು ಕೆಟ್ಟಿದ್ದು ನಿನ್ನಿಂದ...ಶಕುಂತಲ ' ಅವನು ಅಂದದ್ದು ಸರಿ ಎಂದು ತೋರಿತು. ಅವನನ್ನು ಮದುವೆಯಾಗಿದ್ದರೆ ಶೀನಿ ಕೆಡುತ್ತಿರಲಿಲ್ಲ ವೆಂದು ಮನಸ್ಸು ಸಾರಿ ಹೇಳಿತು.

" ಶೀನಿ .. ನೀನಲ್ಲ ಪಾಪಿ...ನಾನು .. ನಾನು ಪಾಪಿ....!" ಜೋರಾಗಿ ಕೂಗಿದಳು. ಶೀನಿ ಜ್ವರದ ತಾಪದಲ್ಲಿ ಬೇಯುತ್ತಿದ್ದ. ಅವನ ಕೈಯನ್ನು ಸವರಿ ತಲೆಗೆ ಒದ್ದೆ ಬಟ್ಟೆಯನ್ನು ಹಾಕಿದಳು. ಸುಬ್ಬಣ್ಣ ಔಷಧಿಯನ್ನು ತಂದ. ಅದನ್ನು ಕುಡಿಸಿದಳು.

ಅಂದು ಮಧ್ಯಾಹ್ನವೇ ಶಕುಂತಲೆಯನ್ನು ಒಂದು ಗಂಡಿನ ಮುಂದೆ ಪ್ರದರ್ಶಿಸಿದರು. ಶಕುಂತಲೆಗೆ ಮನಸ್ಸಿಲ್ಲದೆ ಹೋದರೂ ತಂದೆ ತಾಯ್ರಿ

ಹೇಳಿದ ಹಾಗೆ ಕೇಳಬೇಕಾಯಿತು. ಬಂದ ಗಂಡು ಶಕುಂತಲೆಗೆ ಎರಡನೆ ಮದುವೆ ಎಂದು ಕೇಳಿದ ಮೇಲೆ ಷಾಕ್ ಹೊಡೆದವನಂತಾಗಿ ಯೋಚಿಸಿ ತಿಳಿಸುವುದಾಗಿ ಹೇಳಿ ಹೊರಟುಹೋದ. ಶಕುಂತಲೆಗೆ ಅವನು ಹಾಗೆ ಹೇಳಿ ಹೋದುದನ್ನು ಕೇಳಿ ಸ್ವಲ್ಪ ಸಮಾಧಾನವಾಯಿತು. ಹುಡುಗನೇನೊಚೆನ್ನಾಗಿದ್ದ. ಆದರೆ ಇವಳಿಗೆ ಮದುವೆಯಾಗಲು ಮನಸ್ಸಿರಲಿಲ್ಲ. ಆಗಲೇ ನಾಲ್ಕಾರು ಜನ ಹೇಳಿಕಳುಹಿಸುವುದಾಗಿ ಹೇಳಿಹೋದವರು ಇದುವರೆವಿಗೂ ಹೇಳಿ ಕಳುಹಿಸಿರಲಿಲ್ಲ.

"ಹುಡುಗಿ ಏನೋ ಚೆನ್ನಾಗಿದ್ದಾಳೆ....ಒಪ್ಪಿಗೆ ಇದೆ."

"ಕೊಡುವುದೂ ಬಿಡುವುದು ಇದರಲ್ಲಿ ಏನೂ ಮನಸ್ತಾಪ ಬರಬೇಕಾಗಿಲ್ಲ....ನೀವು ಕೇಳಿದುದನ್ನು ಕೊಡುತ್ತೇವೆ. ಇವಳು ನನ್ನ ಒಬ್ಬಳೇ ಮಗಳು....ನನಗೆ ಬೇರೆ ಗಂಡುಮಕ್ಕಳಿಲ್ಲ....ನನ್ನ ಆಸ್ತಿ ಎಲ್ಲಾ ಇವಳದೆ...."

"ಸರಿ ...ಸರಿ....ಅದೂ ಒಪ್ಪಿಗೆ"

"ಹುಡುಗೀಗೆ ಎರಡನೆ ಮದುವೆ. ಆಮೇಲೆ ಮನಸ್ತಾಪ ಬರಬಾರದು. ಇನ್ನೂ ನಿಷೇಕ ಕೂಡ ಆಗಿರಲಿಲ್ಲ. ಗಂಡ ಬಿಟ್ಟುಬಿಟ್ಟ....ಬಿಡಬೇಕೆಂದೇ ಮದುವೆಯಾಗಿದ್ದನಂತೆ." ಎಲ್ಲವೂ ವಿವರಿಸುತ್ತಿದ್ದರು. ಬಂದವರು ಶುಷ್ಕವಾಗಿ ನಗುತ್ತಿದ್ದರು.

"ಹುಡಗಿಏನೊ ಒಪ್ಪಿಗೆ ಇದೆ....ಊರಿಗೆ ಹೋಗಿ ಹೇಳಿ ಕಳಿಸ್ತೇವೆ. ಪ್ರಪಂಚ ಅನ್ನೋದು....ಬರಿ ಮೋಸ ನೋಡಿ....ಮುಖನೋಡಿ ಮೋಸಹೋದ್ರೆ ಆಗೇಹೋಯ್ತು. ಒಳಗೆ ಹಾಲಾ ಹಲ ತುಂಬಿರುತ್ತೆ... ಮಾತಿಗೆ ಹೇಳ್ದೆ ಅಷ್ಟೆ." ಬಂದವರು ನುಡಿದಾಗ ತಂದೆ ಕಂಪಿಸುತ್ತಿದ್ದರು. ಸೀತಮ್ಮ ಕಣ್ಣೀರು ಕರೆಯುತ್ತಿದ್ದಳು.

ಈಸಾರಿ ಬಂದಾಗಲೂ ಇಷ್ಟೆಲ್ಲಾ ಆಯಿತು. ಪ್ರತಿ ಸಾರಿಯಂತೆ ನಿಟ್ಟುಸುರನ್ನು ಬಿಡಲಿಲ್ಲ. ಶಕುಂತಲ ಸಮಾಧಾನದ ಉಸಿರನ್ನು ಬಿಟ್ಟಳು.

ಎರಡು ದಿನಗಳಲ್ಲಿ ಶೀನಿ ಈಸಾರಿ ಸುಧಾರಿಸಿಕೊಂಡ. ಜ್ವರ ಬಿಟ್ಟು ಕಳೆಗುಂದಿದ್ದ ಮುಖದಲ್ಲಿ ನಗು ಮಿಂಚಿತು.

ಶಕುಂತಲಳ ಕಣ್ಣಲ್ಲೂ ಸಂತೋಷ ತುಳುಕಿತು.

ಶೀನಿ ಮಂಚದಮೇಲೆ ಕುಳಿತಿದ್ದ. ಶಕುಂತಲ ಮುಂದುಗಡೆ ಒಂದು ಕುರ್ಚಿಯ ಮೇಲೆ ಕುಳಿತು ಸೇಬನ್ನು ಹೆಚ್ಚಿ ಅವನಿಗೆ ಕೊಡುತ್ತಿದ್ದಳು. ಶೀನಿ ಸೇಬನ್ನು ತಿನ್ನುವುದಕ್ಕಿಂತ ಹೆಚ್ಚು ಆಸಕ್ತಿಯಿಂದ ಅವಳ ಮುಖವನ್ನೇ ನೋಡುತ್ತಿದ್ದ. ಸೇಬನ್ನು ಕೊಡುತ್ತಿದ್ದ ಕೈಯನ್ನು ಮೃದುವಾಗಿ ಹಿಡಿದು

ಕೊಂಡು ಮುಂಗೈಯನ್ನು ಸವರಿದ. "ಶಕುಂತಲಾ ನನ್ನ ಕ್ಷಮಿಸುವೆಯಾ.... ನಿನ್ನಾಣೆ ನಾನು ಎಂದೂ ಅಂತಹ ಪಾಪಕಾರ್ಯ ಮಾಡೊಲ್ಲ ಶಕುಂತಲ.... ನಾನು ಪಾಪಿ–ಯಾಗಿದ್ದೆ....ಇನ್ನು ಪಾಪ ಮಾಡೊಲ್ಲ....ನಿನ್ನಾಣೆ....ನನ್ನ ತಪ್ಪನ್ನು ಕ್ಷಮಿಸುವೆತಾನೆ...." ಆಕಾಂಕ್ಷೆಯಿಂದ ಅವಳ ಮುಖವನ್ನು ತೀಕ್ಷ್ಣ ವಾಗಿ ನೋಡುತ್ತಿದ್ದಾಗ ಹೃದಯದ ಬಯಕೆ ಹಿಣಕಿ ನೋಡುತ್ತಿತ್ತು.

ಶಕುಂತಲಳ ಕಣ್ಣಲ್ಲಿ ನೀರು ಉಕ್ಕಿಬಂತು. ದುಃಖವನ್ನು ತಡೆಯ ಲಾಗಲಿಲ್ಲ. ಬಿಕ್ಕಿ ಬಿಕ್ಕಿ ಅತ್ತುಬಿಟ್ಟಳು.

"ನಾನು....ಪಾಪಿ....ನನ್ನಿಂದ ಯಾರಿಗೂ ಸುಖವಿಲ್ಲ....ನನ್ನನ್ನು ನಂಬಿದೋರೆಲ್ಲರಿಗೂ ನಾನು ದುಃಖಕೊಟ್ಟೆ...." ಅನೇಕ ವಿಷಯಗಳು ಮುತ್ತಿ ಬಂದು ಧಾಳಿ ಎಸಗಿದ್ದವು.

"ನಿನ್ನನ್ನು ನಾನು ಅರ್ಥಮಾಡಿಕೊಳ್ಳಲಿಲ್ಲ....ಶೀನು....ಅರ್ಥಮಾಡಿ ಕೊಂಡಿದ್ದರೆ ಇದೊಂದೂ ಅನರ್ಥವಾಗ್ತಾ ಇರ್ಲಿಲ್ಲ...." ನುಡಿದು ಅವನ ಕೈಯನ್ನು ಭದ್ರವಾಗಿ ಹಿಡಿದುಕೊಂಡು ತಲೆ ಬಗ್ಗಿಸಿ ಅತ್ತಳು. ಕಣ್ಣೀರು ಅವನ ಕೈಯಮೇಲೆ ಬಿತ್ತು.

"ಅಳಬೇಡ ...ಸುಮ್ನಿರು...ಶಕುಂತಲ....ನೀನ ಅತ್ತುದನ್ನು ನಾನು ನೋಡಲಾರೆ ...ನಾನು ದಿನವೂ ಅಳಬಲ್ಲೆ....ಆದರೆ ಎಂದೂ ನೀನು ದುಃಖಿ ಯಾಗುವುದನ್ನ ನಾನು ಬಯಸಲಿಲ್ಲ....ನಿನ್ನ ಕಣ್ಣೀರು ನನ್ನ ಕೊಲ್ಲುತ್ತೆ.... ಶಕುಂತಲ....ಅಳಬೇಡ ಸುಮ್ನಿರು...." ಕೈಯಿಂದ ಕಣ್ಣೀರನ್ನು ವರೆಸಿದ. ಕೆನ್ನೆಯನ್ನು ಮೃದುವಾಗಿ ಸವರಿದ.

ಶಕುಂತಲಳ ದೇಹಾದ್ಯಂತ ವೀಣೆಯಂತೆ ಮಿಡಿಯುತ್ತಿತ್ತು.

"ನಮ್ಮ ಕಣ್ಣೀರು ಸುರಿಸುವ ಕಾಲ ಕಳೆದುಹೋಯಿತು. ಶಕುಂತಲ ....ಅಲ್ಲವೆ....?" ಅವಳ ಕೈಯನ್ನು ಬಿಡದೆ ಇನ್ನೂ ಹಿಡಿದುಕೊಂಡಿದ್ದ. ಶಕುಂತಲಳ ಮೃದು ಮುಂಗೈಯನ್ನು ಮುದ್ದಿಸಿ ಕಣ್ಣಿಗೆ ಒತ್ತಿಕೊಂಡ.

ಶಕುಂತಲ ಭಾವಪರವಶಳಾಗಿದ್ದಳು. ಆತನ ಸ್ಪರ್ಶ ಹಿತಕರವಾಗಿತ್ತು.

ಶೀನಿ ಸಂಪೂರ್ಣವಾಗಿ ಸಂತೋಷಗೊಂಡಿದ್ದ. ಕಣ್ಣಲ್ಲಿ ತೃಪ್ತಿ ತುಳಕಿ ಮುಖದಲ್ಲಿ ಮಿಂಚಿತ್ತು.

"ಶಕುಂತಲಾ....! ಇಂದು ನನ್ನ ಕನಸು ನನಸಾಯಿತು .. !" ನುಡಿದ ತುಟಿ ಚುಂಬಿಸಲು ಮುಂದುವರಿಯಿತು.

ತನ್ನ ಎರಡು ಕೈಗಳಲ್ಲೂ ಅವಳ ತಲೆಯನ್ನು ಭದ್ರವಾಗಿ ಹಿಡಿದು ಮುಂದಕ್ಕೆ ಎಳೆದುಕೊಂಡ.

"ಶಕುಂತಲಾ....!" ತಂದೆ ಹಿಂದೆ ಕೂಗಿದರು. ದಿಗ್ಗನೆದ್ದು ನಿಂತಳು ಶಕುಂತಲ. ದೇಹ ನಡುಗಿತು. ಕಾಲು ಕುಸಿದು ಬಿತ್ತು. "ಅಣ್ಣಾ....!" ಏನನ್ನೊ ಆಶಿಸಿ ಹಾತೊರೆದಿದ್ದ ಬಾಯಿ ಕಂಪಿಸಿತು.

ತಂದೆಯ ಕಣ್ಣಲ್ಲಿ ಕಿಡಿ ಹಾರುತ್ತಿತ್ತು. ಸುಬ್ಬಣ್ಣ ನಿಸ್ತೇಜನಾಗಿ ಪಕ್ಕದಲ್ಲಿ ನಿಂತಿದ್ದ. ತಾಯಿ ಏನನ್ನು ಅರಿಯದೆ ನೀರವಳಾಗಿ ನಿಂತಿದ್ದಳು. ಶೀನಿ ರಗ್ಗನ್ನು ಕೊಡವಿ ಗಾಬರಿಯಿಂದ ಎದ್ದು ನಿಂತ.

ಒಮ್ಮೆಗೇ ಸುಖದ ನೌಕೆ ಬಿರುಗಾಳಿಗೆ ಹೋಯ್ದಾಡಿತು..

ಒಳಗೆ ಬಂದ ತಂದೆಯ ಹೆಜ್ಜೆಯ ಶಬ್ದ ತನ್ನ ಎದೆಯ ಮೇಲೆ ಇಟ್ಟ ಹಾಗೆ ತೋರಿತು ಶಕುಂತಳಿಗೆ. "ಶಕುಂತಲಾ....!" ಅವರ ಕೂಗಿ ಕೊಂಡ ಮನಸ್ಸು ಮುಂದೆ ಏನನ್ನು ನುಡಿಯದಾಗಿತ್ತು. ಕೈ ಹಿಡಿದು ಹೊರಗೆ ದಬ್ಬಿದ ರಭಸದಲ್ಲಿ ಮನದ ಗೊಂದಲವೆಲ್ಲಾ ತುಂಬಿತ್ತು. ತೂರಿ ಬಂತು ಶಕುಂತಲಳನ್ನು ಸುಬ್ಬಣ್ಣ ಸಾವರಿಸಿದ. ತಾಯಿ ಎದೆಯಲ್ಲಿ ಅವಳನ್ನು ಅವಚಿಕೊಂಡಳು.

"ಶೀನಿ....ಇನ್ನೂ ನೀನು ನಮ್ಮ ಮನೆಗೆ ಬರಕೂಡದು. ಇವತ್ತೇ ಕೊನೆ...."

"ಹೂಂ....! ಹೊರಡು...." ಅಲ್ಲಿ ನಿಲ್ಲದೆ ಹೊರಗೆ ಬಂದರು.

"ಶೀನಿಗೆ ಇನ್ನು ಪೂರ್ತಿಯಾಗಿ ಖಾಯಿಲೆ ವಾಸಿಯಾಗಿಲ್ಲ." ತಾಯಿ ತೊದಲಿದಳು.

"ವಾಸಿಯಾಗಿಲ್ಲ....ವಾಸಿಯಾಗಿಲ್ಲ........ವಾಸಿಯಾಗ್ದೆ ಇದ್ರೆ........ ನಾನೇನು ಮಾಡ್ಲಿ....ವಾಸಿ ಆಗೋದಾದ್ರೆ ಆಗುತ್ತೆ...." ಸಿಟ್ಟಿನಿಂದ ನುಡಿದರು. "ವಾಸಿಯಾಗ್ಲಿ....ಆಗ್ದೇ ಇರ್ಲಿ....ನಮ್ಮನೆಗಂತೂ ಬರಕೂಡದು...."

ಶೀನಿಗೆ ಒಂದೂ ಅರ್ಥವಾಗಿರಲಿಲ್ಲ. ಒಮ್ಮೆಗೆ ಆದ ಆಘಾತದಿಂದ ನಿಸ್ತೇಜನಾಗಿ ನೀರವನಾಗಿ ನಿಂತುಕೊಂಡಿದ್ದ.

ತಂದೆಯ ಮಾತನ್ನು ಕೇಳಿ ಶಕುಂತಲ "ಅಣ್ಣಾ...." ಅಂದಳು. ಕಣ್ಣಲ್ಲಿ ನೀರು ಸುರಿಯುತ್ತಿತ್ತು.

ರಾಯರು ಬೆನ್ನ ಹಿಂದೆ ಕೈಯನ್ನು ಕಟ್ಟಿ ನಾಲ್ಕು ಹೆಜ್ಜೆ ಹಿಂದಕ್ಕೂ ಮುಂದಕ್ಕೂ ಸುತ್ತಾಡಿದರು. ಶೀನಿಯನ್ನೊಮ್ಮೆ, ಮಗಳನ್ನೊಮ್ಮೆ ನೋಡಿದರು.

"ಶೀನಿ ಖಾಯಿಲೆ ವಾಸಿಯಾಗೊವರ್ಗೂ....ಸುಬ್ಬಣ್ಣ ನೋಡಿಕೊಳ್ತಾನೆ ...ನಾನು ನೋಡಿಕೊಳ್ತೀನಿ....ಅವನು ನಮ್ಮನೆಯಲ್ಲಿರೋದು

ಬೇಡ...ಶಕುಂತಲ ಅವನ ಹತ್ತಿರ ಸುಳಿಯೋದು ಬೇಡ....ಸಲುಗೆ ಕೊಟ್ಟು ದೊಡ್ಡ ತಪ್ಪು ಮಾಡಿದೆ." ಪೂರ್ತಿಯಾಗಿ ಏರಿದ್ದ ಸಿಟ್ಟು ಒಮ್ಮೆಗೆ ಬಳಲಿದ ಮುಖ ಕಂಡು ಇಳಿಯಿತು. ಹಾಗೆಯೇ ನೆಲದ ಮೇಲೆ ಕುಕ್ಕರು ಬಿದ್ದರು....."....ಹೋಗು....ಶೀನಿ....ನಿನ್ಗೆ ಅದೃಷ್ಟ ಚೆನ್ನಾಗಿಲ್ಲ....ಹೋಗು ....ಹೋಗು. ಮನೆಗೆ ಹೋಗು. ಏನಾದ್ರೂ ಬೇಕಾದ್ರೆ ನಾನು ತಂದು ಕೊಡ್ತೇನಿ....ಸುಬ್ಬಣ್ಣಾ ಇದ್ದಾನೆ." ನುಡಿದರು.

ಶೀನಿ ಮೌನವಾಗಿ ಸುತ್ತಲೂ ನೋಡಿದ.

" ನಮ್ಮ ಅದೃಷ್ಟವೂ ಚೆನ್ನಾಗಿಲ್ಲ ...ಮುಖ್ಯವಾಗಿ...." ಪುನಃ ರಾಯರೆ ನುಡಿದು ತಲೆ ಎತ್ತದೆ ತಮ್ಮ ರೂಮಿಗೆ ಹೊರಟು ಹೋದರು.

ಸೀತಮ್ಮ ಶೀನಿಯ ಮುಖವನ್ನು ನೋಡಿದಳು. ಏನೂ ಹೇಳುವಂತಿರ ಲಿಲ್ಲ. ತಲೆ ತಗ್ಗಿಸಿ ಬಿಕ್ಕಳಿಸಿದರು.

" ನಮಸ್ಕಾರ....ಸೀತಮ್ಮ ...ನಮಸ್ಕಾರ....ತಾಯಿಗಿಂತ ಹೆಚ್ಚಾಗಿ ನನ್ನ ನೋಡಿಕೊಂಡ್ರಿ...." ಕಾಲು ಮುಟ್ಟಿ ನಮಸ್ಕರಿಸಿದ. "ನೀವು....ನನ್ನ ಬದುಕಿಸದೇ ಇದ್ರೆ ...ಚೆನ್ನಾಗಿತ್ತು...." ಎದ್ದು ನಿಂತು ಶಕುಂತಲಳ ನೊಂದ ಮುಖವನ್ನು ಒಂದುಕ್ಷಣ ದೃಷ್ಟಿಸಿದ. "ನನ್ನ ಜ್ಞಾಪಕ ಇರ್ಲಿ ....ಶಕುಂತಲ..." ನುಡಿದು ಹೊರಗೆ ಹೊರಟುಬಿಟ್ಟ. ಬಾಗಿಲ ಬಳಿಗೆ ಹೋಗಿ ಇನ್ನೊಮ್ಮೆ ತಿರುಗಿ ನೋಡಿ ಹನಿದುಂಬಿದ್ದ ಮುಖವನ್ನು ಕೊಡವಿದಾಗ ನಾಲ್ಕು ಹನಿ ನೀರು ಕೆಳಗೆ ತೊಟ್ಟಿಕ್ಕಿತು.

ಜೋರಾಗಿ ಕಾಲು ಹಾಕಿ ಗೇಟಿನ ಬಳಿಗೆ ಹೋದ. " ಅದೃಷ್ಟ....! ಅದೃಷ್ಟ....! !" ಅಲ್ಲಿ ನಿಂತು ವಿಕಾರವಾಗಿ ಗಹಗಹಿಸಿದ. ಇನ್ನೊಮ್ಮೆ ತಿರುಗಿ ನೋಡಿ ಜೋರಾಗಿ ನಡೆದುಬಿಟ್ಟ.

" ಶೀನೂ ..!" ಶಕುಂತಲ ಕೂಗಿ ತಾಯನ್ನು ಬಾಚಿ ತಬ್ಬಿಕೊಂಡಳು ....ತಾಯಿ ಕುಕ್ಕರುಬಿದ್ದಳು.

ಸುಬ್ಬಣ್ಣನ ಕಣ್ಣು ಹನಿಯಾಡುತ್ತಿತ್ತು.

" ಪಾಪ ...!....ಇವನು ಬಾಳ ಒಳ್ಳೇನಾಗಿದ್ದ....ಅದೇನು ಬಂತೊ ಏನೊ ಇದ್ದಕ್ಕಿದ್ದಂತೆ ಬದಲಾಯ್ಸಿಹೋದ....ಸ್ನೇಹಿತ ಅಂತ ನಾನೂ ಬಾಳ ಹೇಳ್ದೆ. ನನ್ನ ಮಾತೂ ಕೇಳಲಿಲ್ಲ. ಕುಡೀತಾನೆ....! ಎಲ್ಲಾ ಮಾಡ್ತಾನೆ. ಹಾಳು ಡಿಪಾರ್ಟ್‌ಮೆಂಟ್ ಅಂತೋದು ಯಾರೇನು ಮಾಡ್ತಾರೆ. ಸಹವಾಸ ಜೇರೆ ಕೆಟ್ಟುಹೋಯ್ತು. ನಾನು ಹೇಳಿ ಹೇಳಿ ಸಾಕಾಗಿ ಅವನ ಜೊತೆ ಸೇರೋದು ಬಿಟ್ಟೆ ...ಪಾಪ ಈ ಚಿಕ್ಕ ವಯಸ್ಸಿನಲ್ಲೆ ಹಾಳಾಗಿ ಹೋದ.

ಕೆಟ್ಟ ರೋಗ....! ಇದು ಜನ್ಮಕ್ಕೆ ಹತ್ತಿದ್ದು. ಹಳೆ ಸ್ನೇಹಿತ ಅಂತ ನಾನೂ ನನ್ನ ಕೈಲಾದ್ದನ್ನೆಲ್ಲಾ ಮಾಡ್ತಾ ಇದ್ದೇನೆ....ನಾಲ್ಕು ದಿನ ವಾಸಿಯಾದ ಹಾಗೇಕಂಡ್ರೆ ಐದನೇ ದಿನ ಪುನಃ ಕೆರಳುತ್ತೆ....ಇನ್ನೂ ಪಾಪ ಮದ್ವೆ ಕೂಡ ಇಲ್ಲ...ಇವನ್ನ....ಇವನ ಹಣ ನೋಡಿ ಯಾವ ಹುಡುಗಿ ಮದ್ವೆ ಆಗೋಕ್ಕೆ ಹುಟ್ಟಿದ್ದಾಳೊ ಪಾಪ ಮಾಡಿ ...? ಮಕ್ಕಳನ್ನು ಪಡೆಯುವ ಭಾಗ್ಯವಂತೂ ಇಲ್ಲ....ಆದರೂ ಕಂಡಿತ ಬದುಕಲ್ಲ....ಪಾಪ....ನೋಡಿ ಹ್ಯಾಗಿದೆ ಸಹವಾಸ ದೋಷ...ಈ ವಯಸ್ನಲ್ಲೆ ಎಲ್ಲಾ ಮುಗ್ಸಿಬಿಟ್ಟಿದ್ದಾನೆ....ಇವನಂತೋರನ್ನು ನೋಡಿ ನೋಡಿ ನಂಗೆ ಸಾಕಾಗಿದೆ. ಹಾಳು ಸರಿಯಾದ ವಯಸ್ನಲ್ಲಿ ಮದ್ವೆ ಮಾಡವೆ ಇದ್ರೆ ಆಗೋದೇ ಇದು. ಭವಿಷ್ಯದ ಯೋಚ್ನೆ ಇಲ್ದೆ ಹಾಳು ಕೆಟ್ಟ ಹೆಂಗ್ಸರ ಹತ್ರ ಹೋಗಿ ಹಾಳಾಗಿ ಹೋದ....!" ಶೀನಿಯ ಡಾಕ್ಟರು ಬೆಳಗ್ಗೆ ಸುಬ್ಬಣ್ಣ ಔಷಧ ತರಲು ಹೋಗಿದ್ದಾಗ ಪರದೆಯ ಹಿಂದೆ ಔಷಧಿಯನ್ನು ಮಾಡುತ್ತ ಮೆಲ್ಲಗೆ ಕಾಂಪೌಂಡರ್ ಕೈಲಿ ನುಡಿದಿದ್ದರು. ಸುಬ್ಬಣ್ಣ ಒಡೆದಿದ್ದ ತುಟಿಗೆ ಸ್ವಲ್ಪ ವ್ಯಾಸ್‌ಲೈನ್ ಕೇಳಲು ಒಳಗೆ ಹೋಗಬೇಕೆಂದಿದ್ದವನು ಅಲ್ಲೇ ನಿಂತು ಎಲ್ಲವನ್ನು ಆಲಿಸಿದ್ದ.

"ಮಕ್ಕಳು ಆಗೊಲ್ಲ. ಆದರೂ ಉಳಿಯಲ್ಲ..." ಇದು ರಾಯರನ್ನು ಸಂಪೂರ್ಣವಾಗಿ ಬಳಲಿಸಿತ್ತು. ಗಂಟೆಗಟ್ಟಲೆ ಯೋಚಿಸಿ ತಲೆ ಕೆಡಿಸಿಕೊಂಡರು. ಸುಬ್ಬಣ್ಣ ಬಹು ವಿಷಾದದಿಂದ ಬಹಳ ಯೋಚಿಸಿ ರಾಯರಿಗೆ ತಿಳಿಸಿದ್ದ. ಸುಬ್ಬಣ್ಣನ ಮನಸ್ಸೂ ಇದನ್ನು ಕೇಳಿದಾರಭ್ಯ ಬಹುವಾಗಿ ನೊಂದಿತ್ತು.

ಮಕ್ಕಳು....! ...ಮಕ್ಕಳು....!! ಇದೊಂದೆ ರಾಯರು ಜೀವನದಲ್ಲಿ ಅತಿಯಾಗಿ ಬಯಸಿದ್ದುದು. ಇದ್ದ ಒಬ್ಬ ಮಗಳ ಸೌಖ್ಯಕ್ಕಾಗಿಯೇ ಅವರು ಎಲ್ಲವನ್ನು ಸಹಿಸಿ ಕೆಚ್ಚೆದೆಯಿಂದ ಕುಳಿತಿದ್ದರು. ಅವರಿಗೇ ಇದು ಬಹುದಿನಗಳ ಮೇಲೆ ಲಭ್ಯವಾಗಿತ್ತು. ಇವಳೊಬ್ಬಳಿಂದ ವಂಶವೃಕ್ಷ ಚಿಗುರುವ ಹೊಂಗನಸನ್ನು ಕಂಡು ಅದರ ಬಯಕೆಗಾಗಿ ಜೀವ ಹೊತ್ತು ಬದುಕಿದ್ದರು. ಗಂಡನ ಮನೆಯಿಂದ ಮಗಳು ಬರಡಾಗಿ ಹಿಂತಿರುಗಿದಾಗಲೇ ಜೀವನ ನಿಸ್ಸಾರವಾಗಿ ಕಂಡಿದ್ದರೂ ತಾಯಿಯ ಮಾತು ಸ್ವಲ್ಪ ಧೈರ್ಯ ನೀಡಿತ್ತು. ಸುಬ್ಬಣ್ಣ ಪೂರ್ಣ ಬೆಂಬಲ ಕೊಟ್ಟಿದ್ದ.

ಶಕುಂತಲಳ ಜೀವನದಲ್ಲಿ ಅದೇ ಇಲ್ಲವಾದರೆ....?! ಸಹಿಸಲಾರದ ನೋವಿನ ವಿಷಯ. ಇದೊಂದನ್ನು ಅವರು ಎಂದೂ ಆಗಬಯಸುವುದಿಲ್ಲ.

ಇದೊಂದನ್ನುಳಿದು ಅವರದೆನ್ನುವ ಮತ್ತಾವ ಆಸೆಯೂ ಅವರ ಬಾಳ್ವಿಗೆ ಬೆಂಬಲವನ್ನಿತ್ತಿಲ್ಲ.

ಹಾತೊರೆದ ಹಂಬಲ ಬಾಯಿ ತಂಬುಲವಾದರೆ ...! ? " ಇಲ್ಲ.... ಇಲ್ಲ .... ಆಗಗೊಡಲಾರೆ ...!" ರಾಯರು ಬಹು ಹೊತ್ತು ಯೋಚಿಸಿದುದರ ಫಲವಾಗಿ ನುಡಿದು ಎದ್ದರು.

" ಮಗೂ ... ಮಗೂ .... ಶಕುಂತಲಾ....!" ಎದ್ದು ಹೋಗಿ ಮಗಳನ್ನು ಎದೆಗಪ್ಪಿ ಮುದ್ದಿಸಿದರು.

ಈಗ ಆದ ಘಟನೆ ಅವರ ಕಲ್ಪನೆಗೂ ಎಟಕದ ವಿಷಯವಾಗಿತ್ತು. ಆಗಲೇ ಬೇಕಾದ ಅಗತ್ಯ ಕಂಡಿತು. ಆಗಿಸಿಯೇ ಬಿಸಿಯುಸಿರನ್ನು ಬಿಟ್ಟರು. ಮನಸ್ಸು ಬಹುವಾಗಿ ಅಘಾತಗೊಂಡಿತ್ತು.

ಶಕುಂತಲ ಬಹು ಹೊತ್ತು ಯೋಚಿಸಿದಳು. ಏನೂ ಅರ್ಥವಾಗಲಿಲ್ಲ. ತಂದೆ ಶೀನಿಯೊಡನೆ ಎಷ್ಟು ಸಲಿಗೆಯಿಂದ ವರ್ತಿಸಿದರೂ ಎಂದೂ ಏನೂ ಅನ್ನುತ್ತಿರಲಿಲ್ಲ. ಇಂದೇಕೆ ಹೀಗೆ ರೇಗಿದರು....? !

' ಇನ್ನು ನೀನು ನಮ್ಮ ಮನೆಗೆ ಬರಕೂಡದು;' 'ಶಕುಂತಲ ಅವನ ಹತ್ತಿರ ಸುಳಿಯೋದು ಬೇಡ ...'

ಕಾರಣ ...?

ಎಂದೂ ಸಿಟ್ಟಾಗದ ತಂದೆ ಶೀನಿಯ ಮೇಲೆ ಅಷ್ಟು ರೇಗಲು ಕಾರಣ....? ಅದೂ ಖಾಯಿಲೆಯಿಂದ ಸಂಪೂರ್ಣವಾಗಿ ಚೇತರಿಸಿಕೊಳ್ಳದೆ ಇರುವಾಗ .. !

ಬಿಡಿಸಲಾರದ ಸಮಸ್ಯೆ.

ತಂದೆ ಮನಸ್ಸಿನ ಅಸ್ಥಿರತೆಯಿಂದ ಸಿಟ್ಟಾದಾಗ ಸುಬ್ಬಣ್ಣ ಸಮಾಧಾನವನ್ನು ಹೇಳಬೇಕಿತ್ತು. ಅವನು ಮಾತೇ ಆಡಿರಲಿಲ್ಲ. ಮೂರ್ತಿವೆತ್ತ ಮೌನವಾಗಿ ನಿಶ್ಚೇಷ್ಟಿತನಾಗಿ ನಿಂತಿದ್ದ. ತಾಯಿ ಕಣ್ಣೀರು ಕರೆದಿದ್ದಳು. ಎಂದೂ ಇಲ್ಲದ ಈ ಭಾವ ವೈವಿಧ್ಯ ಇಂದು ತೋರಲು ಕಾರಣ....?

ಹೊಳೆಯಲಿಲ್ಲ.

ಮಂಚದಮೇಲೆ ಬಿದ್ದು ಹೊರಳಾಡಿದಳು. ಉಸಿರು ಕಟ್ಟುವಂತೆ ರಗ್ಗನ್ನು ಹೊದೆದು ಮಲಗಿದಳು. ಮಂಚದಿಂದ ಕೆಳಗೆ ಬೀಳುವಂತೆ ರಗ್ಗನ್ನು ಒದೆದು ಎದ್ದು ಕುಳಿತಳು. ತಲೆಯಮೇಲೆ ಕೈ ಇಟ್ಟುಕೊಂಡಳು. ಪುನಃ ಮಲಗಿ ಪುನಃ ಎದ್ದಳು. ರೂಮಿನಲ್ಲಿ ಬಹು ಹೊತ್ತು ದೀಪ ಹಚ್ಚದೆ ಅಂಧಕಾರದಲ್ಲೇ ಸುತ್ತಾಡಿದಳು. ಕಿಟಕಿಯ ಬಳಿಯಲ್ಲಿ ನಿಂತು ಕಾಲು ಸೋಲುವವರೆಗೆ ಹೊರಗಿನ ಶೂನ್ಯವನು ಈಕ್ಷಿಸಿದಳು. ಏನೂ ಸಮಸ್ಯೆ ಬಗೆ ಹರಿಯಲಿಲ್ಲ.

'ಅಳುವ ಕಾಲ ಮುಗಿದು ಹೋಯಿತು ಅಲ್ಲವೆ....ಶಕುಂತಲ....?' ಶೀನಿ ಪ್ರಶ್ನಿಸಿದ್ದ ಪ್ರಶ್ನೆ ಈಕೆಗೆ ಉತ್ತರವಾಗಿ ಕಂಡಿತ್ತು. ಪ್ರಶ್ನೆಯಾಗಿ ಆಗ ತೋರೇಇರಲಿಲ್ಲ. ಆದರೆ....ಈಗ...! ಯೋಚಿಸದಾದಳು ಶಕುಂತಲ. ತಲೆ ಕೊಡವಿ ಎರಡು ಕೈಗಳಲ್ಲೂ ಮುಖವನ್ನು ಮುಚ್ಚಿಕೊಂಡಳು. ಗೊಳೊ ಎಂದು ಬಹು ಹೊತ್ತು ಅತ್ತಳು. ನಿನ್ನೆಯ ಶೀನಿಯ ಸಾನಿಧ್ಯ ಜೀವನದಲ್ಲಿ ಎಂದೂ ಅನುಭವಿಸದ ಒಂದು ಅನಿರ್ವಚನೀಯ ಆನಂದ ಕೊಟ್ಟಿತ್ತು. ಶರೀರ ಇನ್ನು ಅವನ ಸಾನ್ನಿಧ್ಯ ಬಯಸಿತ್ತು. ಆಜೀವ ಪರ್ಯಂತ ಅಂತಹ ರಸ ಸಮುದ್ರದಲ್ಲಿ ಇರಲು ಬಯಸಿದ್ದಳು. ರಸ ಗಳಿಗೆಯೂ ವಿಷಗಳಿಗೆಯಾಗಿತ್ತು. ಇದಕ್ಕೆ ಕಾರಣ....? ದುರಾದೃಷ್ಟವೆ....? ಹಿಂದಿನ ಜನ್ಮದ ಪಾಪದ ಪ್ರತಿ ಕ್ರಿಯೆಯೋ....? ಅಥವ ತಾನು ಕೇಳಿ ಬಂದಿರುವುದು ...ಇಷ್ಟೇನೇ....!?

"ನನ್ನ ಜ್ಞಾಪಕ ಇರ್ಲಿ....ಶಕುಂತಲಾ....!" ಚಿಟ್ಟನೆ ಚೀರಿದಳು. ಶೀನಿ ಹೇಳಿದ್ದ ಮಾತು ಎದೆಯನ್ನು ಇರಿಯಿತು. ಶೀನಿಯನ್ನು ಮರೆಯಲು ಸಾಧ್ಯವೆ....? ಮರೆಯುವೆ ಏನು....? ಅವನಿಗೆ ನಾನು ಯಾವ ಸುಖವನ್ನು ಕೊಟ್ಟಿದ್ದೇನೆ....! ಅವನ ಬಾಳ್ವೆಯನ್ನು ಇನ್ನು ಬರಡಾಗಿರಿಸಿದ್ದೇನೆ....!

ಈ ಯೋಚನೆ ಬಂದೊಡನೆ ಏನೊ ಆಶಂಕೆ ತಲೆದೋರಿ ಮುಖ ವಿವರ್ಣವಾಯಿತು. ದೇಹಾದ್ಯಂತ ಕಂಪಿಸಿತು.

ಅಶಾಂತವಾಗಿ ನಿರಾಶೆಯ ದ್ಯೋತಕವಾಗಿದ್ದ ಅವನ ಕಣ್ಣುಗಳು ಕಣ್ಣ ಮುಂದೆ ಸುಳಿದಾಗ ಅಶಾಂತಳಾಗಿ ಎದ್ದು ನಿಂತಳು.

'ಶೀನಿ ಅನುಭವಿಸದ್ದೇ ಸಾಕು. ಇನ್ನೂ ಅವನಿಗೆ ಹೆಚ್ಚು ದುಃಖ ಕೊಡಲಾರೆ...' ತನ್ನಲ್ಲೆ ನುಡಿದುಕೊಂಡು ದೀಪ ಹಚ್ಚಿ ಗಡಿಯಾರ ನೋಡಿದಳು. ಬೆಳಗಿನ ಝಾವದ ಐದುಗಂಟೆ ತೋರಿಸುತ್ತಿತ್ತು. ತನ್ನ ಪೆಟ್ಟಿಗೆ ತೆಗೆದು ಚಿನ್ನದ ಸರವನ್ನು ಕೊರಳಿಗೆ ಹಾಕಿಕೊಂಡಳು. ಎರಡು ಉಂಗುರಗಳನ್ನು ಬೆರಳಿಗೆ ಇಟ್ಟುಕೊಂಡಳು. ಕೈಚೀಲದೊಳಗೆ ಸೀರೆಯ ಮಡಿಕೆಯಿಂದ ಏನೊ ಕಾಗದಗಳ ಚಿಕ್ಕ ಗಂಟನ್ನು ತೆಗೆದು ಇಟ್ಟುಕೊಂಡಳು.

ಮನದಲ್ಲಿ ಏನೊ ನಿರ್ಧಾರ ಮೂಡಿತ್ತು. ಕಣ್ಣು ಇನ್ನೂ ಅಶಾಂತವಾಗಿತ್ತು.

ದೀಪವನ್ನು ಆರಿಸಿ ರೂಮಿನಿಂದ ಹೊರಗೆ ಬಂದಳು. ಸುಬ್ಬಣ್ಣ ಹಾಲಿನಲ್ಲಿ ಮಲಗಿದ್ದ. ತಂದೆ, ತಾಯಿ ಒಳಗೆ ಮಲಗಿದ್ದರು. ಇನ್ನೂ ಗೊರಕೆ ಹೊಡೆಯುತ್ತಿದ್ದರು. ಬಾಗಿಲಿಗೆ ಬಂದ ಶಕುಂತಲ ಅಲ್ಲೇ ಒಂದು ಕ್ಷಣ ನಿಂತಳು. ಪುನಃ ರೂಮಿಗೆ ಹೋಗಿ ಅಂಜುತ್ತ ಅಂಜುತ್ತ

ದೀಪವನ್ನು ಹಾಕಿ ಕನ್ನಡಿಯಲ್ಲಿ ತನ್ನ ಪ್ರತಿಬಿಂಬವನ್ನು ನೋಡಿಕೊಂಡಳು. ಮುಂಗುರಳನ್ನು ತಿದ್ದಿ ಹುಸಿಯಾಗಿ ನಕ್ಕಳು. ಪುನಃ ದೀಪವನ್ನು ಆರಿಸಿ ಹೊರಗೆ ಬಂದಳು. ಕ್ಷಣ ಕ್ಷಣಕ್ಕೆ ಮನದ ನಿರ್ಧಾರ ನಿರ್ಬಲವಾಗುತ್ತಿರುವಂತೆ ಆಕೆಗೆ ತೋರಿತು.

'ನಿನಗಾಗಿ ...ಶಕುಂತಲ ನಾನು ಬದುಕಿರೋದು ಅಜ್ಜಿಗೆ ಕೊಟ್ಟ ಭಾಷೆ ತೀರಿಸಿದರೆ....ನಾನು ಮುಕ್ತನಾದೆ. ಇನ್ಯಾವ ಆಸೆಯೂ ನನ್ನದಾಗಿ ಇಲ್ಲ....ಶಕುಂತಲ ...' ಕಣ್ಣೀರು ಸುರಿಸಿ ಎದೆಗಪ್ಪಿ ನುಡಿದಿದ್ದರು ತಂದೆ.

" ಅಣ್ಣಾ ....ಅಮ್ಮಾ....ನನ್ನನ್ನು ಕ್ಷಮಿಸಿ....ಅಜ್ಜಿಯ ಮಾತನ್ನೂ ನಾನು ನಡೆಸ್ತೇನಿ....ನಿಮ್ಮ ಮಾತನ್ನು ನಡೆಸಲಾರೆ....ಕ್ಷಮಿಸಿ...." ಮೆಲ್ಲಗೆ ನುಡಿದು ರೂಮಿನತ್ತ ನೋಡಿ ಬೀದಿಯ ಬಾಗಿಲನ್ನು ಶಬ್ದವಾಗದೆ ತೆಗೆದು ಹೊರಗೆ ಬಂದಳು.

ಮನಸ್ಸು ಮುಂದೆ ಹೋಗಲು ಬಯಸುತ್ತಿದ್ದರೂ ಕಾಲುಗಳು ಹಿಂದೆ ಎಳೆಯುತ್ತಿದ್ದವು.

ಸುಬ್ಬಣ್ಣ ಬಾಗಿಲಿನ ಕಡೆಗೆ ನಿದ್ದೆಗಣ್ಣಿನಲ್ಲಿ ಹೊರಳಿದ. ಶಕುಂತಲ ಹೊರಗೆ ಓಡಿದಳು.

ಶೀನಿಯ ಮನೆಯ ಬಾಗಿಲಿಗೆ ದೊಡ್ಡ ಬೀಗಮುದ್ರೆ ಬಿದ್ದಿತ್ತು.

ಶಕುಂತಲ ಯಾವುದನ್ನು ಆಗಬಾರದೆಂದು ಬಯಸಿದ್ದಳೊ ಅದು ಆಗಿ ಹೋಗಿತ್ತು. ಮನದ ತಡವಾದ ನಿರ್ಧಾರದಿಂದ ಬೇಸತ್ತು ಅಲ್ಲೇ ಸ್ವಲ್ಪ ಹೊತ್ತು ಕುಳಿತು ಮನೆಗೆ ಬಂದಳು.

ಶೀನಿ ಕೆಲಸಕ್ಕೆ ರಾಜೀನಾಮೆಯನ್ನು ಕೊಟ್ಟು ರಾತ್ರಿಯೇ ಹೊರಟು ಹೋಗಿದ್ದ. ಇದು ಮೂರನೆ ದಿನ ಅವಳಿಗೆ ಗೊತ್ತಾದರೂ ಆಗಲೆ ಇದನ್ನು ಯೋಚಿಸಿ ನಿರ್ಧರಿಸಿದಳು.

" ಅಯ್ಯೊ....! ಶಕುಂತಲ....ಎಲ್ಲಿ ಹೋಗಿದ್ದೆಯೇ ನನ್ನ ಕಂದ....? ಎಲ್ಲಿ ಹೋದ್ಯೊ ಅಂತ ನಂಗೆ ಗಾಬರಿ ಆಗಿಹೋಗಿತ್ತು....ಚಿನ್ನಿ....ಹೊರಗೆ ಹೋಗೋಳು ಹೇಳಿ ಹೋಗಬಾರದಾಗಿತ್ತೇನೆ....!" ಬಂದವಳೆ ಮಗಳನ್ನು ಅಪ್ಪಿಕೊಂಡು ಬಹಳ ವರ್ಷಗಳ ನಂತರ ಕಂಡವಳಂತೆ ಅವಳನ್ನು ಮುದ್ದಿಸಿದಳು ತಾಯಿ. " ಇನ್ನು ನನ್ನ ಮನೆ ಬಿಟ್ಟು ಹೊರಗೆ ಹೋದ್ರೆ ನನ್ನಾಣೆ.... ನನ್ನ ಕೊರಳಾಗೆ...." ಮಗಳ ಕೊರಳ ಸುತ್ತ ಕೈಯನ್ನು ಸುತ್ತಿ ಹಣೆಗೆ ಮುತ್ತಿಟ್ಟಳು.

" ಮಗೂ....ಶಕುಂತಲ....ನನ್ನ ಎದೆಯೇ ಒಡೆದು ಹೋಗಿತ್ತು ಮಗು ....ಎಲ್ಲಿ ಹೋದ್ಯೊ ಅಂತಾ....? ಇನ್ನು ನೀನು ಸ್ವಲ್ಪ ಹೊತ್ತು ಬರ್ದೆ ಇದ್ರೆ

ನಾನು ಏನಾಗ್ತಾ ಇದ್ದನೊ ಮಗು ...ನೀನು ಮನಸ್ಸಿಗೆ ಹಚ್ಚಿಕೊಳ್ಳಬೇಡ ಸುಮ್ನಿರು....ಶಕುಂತಲಾ....ನಿನ್ನೆಯ ನನ್ನ ಕಾರ್‍ಯದಿಂದ ನಿನ್ನ ಮನಸ್ಸಿ ನೋವಾಗಿದೆ ನಂಗೊತ್ತು ...ಆದ್ರೆ....!ಆದ್ರೆ ...!! ...ಹೋಗ್ಲಿ ಸುಮ್ನಿರು ಶಕುಂತಲ....ನನ್ನ ಬಿಟ್ಟು ಎಲ್ಲಾರೂ ಹೋದ್ರೆ ಪ್ರಾಣ ಕಳಕೊಂಡುಬಿಡ್ತೀನಿ ....” ಶಕುಂತಲಳ ತಲೆಯನ್ನು ನೇವರಿಸಿದರು. “ನಾನು ನಿನ್ನ ಎಷ್ಟುಪ್ರೀತಿ ಸ್ತೀನಿ ನಿಂಗೆ ಗೊತ್ತಿಲ್ವೆ....ಮಗು....!” ಬರಸೆಳೆದು ಅಪ್ಪಿಕೊಂಡರು ತಂದೆ.

ಶಕುಂತಲೆ ನಕ್ಕಳು.

“ನಾನು ...ಎಲ್ಲೂ ಹೋಗಲ್ಲ .. ಎಲ್ಲೂ ಹೋಗಲ್ಲ ...” ಪುನಃ ಹಲ್ಲು ಕಿರಿದಳು. “ಎಲ್ಲಾರೂ ಒಳ್ಳೇ ಗಂಡು ಹೊಂಚಿ ನಿಂಗೆ ಮದ್ವೆ ಮಾಡ್ತೀನಿ ....ನಿನ್ನ ಸುಂದರ ಮುಖ ನೋಡಿ ಯಾರಾದ್ರೂ ಮದ್ವೆ ಆಗ್ತಾರೆ....ವಿಧ ವಾವಿವಾಹವೇ ಆಗುತ್ತಂತೆ ಅಂತೋದ್ರಲ್ಲಿ ನಿನ್ನ ಮದ್ವೆ ಅಗ್ಬೇಕಾದ್ರೆ.... ಕಣೀ ಕೇಳಬೇಕೆ....?....ಅಹಹ....! ನಿನ್ನ ಮದ್ವೆ ಆಗಬೇಕಾದ್ರೆ ಪುಣ್ಯ ಮಾಡಿರಬೇಕು.......ಮದ್ವೇನೂ ಆಗುತ್ತೆ....ನೀನೂ ಸುಖವಾಗಿರ್ತೀಯ” ರಾಯರು ಮಗಳ ಕೆನ್ನೆಯನ್ನು ಸವರಿದರು.

“ಹೌದು....!ಹೌದು .. !” ಶಕುಂತಲ ನಕ್ಕಳು. ಬಾಯಿ ಬಿರಿಯ ದೊಡ್ಡದಾಗಿಸಿ ನಕ್ಕಳು.

“ಮದ್ವೇನೂ .. ಆಗುತ್ತೆ .. ಸುಖವಾಗೂ ಇರ್ತೀನಿ... ” ತಂದೆಯನ್ನು ತಬ್ಬಿಕೊಂಡಳು.

“ಹೆ...! ಸುಖ ...!! ಅಹಹ....! ಕಣ್ಣಲ್ಲಿ ಬಂದಿದ್ದ ಹನಿ ಬೆರಳಿನಿಂದ ತಂದೆಯ ಮುಖಕ್ಕೆ ಚಿಮ್ಮಿ ಗಹಗಹಿಸಿದಳು.

ರೂಮಿಗೆ ಓಡಿಹೋಗಿ ಬಾಗಿಲನ್ನು ಹಾಕಿಕೊಂಡಳು.

“ನಿನಗೋಸ್ಕರ ನಾನು ಬದುಕಿರೋದು ಶಕುಂತಲಾ....” ರಾಯರು ನಿಂತಲ್ಲೆ ಕೂಗಿದರು

“ಅಳಬೇಡ ಶಕುಂತಲ ..ಅಳೊ ಅಂತೋದು ನಿಂಗೇನೂ ಆಗಿಲ್ಲ ...!” ತಾಯಿ ಬಾಗಿಲ ಬಳಿ ನಿಂತು ಬಾಗಿಲನ್ನು ತಟ್ಟಿ ನುಡಿದಳು.

“ಅಳೊ ಅಂತೋದು ...ನಂಗೇನೂ ಆಗಿಲ್ಲ....ನಂಗೇನೂ ಆಗಿಲ್ಲ ಆಗಿಲ್ಲ....ಆಗಿದೆ....ಎಲ್ಲಾ ಆಗಿದೆ—ಏನಾಗಬೇಕು?”

ಒಳಗೆ ವಿಕಟವಾದ ನಗುವಿನ ಅಲೆಯೆದ್ದಿತು.

ವಿಕಾರವಾದ ನಗು; ಕಲ್ಲನ್ನು ಕರಗಿಸುವ ನಗು ; ಎದೆಯನ್ನು ಬಿರಿಸುವ ನೋವು ತುಂಬಿದ ನಗು.

ಅದು ಥಟ್ಟನೆ ನಿಂತು ಹೋಯಿತು !